ಮಸ್ವಾಮ್ಯೆ

ಯಂಗಾರ್ಯರಿಂದ ಬರೆಯಲ್ಪಟ್ಟುದು.

---

ಮೈಸೂರು.

ಕೃಷ್ಣರಾಜ ವಾಣೀವಿಲಾಸ ಪ್ರೆಸ್ಸಿನಲ್ಲಿ ಮುದ್ರಿತವಾದುದು.

೧೯೨೨,



ಕ್ರಯ ರೂ. 1—0—0



ಪರಿತ್ರಾಣಾಯ ಸಾಧೂನಾಂ ವಿನಾಶಾಯಚ ದುಷ್ಕೃತಾಂ। ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ ॥

# ಪ್ರಸ್ತಾವನೆ.

ನಮ್ಮ ಮಹಾಭಾರತಸಂಗ್ರಹದಲ್ಲಿ ಇದು ಐದ್ದನೆಯ ಪರ್ವವು. ಗೆ ಆದಿಪಂಚಕವು ಪೂರಯಿಸಿತು. ಯುದ್ಧಪಂಚಕದ ಮ್ಯಾನ್ಯು ಪ್ಟು ಸಿದ್ಧವಾಗಿದೆ. ಉಳಿದ ಎಂಟು ಪರ್ವಗಳನ್ನೂ ಜಾಗ್ರತೆಯಲ್ಲಿ ದು ಮುಗಿಸಬೇಕೆಂಬ ಸಂಕಲ್ಪವನ್ನು ನೆರವೇರಿಸಲು ಭಗವಂತನ ನುಗ್ರಹವನ್ನು ಪ್ರಾರ್ಥಿಸುವೆನು.

ಈ ಭಾರತ ಕಥೆಯನ್ನು ಬರೆಯಬೇಕೆಂದು ನನ್ನನ್ನು ಪ್ರೇರೇಪಿಸಿ ರಾಳವಾದ ದ್ರವ್ಯಸಹಾಯ ಮಾಡಿದುದಲ್ಲದೆ ಬರೆದ ಮ್ಯಾನ್ಯುಸ್ಕ್ರಿಪ್ಟ ನ್ನೆಲ್ಲಾ ಆದರದಿಂದ ಕೇಳಿ ಪರಿಶೋಧಿಸಿ, ಗ್ರಂಥಮುದ್ರಣದ ಕಾರ್ಯ ನ್ನೂ ಕೈಕೊಂಡು ಸಹಾಯ ಮಾಡಿದ ರಾಜಸಭಾಭೂಷಣರಾದ ಮ॥ ರ್ಪೂರ ಶ್ರೀನಿವಾಸರಾಯರ ಉಪಕಾರವು ಚಿರಸ್ಮರಣೀಯವಾದುದು. ಥಮತಃ ವಿರಾಟೋದ್ಯೋಗಪರ್ವಗಳೂ, ಬಳಿಕ ಆದಿ ಸಭಾಪರ್ವ ಗೂ ಅವರ ಸಹಾಯದಿಂದಲೇ ಪ್ರಕಟಿಸಲ್ಪಟ್ಟುವು. ಈಚೆಗೆ ಕಾರ್ಯ ರವದಿಂದ ಅವರು ಈ ಗ್ರಂಥಪ್ರಕಟನದ ವಿಷಯದಲ್ಲಿ ಹಿಂದೆಗೆದುದರಿಂದ ಕೆಲಸವು ನಿಂತುಹೋಗಿದ್ದಿತು. ಆರಂಭಿಸಿದ ಕೆಲಸವು ನೆರವೇರದೆ ಗೆಲಸವಾಗಿ ನಿಂತುಹೋದುದಲ್ಲದೆ ಗ್ರಂಥಭಾಗಗಳು ಸುದಾ ಅನುಕ್ರ ವಾಗಿ ಬಾರದೆ ಉಳಿದುಬಿಟ್ಟುದರಿಂದ ನಮ್ಮ ಶ್ರಮಪ್ರಯತ್ನಗಳು ರ್ಥವಾದುವಲ್ಲಾ! ಎಂಬ ಕೊರತೆಯು ಬಹಳವಾಗಿ ಬಾಧಿಸುತ್ತಾ ದಿತು.

ಭಾರತ ಗ್ರಂಥಲೇಖನವು ನಿರ್ವಿಘ್ನವಾಗಿ ಪೂರಯಿಸುವುದು ಕಷ್ಟ . ಆತಂಕಗಳು ಈ ಕಾರ್ಯಕ್ಕೆ ಹೆಚ್ಚು ಹೆಚ್ಚಾಗಿ ಸಂಭವಿಸುವುವು. ನುಗಿನ ಭಾರತವನ್ನು ಕುಮಾರ ವ್ಯಾಸನೂ ಮುಗಿಸಲಾರದೆ ಹೋದನು. ಂಧ್ರಭಾರತವನ್ನು ನನ್ನಯಭಟ್ಟನು ಪ್ರಾರಂಭಿಸಿ ಮೂರು ಪರ್ವಗ ನ್ನೂ ಬರೆಯಲಿಲ್ಲ. ಮಹಾರಾಷ್ಟ್ರದಲ್ಲಿ ಭಾರತವನ್ನು ಬರೆಯತೊಡ ದ ಮುಕ್ತೇಶ್ವರನೂ ಎರಡು ಪರ್ವಗಳಲ್ಲಿಯೇ ನಿಲ್ಲಿಸಿಬಿಟ್ಟನು. ಅಂತಹ ಹನೀಯರ ಪಾಡೇ ಹಾಗೆ ಆಗಿರುವಲ್ಲಿ ನಮ್ಮಂತವರಿಗೆ ವಿಘ್ನವುಂಟಾ ವುದು ಅತಿಶಯವಲ್ಲ. ಶ್ರೀ ಕೃಷ್ಣ ಪರಮಾತ್ಮನು ನನ್ನನ್ನೂ ಈ ಗದಲ್ಲಿ ಪರೀಕ್ಷಿಸಿದನು. ವಿರಾಟಪರ್ವವನ್ನು ಪ್ರಾರಂಭಿಸಿದಾಗಲೇ ದ್ಯೋಗದಿಂದ ವಿಶ್ರಾಂತಿ ಪಡೆಯಬೇಕಾಯಿತು. ಉದ್ಯೋಗ ಪರ್ವವು

ಪೂರಯಿಸುವಷ್ಟರಲ್ಲಿ ಗೃಹಕೃತ್ಯದ ಕೊರತೆಯಿಂದ ಬಹು ನೊಂದೆನು. ಆದಿಪರ್ವದಲ್ಲಿ ನನ್ನ ಪ್ರೇಮಪುತ್ರಿಯಾದ ಸುಂದರಮ್ಮನನ್ನು ಕಳೆದು ಕೊಂಡೆನು. ಸಭಾಪರ್ವ ಮುಗಿಯುವುದರಲ್ಲಿ ನನ್ನ ದೇಹಶಕ್ತಿಯು ಕುಂದಿ ಜೀವಿತಾಶೆಯೇ ದುರ್ಲಭವೆಂಬಂತೆ ಆಯಿತು. ಆದರೂ ತೊಡ ಗಿದ ಕೆಲಸವನ್ನು ಕಡೆಗಾಣಿಸದೆ ಬಿಡಬಾರದೆಂಬ ದೃಢಸಂಕಲ್ಪದಿಂದ ಕಡಲಣುಗಿಯೊಡೆಯನ ಅಡಿದಾವರೆಯನ್ನು ಹಿಡಿದು, ವಿಶ್ರಾಂತಿ ಕಾಲ ವನ್ನು ಸಾರ್ಥಕಗೊಳಿಸಬೇಕೆಂದು ಈ ವನಪರ್ವವನ್ನು ಬರೆದೆನು. ಈಚೆಗೆ ನನ್ನ ದೇಹಾರೋಗ್ಯವು ಬಹುಮಟ್ಟಿಗೆ ಕುದುರಿದುದು ಈಶ್ವರಾ ನುಗ್ರಹದಿಂದಲೇ.

ಕರ್ಣಾಟಕ ಪಿತಾಮಹರೆಂಬ ಪ್ರಸಿದ್ಧಿ ಪಡೆದು, ದೇಶಭಾಷಾಭ್ಯು ವೃದ್ಧಿಯಲ್ಲಿ ಬದ್ಧಾದರರೆನಿಸಿ ಅವಿಶ್ರಾಂತಶ್ರಮದಿಂದ ಸ್ವಾರ್ಥತ್ಯಾಗ ಮಾಡಿ ಪರೋಪಕಾರಾರ್ಥವಾಗಿಯೇ ದುಡಿಯುತ್ತಿರುವ ಮ|| ಎಂ. ವೆಂಕಟಕೃಷ್ಣಯ್ಯನವರು ಈ ಗ್ರಂಥಮುದ್ರಣದ ಭಾರವನ್ನು ವಹಿಸು ವುದಾಗಿ ಅಭಯಪ್ರಧಾನ ಮಾಡಿದುದರಿಂದ ಸ್ವಲ್ಪ ಧೈರ್ಯವುಂಟಾಯಿತು. ಗ್ರಂಥದ ಗುಣಗ್ರಹಣ ಮಾಡಿ ಸರ್ಕಾರದ ಸ್ಕೂಲುಗಳಿಗೆ ಹಲವು ಪ್ರತಿಗ ಳನ್ನು ಕೊಂಡುಕೊಳ್ಳುವುದಾಗಿ ನಮ್ಮ ಶ್ರೀಮನ್ಮಹಾರಾಜಾ ಸರ್ಕಾರದ ವರು ಉದಾರಮನಸ್ಕರಾಗಿ ಅನುಗ್ರಹಿಸಿದುದರಿಂದ ನನ್ನ ಶ್ರಮೆಯು ವ್ಯರ್ಥವಾಗಲಾರದೆಂಬ ಭರವಸೆಯುಂಟಾಗಿ ತಕ್ಕಷ್ಟು ಜಾಗ್ರತೆಯಲ್ಲಿ ಗ್ರಂಥವನ್ನು ಮುಗಿಸಬೇಕೆಂದು ನಿಶ್ಚಯಿಸಿದೆನು. ಈಸಂಕಲ್ಪವನ್ನುಭಕ್ತ ಪರಾಧೀನನಾದ ಜಗದೀಶ್ವರನು ನೆರವೇರಿಸದಿರಲಾರನೆಂದು ನಂಬಿರುವೆನು.

ಗ್ರಂಥಪ್ರಚಾರಕ್ಕೆ ಸಹಾಯ ಮಾಡಿದ ಮಹನೀಯರುಗಳ ಉಪ ಕಾರಕ್ಕೆ ತುಂಬ ಕೃತಜ್ಞನಾಗಿದ್ದೇನೆ. ಪ್ರೂಫ್‌ಷೀಟುಗಳನ್ನು ಸ್ವತಃ ನೋಡಲು ಅವಕಾಶವಿಲ್ಲದ ಕಾರಣ ಈ ಮುದ್ರಣದಲ್ಲಿ ಕೆಲವು ಸ್ಖಲಿತ್ಯ ಗಳು ಬಿದ್ದಿರುವುವು. ಶುದ್ಧಾಶುದ್ಧ ಪತ್ರದಂತೆ ತಿದ್ದಿಕೊಳ್ಳುವುದಲ್ಲದೆ, ಇದರಲ್ಲಿ ಕಾಣಬರುವ ದೋಷಗಳನ್ನು ವಾಚಕಮಹಾಶಯರು ದಯ ಮಾಡಿ ತಿಳಿಸಿದರೆ ಅವರ ಉಪಕಾರಕ್ಕೆ ತುಂಬ ಋಣಿಯಾಗಿರುವೆನು.

ಹುಲಿಯೂರುದುರ್ಗ,
ದುಂದುಭಿ ಸಂವತ್ಸರ ಮಾರ್ಗಶಿರ.

ಕುಮಾಂಡೂರು ರಾಮಸ್ವಾಮಿ,
ಅಯ್ಯಂಗಾರ್.

## ವಿಷಯಾನುಕ್ರಮಣಿಕೆ.

ಸಂಧಿ ——— ಪುಟಸಂಖ್ಯೆ

# ಅರಣ್ಯಪರ್ವದ ಶುದ್ಧಾಶುದ್ಧಪತ್ರಿಕೆ.

—೦—

| ಪುಟ | ಪಂಗ್ತಿ. | ಅಶುದ್ಧ | | ಶುದ್ಧ. |
|---|---|---|---|---|
| ೧ | ೭ | ಹೋೀರಟು | .... | ಹೊ[illegible]ಟು, |
| „ | ೧೨ | ಯುಧಿಷ್ಠರ | .... | ಯುಧಿಷ್ಠಿ |
| „ | ೧೫ | ಹೋಯುತಲ್ಲಾ | .... | ಹೋಯಿ |
| ೨ | ೧೬ | ಯುಧಿಷ್ಟರ | .... | ಯುಧಿಷ್ಠಿ |
| ೪ | ೧ | ಬಡಸಲಿಕ್ಕೆ | .... | ಬಡಿಸಲಿಕ |
| „ | ೭ | ಯುಧಿಷ್ಠರ | .... | ಯುಧಿಷ್ಠಿ |
| „ | ೧೩ | ಶಾಲ್ಯಾನ್ಯ | .... | ಶಾಲ್ಯನ್ಯ |
| ೫ | ೧ | ಯುಧಿಷ್ಟರ | .... | ಯುಧಿಷ್ಠಿ |
| ೧೨ | ೪ | ಅಲಂಕರಿಸ್ಪಟ್ಟ | .... | ಅಲಂಕರಿ |
| ೧೩ | ೭ | ಕುಟಂಬಿಗ | .... | ಕುಟುಂಬ |
| ೧೫ | ೬ | ಒಲ್ಲೆ | .... | ಎಲ್ಲೆ |
| „ | ೧೮ | ದುರಳ | .... | ದುರುಳ |
| ೧೭ | ೧೦ | ನಾನಿದ್ದದ್ದರೆ | .... | ನಾನಿದ್ದಿದ |
| „ | ೧೪ | ಮರಳು | .... | ಮರುಳು |
| ೨೧ | ೧೫ | ದೇಶ | .... | ಪ್ರದೇಶ |
| ೨೫ | ೪ | ಸಂಭಿವಿಸು | .... | ಸಂಭವಿಸ |
| ೨೮ | ೭ | ತನ್ನು | .... | (ಬಿಟ್ಟು |
| ೩೧ | ೨೦ | ಅಪ್ಪಣಿ | .... | ಅಪ್ಪಣೆ. |
| ೩೩ | ೨೫ | ದಶೆ | .... | ದೆಸೆ |
| ೪೩ | ೨೧ | ಮರಳು | .... | ಮರುಳು |
| ೪೬ | ಕೊನೆಯ | ಅಹಂಕಾರ | .... | ಅಭಿಮಾನ |
| ೪೭ | ೧ | ದುಡಿಕಿ | .... | ದುಡುಕಿ |
| ೪೮ | ೨೦ | ನೋಡಿದಿಯಾ | .... | ನೋಡಿದೆ |
| ೫೬ | ೨ | ದಿವ್ಯಾಸ್ತ್ರನ್ನ | .... | ದಿವ್ಯಾಸ್ತ್ರ |
| ೬೦ | ೧೨ | ಹೊರಲಾಡಿ | .... | ಹೊರಳಾ |
| ೬೧ | ೩ | ಮೊಳಹಿ | .... | ಮೊಳಗಿ |
| ೬೨ | ೧೯ | ಜಯ | .... | ವಿಜಯ |
| ೬೩ | ೧೦ | ಊವಶೀ | .... | ಊರ್ವಶ |

| ಪುಟ | ಪಂಗ್ತಿ. | ಅಶುದ್ಧ | | ಶುದ್ಧ |
|---|---|---|---|---|
| ೬೪ | ೮ | ವಾಘುವ್ಯಾಸ್ತ್ರ | .... | ವಾಯುವ್ಯಾಸ್ತ್ರ |
| ೬೫ | ೨೫ | ಆಲಂಗಿಸಿ | .... | ಆಲಿಂಗಿಸಿ |
| " | " | ಕರದೊಯ್ದು | .... | ಕರೆದೊಯ್ದು |
| ೬೬ | ಕಡೆಯ | ಅಪ್ಪಣೆ ಎಂಬುದರ ಹಿಂದೆ ಒಡೆಯನು ಎಂಬುದನ್ನು ಸೇರಿಸಿರಿ, | | |
| ೬೭ | ೨೧ | ಬಲಪೂ | .... | ಒಲವೂ |
| ೬೯ | ೧೪ | ಒಹೋ | .... | ಓಹೋ |
| ೭೭ | ೨೨ | ಎಲಬು | .... | ಎಲುಬು |
| ೭೮ | ೭ | ಅಲಲ್ಲಿ | .... | ಅಲ್ಲಲ್ಲಿ |
| ೮೦ | ೮ | ಕಣ್ತರದು | .... | ಕಣ್ತೆರೆದು |
| ೮೯ | ೨೬ | ತೊಂದರೆಗಳನ್ನೆ | .... | ತೊಂದರೆಗಳನ್ನೇ |
| ೯೦ | ೨೩ | ಪಂಚೇಂದ್ರಿ | .... | ಪಂಚೇಂದ್ರಿಯ |
| ೯೩ | ೨೪ | ಕೋಟೇ | .... | ಕೋಟಿ. |
| ೯೪ | ೧೫ | ಸರಯಾಗಿ | .... | ಸರಿಯಾಗಿ |
| ೯೬ | ೧೭ | ತಿರಡೆಯ | .... | ಕಿರೆಯ |
| ೯೯ | ೨೪ | ಪಡೆಯಿರಿ | .... | ಪಡೆದಿರಿ |
| ೧೦೨ | ೧[illegible] | ಕೇಳಲು | .... | ಹೇಳಲು |
| ೧೦೩ | ೭ | ಚಿಂತಸ | .... | ಚಿಂತಿಸ |
| ೧೦೫ | ೧೪ | ಆನದ | .... | ಆನಂದ |
| ೧೦೬ | ೧೪ | ಯೂಳಕ್ಕೆ | .... | ಯೊಳಕ್ಕೆ |
| ೧೦೭ | ೨೦ | ಗೃಹಸ್ತ | .... | ಗೃಹಸ್ಥ |
| ೧೦೮ | ೧೭ | ಈ ಪಾಂಡವರು | .... | ನೀವು |
| ೧೧೭ | ೬ | ಆ್ಣನಾಡುವುದರಿಂದ ಅಣ್ಣನಾಡುವುದರಲ್ಲಿ | | |
| ೨೧ | ೧೦ | ಕರುರಾಜ | .... | ಕುರುರಾಜ |
| ೨೨ | ೧೨ | ಹುಟಾಹುಟಿ | .... | ಹುಟಾಹುಟಿ |
| ೨೪ | ೭ | ಕಣ್ಣದುರಿಗೆ | .... | ಕಣ್ಣೆದುರಿಗೆ |
| ೨೫ | ೩ | ನೆರೆದಿರುವರು | .... | ನೆರೆದಿದ್ದರು |
| " | ೭ | ಆದರಲ್ಲಿ | .... | ಆವರಲ್ಲಿ |
| ೨೭ | ೩ | ಹಿಡಿಯುತ | .... | ಹಿಡಿಯಿತ |
| ೩೦ | ೧೫ | ಇಲ್ಲಿಟು | .... | ಇಲ್ಲಿಟ್ಟು |

| ಪುಟ | ಪಂಗ್ತಿ | ಅಶುದ್ಧ | | ಶುದ್ಧ |
|---|---|---|---|---|
| ,, | ಕೊನೆ | ಯರೆಯುವೆನು | .... | ಯೆರೆಯುವನು |
| ೧೩೨ | ೧೬ | ಆಯುಸ್ಸು | .... | ಆಯುಸ್ಸು |
| ,, | ೨೨ | ಪುರುಷ | .... | ಪೌರುಷ |
| ೧೩೩ | ೨ | ಬಂದ | .... | ಬಂದು |
| ,, | ೪ | ಆಶ್ರಯಕ್ಕೆ | .... | ಆಶ್ರಮಕ್ಕೆ |
| ೧೩೫ | ೧೬ | ತಂದಿಟ್ಟ | .... | ತಂದಿಟ್ಟ |
| ,, | ಕೊನೆ | ಹೇಳಿದರ | .... | ಹೇಳಿದರು |
| ,, | .. | ವೊದುಲೀ | .... | ಮೊದಲೀ |
| ೧೩೫ | ೧೫ | ಬಟರಾ | .... | ಬಿಟ್ಟರಾ |
| ೧೩೬ | ೬ | ನಿನೇಕೆ | .... | ನೀನೇಕೆ |
| ೧೩೮ | ೧೬ | ಕಶುನಿ | .... | ಶಕುನಿ |
| ೧೪೨ | ಕಡೆ | ಯುದ್ಧಕೆ | .... | ಯುದ್ಧಕ್ಕೆ |
| ೧೪೫ | ೧೫ | ದುರ್ಯೊಧನ | .... | ದುರ್ಯೋಧನ |
| ೧೪೬ | ೧೪ | ಹೊರುವಂತೆ | .... | ಹೆದರುವಂತೆ |
| .. | ೧೬ | ಮಾಂಗ್ಯ | .... | ಮಾಂಗಲ್ಯ |
| ೧೪೭ | ೧೮ | ತಕ್ಕುದು | .... | ತಕ್ಕುದು |
| ೧೫೫ | ೧೩ | ಯವುನಾ | .... | ಯಮುನಾ |
| ೧೫೭ | ೭ | ನಿನೇಕೆ | .... | ನೀನೇಕೆ |
| ,, | ೮ | ಕಟ್ಟ | .... | ಕಟ್ಟಿ |
| ೧೬೫ | ೧ | ನೀನ | .... | ನೀನು |
| ,, | ೧೮ | ದುರಳನು | .... | ದುರುಳನು |
| ೧೬೮ | ೨೬ | ಭಂಡೆ | .... | ಬಂಡೆ |
| ೧೭೧ | ೧೩ | ಮುಂದೆ | .... | ವ ಂದೆ |
| ೧೭೩ | ಕೊ ೯. | ಜ್ಞಾಪಿಸಿದನು, | .... | ಆಜ್ಞಾಪಿಸಿದನು |
| ೧೭೮ | ೨೨ | ಮೂವರು | .... | ನಾಲ್ವರು |
| ,, | ೨೪ | ಆಕಸ್ಮಿತ | .... | ಆಕಸ್ಮಿಕ |
| ೧೮೦ | ೧೩ | ಜೀವನ್ಮತ್ರ | .... | ಜೀವನ್ಮೃತ |
| ,, | ಕೊನೆ | ಯದ್ಧ | .... | ಯುದ್ಧ |
| ೧೮೩ | ೭ | ಸರಸಿಯ | .... | ಸರಸ್ಸಿನ |

# ಮಹಾಭಾರತ ಕಥಾಸಂಗ್ರಹ.

## ಅರಣ್ಯಪರ್ವ.

### ಮೊದಲನೆಯ ಸಂಧಿ.

ಸೂಚನೆ:— ಪಾಂಡವರು ಕಾಮ್ಯಕವನದಲ್ಲಿ ವಾಸಮಾಡುತ್ತಿರುವಾಗ ಕಿರ್ಮೀರನೆಂಬ ದೈತ್ಯನನ್ನು ಭೀಮನು ಕೊಂದನು. ಮೈತ್ರೇಯನು ಹಸ್ತಿನಾಪುರಕ್ಕೆ ಬಂದು, ಪಾಂಡವರ ಮೇಲೆ ದ್ವೇಷವನ್ನು ಬಿಡೆಂದು ಹೇಳಿದ ಮಾತನ್ನು ಕೌರವನು ಕೇಳದ ಕಾರಣ ಅವನಿಗೆ ಶಾಪಕೊಟ್ಟು ಹೊರಟುಹೋದನು.

ಬಳಿಕ ಪಾಂಡವರು ಭೀಷ್ಮಾದಿ ಬಂಧುಜನಗಳನ್ನೂ ದ್ರೋಣಕೃಪಾದಿ ಗುರುಜನರನ್ನೂ ಪೌರಜನಗಳನ್ನೂ ಹಿಂದಕ್ಕೆ ಕಳುಹಿ, ಗಂಗಾತೀರವನ್ನನುಸರಿಸಿ, ಅರಣ್ಯಮಾರ್ಗವನ್ನು ಹಿಡಿದು ಹೋಗುತ್ತಿದ್ದರು. ಅವರ ಹಿಂದುಗಡೆಯಲ್ಲಿ ಅಸಂಖ್ಯಾತರಾದ ಬ್ರಾಹ್ಮಣರು ಹೊರಟರು. ಆಗ ಯುಧಿಷ್ಠಿರನು ಅವರನ್ನು ನೋಡಿ ತನ್ನ ಮೂಗಿನ ಮೇಲೆ ಬೆರಳಿಟ್ಟುಕೊಂಡು "ಆಹಾ! ನನಗೆ ಸಂಭವಿಸಿರುವ ಈ ಕಷ್ಟಕಾಲದಲ್ಲಿ ನನ್ನನ್ನು ಹಿಂಬಾಲಿಸಿ ಬರುತ್ತಿರುವ ಬ್ರಾಹ್ಮಣರನ್ನು ರಕ್ಷಿಸುವುದಕ್ಕೆ ಶಕ್ತಿಯಿಲ್ಲದೆ ಹೋಯಿತಲ್ಲಾ! ನಾನು ಪೂರ್ವಜನ್ಮದಲ್ಲಿ ಯಾವ ದುಷ್ಕೃತ್ಯಗಳನ್ನು ಮಾಡಿದ್ದೆನೋ ಅವುಗಳ ಫಲವನ್ನೀಗ ಅನುಭವಿಸಬೇಕಾಗಿ ಬಂದಿತು" ಎಂದು ಚಿಂತಿಸಿ, ಸಂಗಡ ಬರುತ್ತಿದ್ದ ಭೀಮಸೇನನನ್ನು ನೋಡಿ, "ತಮ್ಮಾ, ನಮ್ಮ ರಾಜ್ಯವೂ, ಧನಕನಕಾದಿ ವಸ್ತುಗಳೂ ಕೌರವರಿಗೆ ಸೇರಿಹೋದುವು. ಧರ್ಮಪಾಶಬದ್ಧರಾದ ನಾವು ಜೂಜಿನ

ಪಣದಂತೆ ಈಗ ವನವಾಸಕ್ಕೆ ಹೊರಟುಬಂದಿದ್ದೇವೆ. ನಿರ್ಗತಿಕರಾದ ನಮ್ಮ ಸಂಗಡ ಇದ್ದುಕೊಂಡು ಈ ಬ್ರಾಹ್ಮಣರು ಯಾವ ಸುಖವನ್ನನುಭವಿಸಬಲ್ಲರು? ವನವಾಸ ಮಾಡುವುದು ನಮಗಂತೂ ಹಣೆಯಲ್ಲಿ ಬರೆದಿರುವುದರಿಂದ ನಾವು ಕಷ್ಟಪಡಬೇಕಾಗಿದೆ. ಪಾಪ! ಈ ಜನರು ನಮ್ಮ ಜತೆಯಲ್ಲಿದ್ದುಕೊಂಡು ಏತಕ್ಕೆ ತೊಂದರೆಯನ್ನನುಭವಿಸಬೇಕು? ಇವರಿಗೆ ಸಮಾಧಾನ ಹೇಳಿ ಹಿಂದಕ್ಕೆ ಕಳುಹಿಸಿಬಿಡು" ಎಂದು ಹೇಳಿದನು. ಭೀಮನು ಆ ಬ್ರಾಹ್ಮಣರನ್ನು ನೋಡಿ "ಸ್ವಾಮಿ, ಭೂಸುರೋತ್ತಮರೇ, ನಾವು ಪ್ರತಿಜ್ಞೆಯಂತೆ ಅರಣ್ಯವಾಸಕ್ಕೆ ಹೊರಡುವೆವು. ನಮಗೆ ಅಪ್ಪಣೆ ಕೊಟ್ಟು ನೀವೆಲ್ಲರೂ ಹಿಂದಿರುಗಿ ಹೋಗಿರಿ. ಅರಮನೆಗಳೂ ರಾಜಭೋಗಗಳೂ ನಮ್ಮ ಪಾಲಿಗೆ ಬಂದಿಲ್ಲ. ನಮ್ಮ ಆಸ್ತಿಯೆಲ್ಲಾ ಕೌರವರ ಪಾಲಾಗಿರುವುದರಿಂದ ನೀವು ಹಸ್ತಿನಾಪುರಕ್ಕೆ ಹೋಗಿ ಅವರ ಆಶ್ರಯದಲ್ಲಿ ಸುಖವಾಗಿ ಜೀವನಾ ಮಾಡಿಕೊಂಡಿರಬಹುದು. ನಾವು ಕಾಡುಗಳಲ್ಲಿಯೂ, ಪೊಳೆಗಳಲ್ಲಿಯೂ, ಬೆಟ್ಟದ ಗುಹೆಗಳಲ್ಲಿಯೂ ಅಲೆಯುತ್ತಿರಬೇಕಾದುದರಿಂದ ನಮ್ಮೊಂದಿಗೆ ನೀವು ಕಷ್ಟಪಟ್ಟುಕೊಂಡು ಇರುವುದು ಯುಕ್ತವಲ್ಲ" ಎಂದು ವಿನಯದಿಂದ ಹೇಳಿದನು.

ಅದನ್ನು ಕೇಳಿ ಆ ಬ್ರಾಹ್ಮಣರು ಯುಧಿಷ್ಠಿರನನ್ನು ನೋಡಿ, "ಎಲೈ ಮಹಾರಾಜನೇ, ದೈವವಿಪಾಕದಿಂದ ನಿನಗೆ ಸಂಭವಿಸಿರುವ ಕಷ್ಟವು ನಮ್ಮದೇ ಎಂದು ತಿಳಿದಿದ್ದೇವೆ. ನಾವು ನಿನ್ನನ್ನಗಲಿ ಇರಲಾರೆವು. ನೀನು ಕಾಡಿಗಾದರೂ ಹೊರಡು; ಸಮುದ್ರಕ್ಕಾದರೂ ನಡೆ; ಬೆಟ್ಟದ ಮೇಲಕ್ಕಾದರೂ ಹತ್ತು; ಪಾತಾಳಕ್ಕಾದರೂ ಇಳಿ. ಗುಹೆಗಳಲ್ಲಿಯಾದರೂ ವಾಸಮಾಡಿಕೊಂಡಿರು ನಾವು ನಿನ್ನ ಸಂಗಡಲೇ ಇದ್ದುಕೊಂಡು ನೀನು ಭಕ್ಷಿಸುವ ಆಹಾರವನ್ನೇ ತಿಂದುಕೊಂಡು, ನಿನ್ನಂತೆಯೇ ಕಷ್ಟಪಡುತ್ತಲಿರುವೆವು. ನಮಗೆಲ್ಲಾ ನೀನೇ ಜೀವ, ನೀನೇ ತಾಯಿ, ನೀನೇ ತಂದೆ, ಬಂಧುಬಳಗಗಳು ನೀನೇ ಎಂದು ತಿಳಿದಿರುವೆವು. ನಮಗೆ ನೀನೇ ಗತಿ, ನೀನೇ ಮತಿ, ನೀನು ನಮ್ಮನ್ನು ಕೈಬಿಡದೆ ನಿನ್ನ ಸಂಗಡ ಕರೆದೊಯ್ಯಬೇಕು" ಎಂದು ಪ್ರಾರ್ಥಿಸಿದರು.

ದಯಾಮೂರ್ತಿಯಾದ ಧರ್ಮರಾಯನು ಆ ಬ್ರಾಹ್ಮಣರ ಮಾತನ್ನು ಕೇಳಿ ಬಹಳವಾಗಿ ನೊಂದುಕೊಂಡು ಏನು ಹೇಳಲಿಕ್ಕೂ ತೋರದೆ, ದುಃಖದಿಂದ ಕಣ್ಣೀರು ಸುರಿಸುತ್ತಾ "ಆಹಾ! ಎಂತಹ ದುರ್ದಶೆ ಸಂಭವಿಸಿತು? ನಾವು ಉಪವಾಸವಾದರೂ ಇರಬಲ್ಲೆವು. ಇಷ್ಟು ಮಂದಿಗೂ ಆಹಾರವನ್ನು ಒದಗಿಸುವುದು ಹೇಗೆ? ಇವರನ್ನೂ ನಮ್ಮಂತೆಯೇ ತಿಂಡಿ ಇಲ್ಲದೆ ಒಣಗಿಸಿದರೆ ಇನ್ನೆಂತಹ ದೋಷಬರುವುದೋ ಕಾಣೆನು. ತುಂಬಿದ್ದ ಐಶ್ವರ್ಯವು ಅದೃಶ್ಯವಾಗಿ ಈಗಲೇ ಅಲಕ್ಷ್ಮಿಯು ಪ್ರತ್ಯಕ್ಷಳಾಗಿರುವಳು. ಮುಂದಿನ ಕರ್ತವ್ಯವೇ ನನಗೆ ತೋರದೆ ಇದೆ. ಈಗ ಏನು ಮಾಡಲಿ?" ಎಂದು ಚಿಂತೆಯಿಂದ ನಿಟ್ಟುಸಿರುಬಿಡುತ್ತಿದ್ದನು. ಈ ರೀತಿಯಲ್ಲಿ ಕೊರಗುತ್ತಿರುವ ರಾಜನನ್ನು ನೋಡಿ ಪುರೋಹಿತನಾದ ಧೌಮ್ಯನು "ಎಲೈ ರಾಜೇಂದ್ರನೇ! ಇದಕ್ಕೆ ಏತಕ್ಕೆ ಚಿಂತಿಸುವೆ? ಪ್ರಾಜ್ಞರು ಹರ್ಷವಿಷಾದಗಳಲ್ಲಿಯೂ, ಸುಖದುಃಖಗಳಲ್ಲಿಯೂ, ಸ್ತುತಿನಿಂದೆಗಳಲ್ಲಿಯೂ ಸಮಬುದ್ಧಿಯುಳ್ಳವರಾಗಿರಬೇಕು. ಅವರವರ ಕರ್ಮಾನುಗುಣವಾಗಿ ಆಗಬೇಕಾದುದೆಲ್ಲಾ ತಪ್ಪದೆ ನಡೆಯುತ್ತಿರುವುದು. ಇದಕ್ಕಾಗಿ ಚಿಂತಿಸಿ ಫಲವಿಲ್ಲ. ಈಗ ನೀನು ಭಗವಂತನಾದ ಸೂರ್ಯನನ್ನು ಆರಾಧಿಸು. ಆತನು ಪ್ರಸನ್ನನಾಗಿ ನೀನು ಕೋರುವಂತೆ ಭಕ್ಷ್ಯಭೋಜ್ಯಾದಿಗಳಿಂದ ಕೂಡಿದ ಮೃಷ್ಟಾನ್ನವನ್ನು ಅನುಗ್ರಹಿಸುವನು" ಎಂದು ಹೇಳಿ ಆತನಿಗೆ ಸೂರ್ಯಮಂತ್ರವನ್ನು ಉಪದೇಶಿಸಿದನು.

ಬಳಿಕಲಾ ಯುಧಿಷ್ಠಿರನು ನಿಯಮದಿಂದ ಕುಳಿತು ನಿಶ್ಚಲಚಿತ್ತನಾಗಿ ಕರ್ಮಸಾಕ್ಷಿಯಾದ ಸೂರ್ಯನನ್ನು ಧ್ಯಾನಮಾಡಿದನು. ಕೂಡಲೇ ಸಹಸ್ರಾಂಶುವಾದ ಆ ದೇವನು ಪ್ರತ್ಯಕ್ಷನಾಗಿ ಬಂದು "ಎಲೈ ರಾಯನೇ ನಿನ್ನ ಸ್ತೋತ್ರಕ್ಕೆ ಮೆಚ್ಚಿದೆನು. ಇಗೋ, ಅಕ್ಷಯಪಾತ್ರೆಯನ್ನು ನಿನಗೆ ಕೊಟ್ಟಿದ್ದೇನೆ. ಇದು ಇಂದಿನಿಂದ ಹನ್ನೆರಡು ವರ್ಷಗಳ ತನಕ ನಿನಗೆ ಬೇಕಾದಷ್ಟು ಭಕ್ಷ್ಯಭೋಜ್ಯಾದಿ ಪದಾರ್ಥಗಳನ್ನೂ ಒದಗಿಸುವುದು. ಯಜ್ಞಸಂಭವೆಯಾಗಿ ನಿನ್ನ ಧರ್ಮಪತ್ನಿಯಾಗಿರುವ ದ್ರೌಪದಿಯು ಸ್ನಾನಮಾಡಿ ನಿಯಮದಿಂದ ಈ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು

ಬಡಸಲಿಕ್ಕೆ ತೊಡಗಿದರೆ ಸಾಕು. ಲಕ್ಷಾಂತರ ಜನಕ್ಕಾದರೂ ಸಾಕಾಗು ವಷ್ಟು ಆಹಾರಪದಾರ್ಥಗಳನ್ನಾದರೂ ಇದರಿಂದ ತೆಗೆದು ಬಡಿಸುತ್ತಾ ಬರಬಹುದು. ಎಲ್ಲರಿಗೂ ಉಣಬಡಿಸಿ ತೃಪ್ತಿಗೊಳಿಸಿದ ತರುವಾಯ ಆಕೆಯು ಊಟಮಾಡಬಹುದು. ಅವಳು ಭೋಜನ ಮಾಡಿದ ಕೂಡಲೇ ಪಾತ್ರೆಯು ಬರಿದಾಗುವುದು. ಮರುದಿನವೂ ಇದೇ ಕ್ರಮದಂತೆ ಮಾಡು ತ್ತಾ ಬರಲಿ" ಎಂದು ಹೇಳಿ ಬಂದು ಸುವರ್ಣಮಯವಾದ ಪಾತ್ರೆ ಯನ್ನು ಕೊಟ್ಟು ಅದೃಶ್ಯನಾದನು. ಆಗ ಯುಧಿಷ್ಠಿರನು ಬಹು ಸಂತೋ ಷಪಟ್ಟು ಪತ್ನಿಯಾದ ದ್ರೌಪದಿಯ ಕೈಗೆ ಆ ಪಾತ್ರೆಯನ್ನು ಕೊಟ್ಟು, ಭೀಮಾದಿ ಸಹೋದರರಿಗೆ ಸೂರ್ಯನು ಅನುಗ್ರಹಿಸಿದ ವಿಷಯವನ್ನು ತಿಳಿಸಿ, ಧೌಮ್ಯನಿಗೂ ಈ ವಿವರವನ್ನು ಹೇಳಿದನು. ದ್ರೌಪದಿಯು ಸ್ನಾನಮಾಡಿ ಮಡಿಯುಟ್ಟುಕೊಂಡು ನಿಯಮದಿಂದ ಸೂರ್ಯನಾರಾಯಣ ನನ್ನು ಪ್ರಾರ್ಥಿಸಿ, ಅಕ್ಷಯಪಾತ್ರೆಯನ್ನು ಕೈಗೆ ತೆಗೆದುಕೊಂಡು, ಸಾಲು ಸಾಲಾಗಿ ಹಾಕಿದ್ದ ಎಲೆಗಳಲ್ಲೆಲ್ಲಾ ಶಾಲ್ಯಾನ್ನಘೃತಸೂಪಶಾಕಾದಿಗಳನ್ನೂ, ಭಕ್ಷ್ಯಭೋಜ್ಯಗಳನ್ನೂ ಬಡಿಸುತ್ತಾ ಬಂದಳು. ರಾಯನ ಸಂಗಡ ಬಂದಿದ್ದ ಬ್ರಾಹ್ಮಣರೂ, ಪರಿಜನರೂ, ಸಹೋದರರೂ ಊಟಮಾಡಿ ತೃಪ್ತರಾದರು. ಬಳಿಕಲಾ ಪಾಂಚಾಲಿಯು ತಾನು ಊಟಮಾಡಿ ಕೈತೊ ಳೆದುಕೊಂಡಳು. ಆಗ ಅಕ್ಷಯಪಾತ್ರೆಯು ಬರಿದಾಯಿತು. ಹೀಗೆಯೇ ಪ್ರತಿದಿನವೂ ಸಂತರ್ಪಣೆಯು ಅನಾಯಾಸವಾಗಿ ಜರುಗುತ್ತಾ ಬಂದುದ ರಿಂದ ಪಾಂಡವರಿಗೆ ಭೋಜನದ ಚಿಂತೆಯು ತಪ್ಪಿತು.

ಪಾಂಡವರು ಕಣ್ಣೆದುರಿಗೆ ಇಲ್ಲದೆ ವನವಾಸಕ್ಕೆ ಹೊರಟುಹೋದ ರೂ ಕೌರವನಿಗೆ ಅವರ ಭಯವು ತಪ್ಪಿರಲಿಲ್ಲ. ಸ್ವಪ್ನದಲ್ಲಿಯೂ, ನಿದ್ರೆ ಯಲ್ಲಿಯೂ ಭೀಮನು ಬಂದು ಹೆದರಿಸುವಂತೆಯೂ, ಪಾಂಚಾಲಿಯು ತಲೆಕೆದರಿಕೊಂಡು ಎದುರಿಗೆ ಬಂದು ನಿಂತು ಶಾಪಕೊಡುವಂತೆಯೂ ತಿಳಿದು ಬೆಬ್ಬರ ಬಿದ್ದು ನಡುಗುತ್ತಿದ್ದನು. ಎಂದಿಗಾದರೂ ಅವರು ತನಗೆ ಅಪಾಯ ಮಾಡದೆ ಬಿಡರು. ಹೇಗಾದರೂ ಅವರನ್ನು ಹಿಂದಿರುಗಿ ಬಾರ ದಂತೆ ತಡೆದು ಓಡಿಸುವುದು ಅಗತ್ಯವೆಂದು ಅದಕ್ಕೆ ತಕ್ಕ ಉಪಾಯಗ

ಳನ್ನು ಯೋಚಿಸುತ್ತಿದ್ದನು. ಅವನ ಅಂತರಂಗಕ್ಕೆ ಒಳಪಟ್ಟು ಅತ್ಯಾಪ್ತರೆನಿಸಿದ ಶಕುನಿ ಕರ್ಣ ದುಶ್ಶಾಸನರು ಉರಿಯುವ ಬೆಂಕಿಯಲ್ಲಿ ತುಪ್ಪವನ್ನು ಸುರಿಯುವಂತೆ ಅವನ ಕೋಪಾಗ್ನಿಯನ್ನು ಹೆಚ್ಚಿಸುತ್ತಾ ಇದ್ದರು. ಈ ದುಷ್ಟ ಚತುಷ್ಟಯವೂ ಸೇರಿ, ಸೈನ್ಯಸಮೇತವಾಗಿ ಅರಣ್ಯಕ್ಕೆ ಹೋಗಿ ಆ ಪಾಂಡವರೊಂದಿಗೆ ಕಾದಿ ಅವರನ್ನು ನಿಗ್ರಹಿಸಿ ಬರಬೇಕೆಂದು ತೀರ್ಮಾನಿಸಿ, ಪ್ರಯಾಣಕ್ಕೆ ತಕ್ಕ ಸನ್ನಾಹಗಳನ್ನು ಸಿದ್ಧಗೊಳಿಸುತ್ತಿದ್ದರು. ಸರ್ವಜ್ಞನಾದ ವೇದವ್ಯಾಸಮುನಿಯು ಇದನ್ನು ತಿಳಿದು ಕೂಡಲೇ ಅಲ್ಲಿಗೆ ಬಂದು ಧೃತರಾಷ್ಟ್ರರಾಯನನ್ನು ಕಂಡು ದುರ್ಯೋಧನಾದಿಗಳ ದುರಾಲೋಚನೆಯನ್ನೂ, ಅದರಿಂದ ಉಂಟಾಗಬಹುದಾದ ಅನರ್ಥಗಳನ್ನೂ ವಿವರಿಸಿ ಹೇಳಿದನು. ಪ್ರಜ್ಞಾಚಕ್ಷುವಾದ ಆ ರಾಯನು ಬಹು ವ್ಯಸನಪಟ್ಟು ತನ್ನ ಮಗನನ್ನು ಕರೆಯಿಸಿ, ಆ ವೇಳೆಯಲ್ಲಿ ಯುದ್ಧಮಾಡುವುದರಿಂದ ಸಂಭವಿಸುವ ಕೇಡುಗಳನ್ನು ತಿಳಿಸಿ, ಪ್ರಯಾಣ ಹೊರಡದ ಹಾಗೆ ತಡೆದುಬಿಟ್ಟನು.

ಬಂದಾನೊಂದು ದಿನ ಮೈತ್ರೇಯನೆಂಬ ಮಹರ್ಷಿಯು ಹಸ್ತಿನಾಪುರಕ್ಕೆ ಬಂದನು. ದುರ್ಯೋಧನನು ಆ ಮುನೀಂದ್ರನನ್ನು ಅರಮನೆಗೆ ಕರೆದೊಯ್ದು ಸತ್ಕರಿಸಿ, ಆತನ ಬುದ್ಧಿವಾದವನ್ನು ನಿರೀಕ್ಷಿಸುತ್ತಾ ಕುಳಿತಿದ್ದನು. ಮೈತ್ರೇಯನು ಆತನನ್ನು ನೋಡಿ “ ಎಲೈ ಕುರುಪತಿಯೇ, ನಿನ್ನ ಉಪಚಾರಗಳಿಂದ ಸಂತುಷ್ಟನಾಗಿರುವೆನು. ವಿರಕ್ತರಾದ ನಮ್ಮಂತಹ ಋಷಿಗಳಿಗೆ ಯಾವಾಗಲೂ ಸ್ವಾರ್ಥದ ಚಿಂತೆಯು ಇಲ್ಲವೆಂಬುದನ್ನು ನೀನು ಬಲ್ಲೆಯಷ್ಟೆ ! “ ಸರ್ವೇಜನಾಸ್ಸುಖಿನೋಭವಂತು ” ಎಂಬುದೇ ನಮ್ಮ ಬಯಕೆಯು. ಯಾರಾದರೂ ಧರ್ಮಮಾರ್ಗವನ್ನು ತಪ್ಪಿ ನಡೆದರೆ ಅವರನ್ನು ಎಚ್ಚರಗೊಳಿಸಿ ತಿದ್ದುವುದಕ್ಕಾಗಿಯೇ ನಾವು ಈ ಲೋಕದಲ್ಲಿ ಸಂಚರಿಸುತ್ತಲಿರುವೆವು. ಈಗ ಅಂತಹ ಸಂದರ್ಭವು ಒದಗಿರುವುದರಿಂದ ನಿನಗೆ ಆಪ್ತವಾಕ್ಯವನ್ನು ಹೇಳಬೇಕೆಂದು ಬಂದೆನು. ಎಲೈ ರಾಜನೇ ಕೇಳು. ನಿನಗೆ ಸಕಲೈಶ್ವರ್ಯಗಳೂ ಸಮೃದ್ಧಿಯಾಗಿವೆ. ತಾಯಿತಂದೆಗಳೂ, ಒಡಹುಟ್ಟಿದವರೂ, ಬಂಧುಬಳಗಗಳೂ ತುಂಬಿರುವು

ದರಿಂದ ಸಂಸಾರ ಸಂಬಂಧವಾದ ಯಾವ ಕೊರತೆಯೂ ನಿನಗೆ ಇಲ್ಲ.
ಇಷ್ಟು ಸೌಖ್ಯವಿದ್ದರೂ ನಿನ್ನ ಮನಸ್ಸಿಗೆ ನೆಮ್ಮದಿ ಇಲ್ಲ. ಅವರ ದೇಶ
ದಲ್ಲಿ ಸುಖವಾಗಿ ವಾಸಮಾಡಿಕೊಂಡಿದ್ದ ಪಾಂಡವರನ್ನು ನೀನೇ ಕರೆ
ಯಿಸಿ, ಬಲಾತ್ಕಾರದಿಂದ ಜೂಜಿನ ಆಟದಲ್ಲಿ ಅವರನ್ನು ಸೋಲಿಸಿ, ಅವರ
ಆಸ್ತಿಯನ್ನೆಲ್ಲಾ ಕಪಟದಿಂದ ಕಸಿದುಕೊಂಡೆ! ಪತಿವ್ರತಾತಿಲಕವಾದ
ದ್ರೌಪದಿಗೆ ಮಾನಭಂಗ ಮಾಡಿಸಲಿಕ್ಕೆ ಯತ್ನಿಸಿ, ಭಗ್ನಮನೋರಥನಾಗಿ
ಅಪಕೀರ್ತಿಗೆ ಪಾಲಾದುದಲ್ಲದೆ ಆಕೆಯ ಮತ್ತು ಪಾಂಡವರ ಕೋಪಾ
ಗ್ನಿಗೆ ಗುರಿಯಾದೆ. ಇದರಿಂದ ನಿನಗೆ ಎಂದಿಗಾದರೂ ಕ್ಷೇಮವುಂಟಾಗು
ವುದೆಂದು ತಿಳಿಯಬೇಡ. ಕಳೆದುಹೋದುದರ ವಿಷಯವಾಗಿ ಚಿಂತಿಸಿ
ಫಲವಿಲ್ಲ. ಈಗಲಾದರೂ ನೀನು ಆ ಪಾಂಡವರನ್ನು ವನದಿಂದ ಕರೆ
ಯಿಸಿ, ಅವರಿಂದ ಕಸಿದುಕೊಂಡಿರುವ ವಸ್ತುಗಳೊಂದಿಗೆ ಅವರ ರಾಜ್ಯ
ವನ್ನೂ ಹಿಂದಕ್ಕೆ ಕೊಟ್ಟು ಅವರ ಮನಸ್ಸಂತೋಷಗೊಳಿಸಿ ಸಮಾಧಾನ
ಪಡಿಸಿದರೆ ನಿನಗೆ ಶ್ರೇಯಸ್ಸುಂಟಾಗುವುದು. ಇದನ್ನು ಹೇಳುವುದಕ್ಕಾ
ಗಿಯೇ ಇಲ್ಲಿಗೆ ಬಂದೆನು" ಎಂದು ಹೇಳಿದನು. ದುರ್ಯೋಧನನು ಈ
ಮಾತುಗಳನ್ನು ಕೇಳಿ ಅಪಹಾಸ್ಯದಿಂದ ನಗುತ್ತಾ ತನ್ನ ತೊಡೆಯನ್ನು
ಹೊಡೆದುಕೊಂಡು, ಮೈತ್ರೇಯನನ್ನು ನೋಡಿ "ಎಲೈ ಮುನಿಯೇ!
ನನ್ನ ಶತ್ರುಗಳಾದ ಪಾಂಡವರಿಗೆ ಸ್ವಲ್ಪ ಭೂಮಿಯನ್ನಾದರೂ ಕೊಡಲೊ
ಲ್ಲೆನು. ಅವರ ಸಾಮರ್ಥ್ಯವಿಷ್ಟಿದ್ದರೂ ಕಾಳಗದಲ್ಲಿ ತೋರಿಸಿ ಜಯಿಸಿ
ಪಡೆಯಬಹುದು. ಇದರಿಂದ ಏನಾದರೂ ಆಗಲಿ. ನನ್ನ ಹಟವನ್ನು
ಎಂದಿಗೂ ಬಿಡೆನು" ಎಂದು ಹೇಳಿ ಆತನ ಮಾತನ್ನುಲ್ಲಂಘಿಸಿ ತಿರಸ್ಕಾರ
ಭಾವದಿಂದ ನೋಡಿದನು. ಅದಕ್ಕೆ ಆ ಮಹರ್ಷಿಯು ಕೋಪಾವಿಷ್ಟ
ನಾಗಿ "ಎಲಾ ಮರುಳೇ, ಆಪ್ತರ ಹಿತೋಪದೇಶವು ನಿನಗೆ ರುಚಿಸದೆ
ಹೋಯಿತೆ? ನಿನ್ನ ಹಿತವನ್ನು ಬಯಸಿ ಬುದ್ಧಿ ಹೇಳ ಬಂದ ನನ್ನನ್ನು
ತಿರಸ್ಕರಿಸಿ ಅವಮಾನ ಮಾಡಿದುದರಿಂದಲೂ, ತೊಡೆಹೊಯ್ದುಕೊಂಡು
ನಕ್ಕದ್ದರಿಂದಲೂ ನಿನ್ನ ತೊಡೆಗಳನ್ನು ವೈರಿಯಾದ ಭೀಮಸೇನನೇ
ಯುದ್ಧದಲ್ಲಿ ಕಡಿದು ಬಿಸುಡಲಿ" ಎಂದು ಶಾಪವನ್ನು ಕೊಟ್ಟು ಹೊರ

ಟನು. ಇದನ್ನು ಕೇಳಿ ಧೃತರಾಷ್ಟ್ರನು ಓಡಿಬಂದು ಆ ಮುನಿಯ ಪಾದ ಗಳಲ್ಲಿ ಬಿದ್ದು, ಸಮಾಧಾನದ ಮಾತುಗಳನ್ನು ಹೇಳಿ, ತನ್ನ ಮಗನ ತಪ್ಪನ್ನು ಕ್ಷಮಿಸಬೇಕೆಂದು ಬೇಡಿಕೊಂಡನು. ಅದಕ್ಕೆ ಮೈತ್ರೇಯನು "ರಾಯನೇ, ನನ್ನ ಮಾತು ಎಂದಿಗೂ ವ್ಯರ್ಥವಾಗತಕ್ಕದಲ್ಲ. ನಿನ್ನ ಮಗನು ತನ್ನ ಅಕೃತ್ಯದ ಫಲವನ್ನು ಅನುಭವಿಸಲೇಬೇಕು" ಎಂದು ಹೇಳಿ ತನ್ನ ಆಶ್ರಮಕ್ಕೆ ಹೊರಟು ಹೋದನು.

ಧೃತರಾಷ್ಟ್ರನು ಮುನಿಶಾಪದ ಭಯದಿಂದಲೂ, ಭೀಮಾದಿಗಳ ಪರಾಕ್ರಮವನ್ನು ತಿಳಿದಿದ್ದುದರಿಂದಲೂ ತನ್ನ ಮನಸ್ಸಿನಲ್ಲಿ ಕಳವಳ ಗೊಂಡು, ಆಪ್ತನಾದ ವಿದುರನನ್ನು ಕರೆಯಿಸಿ, ತನ್ನ ಮನೋವ್ಯಥೆ ಯನ್ನು ಅವನ ಸಂಗಡ ಹೇಳಿಕೊಂಡು ಪೇಚಾಡಿದನು. ಅದಕ್ಕೆ ವಿದು ರನು "ಎಲೈ ರಾಜನೇ, ನಾನೂ ಭೀಷ್ಮಾದಿ ಹಿರಿಯರೂ ಮೊದಲಿ ನಿಂದಲೂ ಹೇಳುತ್ತಾ ಬಂದ ಉಪದೇಶ ವಾಕ್ಯಗಳಿಗೆ ನೀನು ಕಿವಿಗೊ ಡದೆ, ದುಷ್ಟನಾದ ಮಗನ ಮಾತಿಗೆ ಮರುಳಾಗಿ ಈ ಕೇಡನ್ನು ತಂದು ಕೊಂಡೆ. ಮಹರ್ಷಿಗಳ ಶಾಪವು ಎಂದಿಗೂ ತಪ್ಪತಕ್ಕದಲ್ಲ. ಈಗಲಾ ದರೂ ಆ ತಪಸ್ವಿಯು ಹೇಳಿದಂತೆ ಪಾಂಡವರನ್ನು ಕರೆಯಿಸಿ ಅವರನ್ನು ಸಮಾಧಾನ ಪಡಿಸಿದರೆ ನಿಮಗೆ ಕ್ಷೇಮವಾಗುವುದು. ಇಲ್ಲದಿದ್ದರೆ ನಿನ್ನ ಮಕ್ಕಳಿಗೆ ನಾಶವು ತಪ್ಪದು" ಎಂದು ಖಂಡಿತವಾಗಿ ಹೇಳಿದನು. ದೂರಾ ಲೋಚನೆಯಿಲ್ಲದ ಆ ಅಂಧನೃಪತಿಯು ಅದಕ್ಕೊಪ್ಪದೆ ವಿದುರನ ಮೇಲೆ ಕೋಪಿಸಿಕೊಂಡು "ನೀನು ಯಾವಾಗಲೂ ಪಾಂಡವಪಕ್ಷಪಾತಿಯಾಗಿ ಅವರನ್ನು ಹೊಗಳುತ್ತಲೂ, ನನ್ನನ್ನೂ ನನ್ನ ಮಕ್ಕಳನ್ನೂ ತೆಗಳು ತ್ತಲೂ ಇರುತ್ತೀಯೆ. ನೀನು ಆ ಪಾಂಡವರ ಬಳಿಗೆ ಹೋಗಿ ಅಲ್ಲಿಯೇ ವಾಸಮಾಡಿಕೊಂಡಿರು" ಎಂದು ನಿಷ್ಠುರವಾಗಿ ನುಡಿದನು. ಆ ಮಾತಿಗೆ ವಿದುರನು ಸ್ವಲ್ಪವೂ ಅಸಮಾಧಾನಗೊಳ್ಳದೆ "ಅಯ್ಯಾ! ನಿನ್ನ ಇಷ್ಟ ದಂತೆಯೇ ಮಾಡುವೆನು. ಮಕ್ಕಳುಮರಿಗಳೊಂದಿಗೆ ನೀನು ಸುಖವಾಗಿ ದ್ದರೆ ಸಾಕು. ನಾನು ಹೊರಡುವೆನು" ಎಂದು ಹೇಳಿ ಕೂಡಲೇ ಅಲ್ಲಿಂದ ಹೊರಟು ಪಾಂಡವರಿದ್ದ ವನಕ್ಕೆ ಹೋಗಿ ಸೇರಿದನು. ಯುಧಿ

ಷ್ಟ್ರಾದಿಗಳು ವಿದುರನನ್ನು ಪ್ರೀತಿಯಿಂದ ಕರೆದುಕೊಂಡು ಹೋಗಿ ಸತ್ಕರಿಸಿ, ಧೃತರಾಷ್ಟ್ರ ಮುಂತಾದವರ ಕ್ಷೇಮಸಮಾಚಾರವನ್ನು ವಿಚಾರಿಸಿದ ಮೇಲೆ ಮೈತ್ರೇಯನು ಬಂದು ಕೌರವನಿಗೆ ಹಿತೋಪದೇಶ ಮಾಡಿದುದನ್ನೂ, ಅವನು ಮುನಿಯ ಮಾತನ್ನು ತಿರಸ್ಕರಿಸಿ, ಶಾಪಗ್ರಸ್ತನಾದುದನ್ನೂ ಕೇಳಿ ಬಹಳವಾಗಿ ನೊಂದುಕೊಂಡರು.

ಅತ್ತ ಧೃತರಾಷ್ಟ್ರನು ವಿದುರನನ್ನು ಅಗಲಿದ ಬಳಿಕ ಪಶ್ಚಾತ್ತಾಪಗೊಂಡು ಚಿಂತೆಯಿಂದ ನಿದ್ರಾಹಾರಾದಿಗಳು ರುಚಿಸದೆ ಮನೋವ್ಯಾಕುಲದಿಂದ ದಿನದಿನಕ್ಕೂ ಕೃಶನಾಗುತ್ತಾ ಬಂದನು. ಅವನನ್ನು ಹಿಂದಕ್ಕೆ ಕರೆಯಿಸಿಕೊಂಡ ಹೊರತು ತನ್ನ ಜೀವಗಳು ಉಳಿಯುವುದಿಲ್ಲವೆಂದು ತಿಳಿದು, ಆ ವಿದುರನನ್ನು ಕರೆದುತರಬೇಕೆಂದು ಪಾಂಡವರಿದ್ದ ವನಕ್ಕೆ ದೂತರನ್ನಟ್ಟಿದನು. ಅವರು ವೇಗವಾಗಿ ಹೋಗಿ ರಾಜನ ದುರವಸ್ಥೆಯನ್ನು ತಿಳಿಸಿ, ವಿದುರನನ್ನು ಹಸ್ತಿನಾಪುರಕ್ಕೆ ಕರೆದುಕೊಂಡು ಬಂದರು. ಧೃತರಾಷ್ಟ್ರನು ಅವನನ್ನು ಅಪ್ಪಿಕೊಂಡು ಕ್ಷೇಮಸಮಾಚಾರವನ್ನು ವಿಚಾರಿಸಿ, ಇಂತೆಂದನು.

ಧೃತ:—ತಮ್ಮಾ! ನೀನು ನನ್ನ ಮಕ್ಕಳನ್ನು ಬಿಟ್ಟು ಪಾಂಡವರ ಪಕ್ಷವನ್ನು ವಹಿಸೆಂದು ಹೇಳಿದ ಹಿತೋಕ್ತಿಗಳನ್ನು ಕೇಳದೆ ಆಗ ನಾನು ಕೋಪಿಸಿಕೊಂಡೆನು. ಪ್ರಾಜ್ಞನಾದ ನೀನು ಅಷ್ಟುಮಾತ್ರದಿಂದಲೇ ಅಸಮಾಧಾನಗೊಂಡು ಹೊರಟುಹೋಗಬಹುದೇ? ಸಿಟ್ಟನ್ನು ಬಿಟ್ಟು, ಕಣ್ಣಿಲ್ಲದ ನನಗೆ ಬುದ್ಧಿ ಹೇಳಿಕೊಂಡು ಇಲ್ಲಿಯೇ ಇರಪ್ಪಾ.

ವಿದುರ:—ರಾಜನೇ, ನನಗೆ ಅಂತಹ ಕೋಪವೇನೂ ಇಲ್ಲ. ನಿನ್ನ ಮಕ್ಕಳ ದುರ್ವ್ಯಾಪಾರಗಳು ಜಗತ್ತಿಗೇನೇ ವಿದಿತವಾಗಿವೆ. ಧರ್ಮಾತ್ಮರಾದ ಪಾಂಡವರ ಆಸ್ತಿಯನ್ನು ಅನ್ಯಾಯವಾಗಿ ಅಪಹರಿಸಿದುದು ತಪ್ಪೆಂದು ಹೇಳದವರೇ ಇಲ್ಲ. ನೀನು ಇಷ್ಟುಮಾತ್ರ ತಿಳಿದುಕೊಳ್ಳದೆ ಮಗನ ಮೇಲಣ ಮರುಕದಿಂದ ಅವನಿಗೆ ತಕ್ಕ ಬುದ್ಧಿ ಕಲಿಸಲು ಯತ್ನಿಸದೆ ಇರುವುದು ಸರಿಯಲ್ಲ. ಇಷ್ಟರ ಮೇಲೆ ನಿನ್ನಿಷ್ಟ.

ಧೃತ:—ನಾನು ಎಷ್ಟು ಹೇಳಿದರೂ ಆ ಮೂರ್ಖನು ಕೇಳಲೊಲ್ಲನು. ನಾನೇನು ಮಾಡಲಿ? ಅವನ ಪ್ರಾಪ್ತಿಯಂತೆ ಬಂದುದನ್ನು ಅನುಭವಿಸಲಿ. ನಮ್ಮ ಪಾಂಡವರು ಎಲ್ಲಿ ವಾಸವಾಗಿರುವರು? ಅವರೆಲ್ಲಾ ಕುಶಲದಿಂದ ಇರುವರೇ? ಇಲ್ಲಿಯ ಸಮಾಚಾರವನ್ನು ಕೇಳಿ ಏನೆಂದರು? ಅವರ ಸಂಗಡ ಎಷ್ಟು ಪರಿವಾರವಿದೆ? ಯುಧಿಷ್ಠಿರನು ಏನು ಮಾಡಿಕೊಂಡಿರುವನು? ಭೀಮನ ಅಭಿಪ್ರಾಯವೇನು?

ವಿದುರ:—ರಾಯನೇ ಕೇಳು, ಆ ಪಾಂಡವರು ಕಾಮ್ಯಕವನದಲ್ಲಿ ಕ್ಷೇಮದಿಂದ ಇರುವರು ಅವರು ಗಂಗಾನದಿಯನ್ನು ದಾಟಿ ಮುಂದಕ್ಕೆ ಹೋದ ಮೇಲೆ ತಮ್ಮ ಸಂಗಡ ಬಂದಿದ್ದ ಜನರಿಗೆಲ್ಲಾ ಊಟ ಉಪಚಾರಗಳಿಗೆ ಏನುಮಾಡಬೇಕೆಂದು ಚಿಂತಿಸುತ್ತಿರುವಾಗ ಧೌಮ್ಯನ ಉಪದೇಶದಿಂದ ಯುಧಿಷ್ಠಿರನು ಸೂರ್ಯನನ್ನು ಧ್ಯಾನಿಸಿದನು. ಕೂಡಲೇ ಆ ಭಗವಂತನು ಪ್ರಸನ್ನನಾಗಿ ಬಂದು ಒಂದು ಅಕ್ಷಯಪಾತ್ರೆಯನ್ನು ಅನುಗ್ರಹಿಸಿದನು ಪತಿವ್ರತೆಯಾದ ದ್ರೌಪದಿಯು ಮಡಿಯುಟ್ಟುಕೊಂಡು ಆ ಪಾತ್ರೆಯನ್ನು ಕೈಯಲ್ಲಿ ಹಿಡಿದ ಕೂಡಲೇ ಅವರಲ್ಲಿ ಬೇಕಾದ ಆಹಾರಪದಾರ್ಥಗಳೆಲ್ಲಾ ಸಮೃದ್ಧಿಯಾಗಿ ತುಂಬಿರುವುವು. ಎಷ್ಟು ಮಂದಿಗೆ ಬಡಿಸುತ್ತಾ ಬಂದರೂ ಆ ಪಾತ್ರೆಯು ಬರಿದಾಗದೆ ಪದಾರ್ಥಗಳು ಪೂರ್ಣವಾಗಿಯೇ ಇರುವುವು. ಭಕ್ಷ್ಯಭೋಜ್ಯಾದಿ ವಿವಿಧ ವಸ್ತುಗಳಿಂದ ಪರಿಪೂರ್ಣವಾದ ಮೃಷ್ಟಾನ್ನ ಭೋಜನವನ್ನು ಮಾಡಿಸಿ ಆ ಪಾಂಡವರು ಸಂತೋಷದಿಂದ ತಾವೂ ಊಟಮಾಡಿಕೊಂಡು ಸುಖವಾಗಿರುವರು ಸರ್ವರಿಗೂ ಊಟಗಳಾದ ಮೇಲೆ ದ್ರೌಪದಿಯು ಭೋಜನ ಮಾಡುವಳು. ಬಳಿಕ ಪಾತ್ರೆಯು ಬರಿದಾಗುವುದು. ಆ ಪಾಂಡವರ ಸಂಗಡ ಬಂದು ಲಕ್ಷ ಮಂದಿ ಬ್ರಾಹ್ಮಣರೂ ಇತರ ಪರಿಜನರೂ ಯಾವಾಗಲೂ ವಾಸಮಾಡಿಕೊಂಡಿರುವರು. ಸತ್ಯಸಂಧರಾಗಿಯೂ, ಶೂರರಾಗಿಯೂ ಇರುವ ಅವರಿಗೆ ಯಾವ ಕೊರ

ತೆಯೂ ಇಲ್ಲ. ಭೀಮಸೇನನ ಪರಾಕ್ರಮಕ್ಕೆ ಯಾವ ಕೊರ ತೆಯೂ ಇಲ್ಲ.

ಧೃತ:—ತಮ್ಮಾ, ಅವರ ಏಳಿಗೆಯನ್ನು ಕೇಳಿ ಬಲು ಸಂತೋಷವಾ ಯಿತು. ಆ ಕಾಮ್ಯಕವನದಲ್ಲಿ ಕಿರ್ಮ್ಮೀರನೆಂಬ ಕ್ರೂರರಾಕ್ಷಸ ನೊಬ್ಬನಿದ್ದನಂತೆ! ಅವನನ್ನು ಪಾಂಡವರು ಕೊಂದುಹಾಕಿದ ರೆಂಬ ವರ್ತಮಾನವನ್ನು ಕೇಳಿದೆನು. ಆ ಸಮಾಚಾರವೇನು?

ವಿದುರ:—ಕುರುಪತಿಯೇ ಕೇಳು. ಹಿಂದೆ ಆ ಪಾಂಡವರು ಏಕಚಕ್ರ ಪುರಕ್ಕೆ ಹೋಗುತ್ತಿದ್ದಾಗ ದಾರಿಯಲ್ಲಿ ಭೀಮಸೇನನು ಹಿಡಿಂಬ ನೆಂಬ ರಾಕ್ಷಸನನ್ನು ಕೊಂದು ಅವನ ತಂಗಿಯಾದ ಹಿಡಿಂಬಿಯನ್ನು ಮದುವೇ ಮಾಡಿಕೊಂಡ ವರ್ತಮಾನ ಕೇಳಿರುವಿಯಷ್ಟೆ! ಅವನ ಬಂಧುವಾಗಿಯೂ, ಏಕಚಕ್ರಪುರದಲ್ಲಿದ್ದ ಬ್ರಾಹ್ಮಣರನ್ನೆಲ್ಲಾ ತಿಂದು ತೇಗಿ, ಆ ಅಗ್ರಹಾರವನ್ನೇ ನಾಶಮಾಡುತ್ತಿದ್ದ ಬಕಾಸುರ ನಿಗೆ ಒಡಹುಟ್ಟಿದವನಾಗಿಯೂ ಇದ್ದ ಕಿರ್ಮ್ಮೀರನೆಂಬ ದೈತ್ಯನೊ ಬ್ಬನು ಆ ವನದಲ್ಲಿ ವಾಸಮಾಡಿಕೊಂಡಿದ್ದನು. ಪಾಂಡವರು ಆ ವನಕ್ಕೆ ಬಂದಿರುವರೆಂಬ ಸುದ್ದಿಯನ್ನು ತಿಳಿದು ಅವನು ಒಂದು ರಾತ್ರಿ ಅಲ್ಲಿಗೆ ಬಂದು, ಅವರನ್ನು ಅಡ್ಡಗಟ್ಟಿ ಎದುರಿಸಿ ಯುದ್ಧಕ್ಕೆ ನಿಂತನು. ಭಯಂಕರರೂಪವುಳ್ಳ ಅವನನ್ನು ಕಂಡು, ಪಾಂಡ ವರ ಸಂಗಡ ಇದ್ದ ಜನರೆಲ್ಲರೂ ಹೆದರಿ ಓಡಲಾರಂಭಿಸಿದರು. ದ್ರೌಪದಿಯು ಭೀತಳಾಗಿ ಭೀಮಾರ್ಜುನರ ಮರೆಯಲ್ಲಿ ನಿಂತು ಕೊಂಡಳು. ಆಗ ಧೌಮ್ಯನು ರಕ್ಷೋಘ್ನ ಮಂತ್ರವನ್ನು ಜಪಿ ಸುತ್ತಾ, ಹೆದರಬೇಡಿರೆಂದು ಅಲ್ಲಿದ್ದ ಜನರನ್ನು ಸಂತೈಸುತ್ತಿದ್ದನು.

ಧೃತ:—ಆಹಾ! ಅವನು ಅಷ್ಟರ ಸಮರ್ಥನೆ? ಆಮೇಲೆ ಏನಾಯಿತು?

ವಿದುರ:—ಆ ರಾಕ್ಷಸನು ಪಾಂಡವರನ್ನು ನೋಡಿ, ನನ್ನ ಬಂಧುಜನರನ್ನು ಕೊಂದುಹಾಕಿದ ನಿಮ್ಮನ್ನು ಕೊಂದು ತಿಂದು ತೇಗಿದ ಹೊರತು ನನ್ನ ಮನಸ್ಸಿನ ದಂದುಗವು ಕಾಂದದು. ನಿಮ್ಮನ್ನು ಸಂಹರಿಸಿ ನಿಮ್ಮ ಬಿಸಿರಕ್ತದಿಂದ ನನ್ನ ಬಂಧುಗಳಿಗೆ ತರ್ಪಣ ಕೊಡುವೆನು. ನನ್ನ ಬಲವು ನಿಮಗಿನ್ನೂ ತಿಳಿದಿಲ್ಲವೇನು? ಇಲ್ಲಿಂದ ತಪ್ಪಿಸಿ

ಕೊಂಡು ಹೋಗಬಲ್ಲಿರಾ? ನಿಲ್ಲಿರಿ ನಿಲ್ಲಿರಿ ಎಂದು ಗದರಿಸಿದನು. ಅರ್ಜುನನು ಆ ಕಿರ್ಮೀರನಾನವನನ್ನು ಕೊಲ್ಲಬೇಕೆಂದು ಬಿಲ್ಲಿನಲ್ಲಿ ಅಂಬನ್ನು ಹೂಡಿದನು. ಆಗ ಭೀಮಸೇನನು ತಮ್ಮನನ್ನು ತಡೆದು, ತಾನೇ ಆ ಘೋರ ರಾಕ್ಷಸನೊಂದಿಗೆ ಕಾದಲಿಕ್ಕೆ ಸಿದ್ಧನಾಗಿ ನಿಂತನು. ಸಮಾನಬಲರಾದ ಅವರಿಬ್ಬರೂ ಆ ಕಾಡಿನಲ್ಲಿ ಬೆಳೆದಿದ್ದ ದೊಡ್ಡ ದೊಡ್ಡ ಮರಗಳನ್ನು ಉರುಳಿಸಿ, ಅವುಗಳನ್ನು ಒಬ್ಬರ ಮೇಲೆ ಒಬ್ಬರು ಬಿಸುಡುತ್ತಾ, ದೊಡ್ಡ ದೊಡ್ಡ ಬಂಡೆಗಳನ್ನು ಕಿತ್ತು ಅವುಗಳನ್ನು ತೆಗೆದು ಹೊಡೆಯುತ್ತಾ, ಬಹಳ ಹೊತ್ತಿನ ತನಕ ಭಯಂಕರವಾಗಿ ಯುದ್ಧಮಾಡುತ್ತಿದ್ದರು. ನಮ್ಮ ಭೀಮಸೇನನು ಸಾಮಾನ್ಯನೇ? ಮಲ್ಲಯುದ್ಧದಲ್ಲಿ ಸಮರ್ಥನೆಂದು ವಿಖ್ಯಾತನಾಗಿರುವ ಆತನು ಕಿರ್ಮೀರನನ್ನು ಹೊಡೆದು ಕೆಡಹಿದನು. ಆ ದಡಿಗ ರಾಕ್ಷಸನು ನೆತ್ತರನ್ನು ಕಾರುತ್ತಾ ನೀಲ ಗಿರಿಯಂತೆ ನೆಲದಲ್ಲಿ ಮಡಿದು ಬಿದ್ದೊರಗಿದನು. ಲೋಕಕಂಟಕನಾಗಿದ್ದ ಆ ದೈತ್ಯನು ಸತ್ತುಹೋದುದನ್ನು ನೋಡಿ, ಪಾಂಡವರ ಸಂಗಡ ಇದ್ದ ಜನರೂ, ಆ ಕಾಡಿನಲ್ಲಿದ್ದ ಮುನಿಜನರೂ ಭಯವನ್ನು ಬಿಟ್ಟು, ಬಹು ಸಂತೋಷದಿಂದ ಶೂರನಾದ ಭೀಮಸೇನನನ್ನು ಹೊಗಳುತ್ತಿದ್ದರು. ಬಳಿಕ ಪಾಂಡವರು ನಿಷ್ಕಂಟಕವಾದ ಆ ಅರಣ್ಯದಲ್ಲಿ ವಿಸ್ತಾರವಾದ ಪರ್ಣಶಾಲೆಗಳನ್ನು ಕಟ್ಟಿಕೊಂಡು ಅಲ್ಲಿಯೇ ಸುಖವಾಗಿ ವಾಸಮಾಡುತ್ತಿರುವರು.

ಧೃತ:—ತಮ್ಮಾ, ಆ ಪಾಂಡವರು ಎಲ್ಲಿದ್ದರೂ ಪರೋಪಕಾರಾರ್ಥವಾಗಿಯೇ ಪ್ರಯತ್ನಪಡುತ್ತಿರುವರು. ಧರ್ಮಾತ್ಮನಾದ ಯುಧಿಷ್ಠಿರನು ದೈವಭಕ್ತನಾಗಿಯೂ, ಪಾಪಭೀರುವಾಗಿಯೂ ಇರುವುದರಿಂದ ಕೇಡಿನ ಮೇಲೆ ಕೇಡು ಬರುತ್ತಿದ್ದರೂ ದೈವಾನುಗ್ರಹದಿಂದ ಬಿರುಗಾಳಿಗೆ ಸಿಕ್ಕಿದ ಮೇಘರಾಶಿಯಂತೆ ಆ ವಿಪತ್ತುಗಳು ಮಾಯವಾಗಿ ಹೋಗುತ್ತಿರುವುವು. ದೈವವನ್ನು ನಂಬಿದವರಿಗೆ ಎಂದಿಗೂ ಅಪಾಯವಿಲ್ಲ.

ಎಂದು ಹೇಳಿ ಮುಂದಿನ ಸಮಾಚಾರವೇನೆಂದು ಕೇಳಿದನು ವಿದುರನು ಮತ್ತೇನು ಸಮಾಚಾರ ಹೇಳಬೇಕು ? ಬ್ರಾಹ್ಮಣರೆಲ್ಲರೂ ಆ ಯುಧಿಷ್ಠಿರನ ಆಶ್ರಯದಲ್ಲಿ ಸುಖದಿಂದ ಇದ್ದುಕೊಂಡು ಆತನನ್ನು ಹರಸುತ್ತಿರುವರು. ತಳಿರ್ಗಳಿಂದ ಅಲಂಕರಿಸಲ್ಪಟ್ಟ ಪರ್ಣಶಾಲೆಗಳೇ ಅವರಿಗೆ ಸುಂದರಗಳಾದ ರಾಜಮಂದಿರಗಳಾಗಿರುವುವು ಗಿತಗಳ ಮೆಳೆಗಳೇ ಮಂಟಪಗಳು. ಪೊದರುಗಳೇ ನೆಳಲಾಗಿರುವುವು. ಮಹಾವೃಕ್ಷಗಳ ತಳದಲ್ಲಿ ಕಟ್ಟಿರುವ ಜಗತಿಕಟ್ಟೆಗಳೇ ಧರ್ಮರಾಯನ ಸಭಾಭವನವಾಗಿರುವುವು ಈ ರಾಜ್ಯೈಶ್ವರ್ಯಗಳನ್ನು ಮರೆಯಿಸುವಷ್ಟು ಸುಖಮಯವಾದ ಆ ಅರಣ್ಯದಲ್ಲಿ ಪಾಂಡವರು ಯಾವ ಚಿಂತೆಯೂ ಇಲ್ಲದೆ ದಿವ್ಯವಾದ ಕಂದಮೂಲ ಫಲಗಳನ್ನೇ ಅಮೃತಾನ್ನವಾಗಿ ಭಕ್ಷಿಸುತ್ತಾ, ಮೃಗಪಕ್ಷಿಗಳ ಶ್ರಾವ್ಯಧ್ವನಿಗಳೇ ಮಂಗಳವಾದ್ಯಗಳೆಂದು ತಿಳಿದುಕೊಂಡು, ಭಗವದ್ಧ್ಯಾನತತ್ಪರರಾಗಿ ಸುಖದಿಂದ ಇರುವರೆಂದು ಹೇಳಿದನು.



## ಎರಡನೆಯ ಸಂಧಿ.

ಸೂಚನೆ:—ಶ್ರೀ ಕೃಷ್ಣನು ತನ್ನ ಸೋದರತ್ತೆಯ ಮಕ್ಕಳಾದ ಪಾಂಡವರು ವನವಾಸ ಮಾಡುತ್ತಿರುವರೆಂದು ಕೇಳಿ, ಅವರನ್ನು ಸಂತೈಸುವುದಕ್ಕೋಸ್ಕರ ದ್ವಾರಕೆಯಿಂದ ಕಾಮ್ಯಕವನಕ್ಕೆ ಬಂದು ಸಮಾಧಾನದ ಮಾತುಗಳನ್ನು ಹೇಳಿ ಹಿಂದಿರುಗಿ ಹೋದನು.

ಪಾಂಡವರು ಜೂಜಿನಲ್ಲಿ ದೇಶಕೋಶಾದಿ ಸಮಸ್ತ ವಸ್ತುಗಳನ್ನೂ ಕಳೆದುಕೊಂಡು ಕೌರವರೊಂದಿಗೆ ಮಾಡಿಕೊಂಡ ಪ್ರತಿಜ್ಞೆಯಂತೆ ಅರಣ್ಯದಲ್ಲಿ ವಾಸಮಾಡುತ್ತಿರುವರೆಂಬ ಸುದ್ದಿಯು ಶ್ರೀ ಕೃಷ್ಣನಿಗೆ ಮುಟ್ಟಿತು. ಅವನು ಈ ಮಾತನ್ನು ಕೇಳಿ ತಲೆತೂಗಿ, ಆಶ್ಚರ್ಯದಿಂದ ಮೂಗಿನ ಮೇಲೆ ಬೆರಳಿಟ್ಟುಕೊಂಡು, ಚಿಂತೆಯಿಂದಲೂ, ಸಂಕಟದಿಂದಲೂ ಕೊರಗುತ್ತಾ ಉತ್ಸಾಹಹೀನನಾಗಿ ಸಂದೇಶವನ್ನು ಹೇಳಿದ ದೂತರನ್ನು ನೋಡಿ "ಅಯ್ಯೊ! ಏನಿದು ? ತನ್ನ ಸೋದರತ್ತೆಯ ಮಗನಾಗಿ ರಾಜಕುಲತಿಲ

ಕನಿಸಿದ ಯುಧಿಷ್ಠಿರನ ಏಳಿಗೆಯು ಕಪಟದ್ಯೂತದಿಂದ ಕುಂದಿತೆ? ದುರಾತ್ಮರಾದ ಕೌರವರು ಮೋಸದಿಂದ ಧರ್ಮರಾಯನ ರಾಜ್ಯವನ್ನಪಹರಿಸಿದರೆ? ನಿಷ್ಕಪಟಿಗಳಾಗಿಯೂ, ಪರಹಿಂಸೆ ಮಾಡದವರಾಗಿಯೂ, ಸಜ್ಜನವಂದಿತರಾಗಿಯೂ ಇರುವ ನಮ್ಮ ಪಾಂಡವರಿಗೆ ಎಂತಹ ದುರ್ದಶೆಯು ಸಂಭವಿಸಿತಪ್ಪ!" ಎಂದು ದುಃಖದಿಂದ ನಿಟ್ಟುಸಿರುಗಳನ್ನು ಬಿಡುತ್ತಿದ್ದನು ಪರಮಾತ್ಮನ ಅವತಾರವಾದ ಶ್ರೀ ಕೃಷ್ಣನು ಈ ರೀತಿಯಾಗಿ ಚಿಂತಿಸುತ್ತಿರುವುದನ್ನು ಕಂಡು, ಬಹುಕುಟುಂಬಿಗನಾದ ಯದುಪತಿಯ ಬಾಂಧವಪ್ರೇಮವು ಎಷ್ಟರದೋ? ಎಂದು ಸಾಮಾನ್ಯರು ಆಡಿಕೊಳ್ಳುತ್ತಿದ್ದರು. ಇನ್ನು ಕೆಲವು ಮೂರ್ಖರು ಅವನಂತೆಯೇ ಪಾಂಡವರ ಕಷ್ಟಕ್ಕಾಗಿ ತಾವೂ ದುಃಖಿಸುತ್ತಿದ್ದರು. ತತ್ವಜ್ಞಾನಿಗಳಾದ ಕೆಲವರು ಮಾತ್ರ ಶ್ರೀಮನ್ನಾರಾಯಣನು ಭೂಭಾರವನ್ನು ಪರಿಹರಿಸುವುದಕ್ಕಾಗಿ ಈ ಲೋಕದಲ್ಲಿ ಅವತರಿಸಿ ಕಂಸಾದಿ ದುಷ್ಟದಾನವರನ್ನು ಕೊಂದುಹಾಕಿದನೆಂತಲೂ, ಕೌರವ ಪಾಂಡವರ ಮನಸ್ಸಿನಲ್ಲಿ ಮತ್ಸರವನ್ನು ಹುಟ್ಟಿಸಿ, ಅದು ಪ್ರಬಲ ದ್ವೇಷಕ್ಕೆ ಕಾರಣವಾಗುವಂತೆ ಮಾಡಿದನೆಂತಲೂ ತಿಳಿದುಕೊಂಡಿದ್ದರು.

ಬಳಿಕಲಾ ಶ್ರೀ ಕೃಷ್ಣನು ಇಂತಹ ಕಷ್ಟಕಾಲದಲ್ಲಿ ಪಾಂಡವರನ್ನು ವಿಚಾರಿಸಿಕೊಂಡು ಬರಬೇಕಾದುದು ಪರಮಧರ್ಮವೆಂದು ತಿಳಿದು ರಾಣಿವಾಸದೊಂದಿಗೆ ಕಾಮ್ಯಕವನಕ್ಕೆ ಪ್ರಯಾಣ ಮಾಡಿದನು. ಆತನ ಸಂಗಡ ಬಂಧುಬಳಗಗಳೂ, ಯದುಸೈನ್ಯವೂ ಹೊರಟವು. ಅವರು ಬಹು ವೇಗವಾಗಿ ಪ್ರಯಾಣ ಮಾಡುತ್ತಾ ಕೆಲವು ದಿನಗಳಲ್ಲಿಯೇ ಅರಣ್ಯಕ್ಕೆ ಬಂದು ಸೇರಿದರು ಪಾಂಡವರ ವನವಾಸದ ಸುದ್ದಿಯನ್ನೂ, ಅವರನ್ನು ವಿಚಾರಿಸುವುದಕ್ಕೆ ಶ್ರೀ ಕೃಷ್ಣನು ದಯಮಾಡಿಸಿದ ವರ್ತಮಾನವನ್ನೂ ಕೇಳಿ, ಅವರ ಆಪ್ತಬಂಧುಗಳಾದ ಪಾಂಚಾಲರಾಯನು, ಕೈಕಯರಾಯನು, ವರಾಳನು, ಧೃಷ್ಟಕೇತುವು, ಕುಂತಿಭೋಜನು, ಸೃಂಜಯನು, ಸೋಮಕನು, ಮೊದಲಾದ ರಾಜರು ಪಾಂಡವರನ್ನು ಹುಡುಕಿಕೊಂಡು ಕಾಮ್ಯಕವನಕ್ಕೆ ಬಂದರು. ಮಿತ್ರರಾಜರಾದ ಇನ್ನೂ

ಕೆಲವು ದೇಶಾಧೀಶರು ಅವರ ಮೇಲಣ ಪ್ರೀತಿಯಿಂದ ಕಷ್ಟಕಾಲದಲ್ಲಿ ಉಪಚಾರೋಕ್ತಿಗಳನ್ನು ಹೇಳಿ ಹೋಗಬೇಕೆಂದು ಬರುತ್ತಿದ್ದರು.

ಈ ರೀತಿಯಲ್ಲಿ ತಮ್ಮ ಕಷ್ಟವನ್ನು ವಿಚಾರಿಸಲಿಕ್ಕೆ ಬಂದ ಬಂಧು ಮಿತ್ರಜನರನ್ನು ಸತ್ಕರಿಸಲು ಯುಧಿಷ್ಠಿರನು ಮೊದಲೇ ತಕ್ಕ ಏರ್ಪಾಡುಗಳನ್ನು ಮಾಡಿದ್ದನು. ಆ ರಾಜರು ಬರುವಾಗ್ಗೆ ಅವರನ್ನು ಎದುರುಗೊಂಡು ಕರೆದುತರಲು ಬ್ರಾಹ್ಮಣರೊಂದಿಗೆ ತನ್ನ ತಮ್ಮಂದಿರನ್ನು ಕಳುಹುತ್ತಿದ್ದನು. ಹಿರಿಯರಿಗೆ ನಮಸ್ಕಾರಗಳನ್ನೂ ಕಿರಿಯರಿಗೆ ಆಶೀರ್ವಾದಗಳನ್ನೂ ಸಮಾನಸ್ಕಂಧರಿಗೆ ಆಲಿಂಗನಗಳನ್ನೂ ಮಾಡಿ, ಉಚಿತ ಸತ್ಕಾರಗಳಿಂದ ಉಪಚರಿಸಿ; ಕ್ಷೇಮಸಮಾಚಾರವನ್ನು ವಿಚಾರಿಸುತ್ತಿದ್ದನು. ಬಳಿಕ ಪಾಂಡವರೈವರೂ ಬಂದು ಶ್ರೀ ಕೃಷ್ಣನ ಪಾದಗಳಲ್ಲಿ ನಮಸ್ಕರಿಸಿ ಕಣ್ಣೀರಿನಿಂದ ಆತನ ಚರಣಗಳನ್ನು ತೊಳೆದರು. ಆಗ ಶ್ರೀ ಕೃಷ್ಣನು ಅವರನ್ನೆಲ್ಲಾ ಪ್ರತ್ಯೇಕವಾಗಿ ಎತ್ತಿ ಅಪ್ಪಿಕೊಂಡು, ತನ್ನ ಪೀತಾಂಬರದ ಸೆರಗಿನಿಂದ ಅವರ ಕಣ್ಣೀರನ್ನೊರಸುತ್ತಾ, ಯುಧಿಷ್ಠಿರನನ್ನು ನೋಡಿ "ಭಾವಾ! ಗ್ರಹಚಾರದೋಷದಿಂದ ಮನುಷ್ಯರಿಗೆ ಕಷ್ಟಗಳು ಸಂಭವಿಸುತ್ತಿರುವುವು. ಅಂತಹ ವಿಪತ್ಕಾಲದಲ್ಲಿ ಎದೆಗುಂದದೆ ಧೈರ್ಯದಿಂದ ಇರಬೇಕು. ಕಷ್ಟಸುಖಗಳು ಸ್ಥಿರವಲ್ಲ. ಕತ್ತಲೆ ಬೆಳದಿಂಗಳುಗಳಂತೆ ಅವು ಕೆಲವು ದಿನಗಳು ಮಾತ್ರವಿದ್ದು ತೊಲಗಿಹೋಗುತ್ತಿರುವುವು ಧೀರರಾದ ನೀವು ಇದಕ್ಕೆ ಚಿಂತಿಸಬೇಡಿರಿ. ಕಾಲವು ಬೇಗ ಬೇಗ ಬರುತ್ತಿರುವುದು. ಹನ್ನೆರಡು ವರುಷಗಳೂ ನಿಮಗೆ ಹನ್ನೆರಡು ದಿನಗಳಂತೆ ಕಳೆದುಹೋಗುವುವು. ಬಳಿಕ ನಿಮಗೆ ದೈವಾನುಗ್ರಹದಿಂದ ಶುಭವುಂಟಾಗುವುದು" ಎಂದು ಸಮಾಧಾನ ವಾಕ್ಯಗಳನ್ನು ಹೇಳುತ್ತಿದ್ದನು.

ಅಷ್ಟರಲ್ಲಿ ದ್ರೌಪದೀದೇವಿಯು ಶ್ರೀ ಕೃಷ್ಣನ ದರ್ಶನಕ್ಕೋಸ್ಕರ ಹೊರಟುಬಂದಳು. ಆಕೆಯು ಅಳುತ್ತಿರುವ ಶಬ್ದದಿಂದ ದಿಕ್ಕುಗಳೆಲ್ಲವೂ ಬರಲುತ್ತಿರುವುವೋ ಎಂಬಂತೆ ತೋರುತ್ತಿದ್ದಿತು. ಕೆದರಿದ ಮಂಡೇ ಕೂದಲುಗಳಿಂದ ಶರೀರವು ಮುಚ್ಚಿಹೋಗಿರಲು ಆಕೆಯು ಶ್ರೀ ಕೃಷ್ಣನ ಅಡಿದಾವರೆಗಳಲ್ಲಿ ಬಿದ್ದು, ಕಣ್ಣೀರು ಸುರಿಸುತ್ತಾ ಆ ಸ್ವಾಮಿಯನ್ನು ಇಂತೆಂದು ಸ್ತುತಿಸಿದಳು.

ಎಲೈ ವೇದವೇದ್ಯನಾದ ಪರಮಾತ್ಮನೇ, ಹಿಂದೆ ತುಂಬಿದ ಸಭೆಯಲ್ಲಿ ದುರುಳ ದುಶ್ಶಾಸನನು ನನ್ನ ಮಾನಭಂಗ ಮಾಡಬೇಕೆಂದು ಸೀರೆಯನ್ನು ಸುಲಿಯುತ್ತಿದ್ದಾಗ ನೀನು ಅಕ್ಷಯಾಂಬರಗಳನ್ನಿತ್ತು ನನ್ನನ್ನು ರಕ್ಷಿಸಿದೆಯಲ್ಲಾ! ದಯಾಸಮುದ್ರನಾದ ನೀನು ನನ್ನ ಮೊದಲನೆಯ ಪ್ರಾರ್ಥನೆಗೇನೇ ಮೈದೋರಿ ಅನುಗ್ರಹಿಸಿದುದು ನಿನ್ನ ಆಶ್ರಿತವಾತ್ಸಲ್ಯವನ್ನು ಪ್ರಕಟಗೊಳಿಸುವುದು. ಎಲೈ ಭಗವಂತನೇ, ವೇದಗಳು ಹಲವು ಬಗೆಯಿಂದ ಸ್ತುತಿಸಿದರೂ ನೀನು ಪ್ರತ್ಯಕ್ಷನಾಗತಕ್ಕವನಲ್ಲ. ಪತಿವ್ರತಾ ಸ್ತ್ರೀಯರಿಗೂ ಗೋಚರನಾಗತಕ್ಕವನಲ್ಲ. ಸರ್ವಸಂಗಪರಿತ್ಯಾಗ ಮಾಡಿದ ಯತಿಗಳ ಪ್ರಾರ್ಥನೆಗೂ ನೀನು ಪ್ರಸನ್ನನಾಗಲೊಲ್ಲೆ. ಜ್ಞಾನಿಗಳು ಹಲವು ವಿಧವಾಗಿ ಬೇಡಿಕೊಂಡರೂ ನಿನ್ನ ಅನುಗ್ರಹವುಂಟಾಗುವುದು ಕಷ್ಟವು. ಇಂತಹ ಪರಬ್ರಹ್ಮಸ್ವರೂಪನಾದ ನೀನು ದೀನಳಾದ ನನ್ನ ಮೊರೆಯನ್ನು ಕೇಳಿದ ಕೂಡಲೇ ನನ್ನಲ್ಲಿ ಅನುಗ್ರಹಿಸಿ, ಸ್ತ್ರೀಧನವಾದ ನನ್ನ ಲಜ್ಜಾಸ್ಥಿತಿಯನ್ನು ರಕ್ಷಿಸಿದೆಯಲ್ಲಾ! ಸ್ವಾಮಿಾ, ಇದಕ್ಕಾಗಿ ನಿನಗೆ ಎಷ್ಟು ವಂದಿಸಿದರೂ ಸಾಲದು. ಎಲೈ ದೇವಾ, ಆ ವೇಳೆಯಲ್ಲಿ ಈ ನನ್ನ ಪತಿಗಳು ಧರ್ಮಸ್ಥಿತಿಯನ್ನು ಚಿಂತಿಸಿ ಲೋಕಾಪವಾದಕ್ಕೋಸ್ಕರ ಹೆದರಿದರು. ಪಿತರರಾದ ವಿದುರ ಧೃತರಾಷ್ಟ್ರರೂ, ಅಜ್ಜನಾದ ಭೀಷ್ಮನೂ, ಗುರುಗಳಾದ ದ್ರೋಣ ಕೃಪಾಶ್ವತ್ಥಾಮರೂ ನನ್ನ ದುರ್ದಶೆಯನ್ನು ನೋಡುತ್ತಿದ್ದರೂ ಆ ದುರುಳರಿಗೆ ಬುದ್ಧಿ ಹೇಳಲಾರದೆ ತಲೆತಗ್ಗಿಸಿಕೊಂಡರು. ನಿರ್ಗತಿಕಳಾದ ನನಗೆ ನೀನೇ ಗತಿ. ರಕ್ಷಿಸೆಂದು ಪ್ರಾರ್ಥಿಸಿದ ಮಾತ್ರಕ್ಕೇನೇ ಮೈದೋರಿದ ಕರುಣಾಮೂರ್ತಿಯಾದ ನಿನಗೆ ವಂದಿಸುವೆನು.

ಎಲೈ ಮಹಾಮಹಿಮನೇ, ನೀನು ಪ್ರಹ್ಲಾದ, ಮಾರ್ಕಂಡೇಯ, ಗಜೇಂದ್ರ, ಅಂಬರೀಷ ಮುಂತಾದ ಭಕ್ತಜನರನ್ನು ರಕ್ಷಿಸಿದೆ. ಪರಮಪಾಪಿಯಾದ ಅಜಾಮಿಳನು ಸಾಯುವ ವೇಳೆಯಲ್ಲಿ ತನ್ನ ಮಗನನ್ನು ನೆನೆದು ನಿನ್ನ ನಾಮೋಚ್ಚಾರಣೆ ಮಾಡಿದಮಾತ್ರದಿಂದಲೇ ಅವನನ್ನು ಕಾಪಾಡಿ, ಮುಕ್ತಿಯನ್ನು ಕರುಣಿಸಿದೆ. ಪರಮ ಕಷ್ಟಕ್ಕೆ ಗುರಿಯಾಗಿ ಪ್ರಾಣಗಳು ಹೋದರೂ ಚಿಂತೆಯಿಲ್ಲ, ಮಾನಸಂರಕ್ಷಣೆಯಾದರೆ

ಸೋಕೆಂದು ನಿನ್ನನ್ನು ಧ್ಯಾನಿಸಿದ ಮಾತ್ರದಿಂದಲೇ ಈ ದೀನಳಲ್ಲಿ ಕರು ಣಿಸಿ, ನನ್ನ ಅಭಿಮಾನವನ್ನು ರಕ್ಷಿಸಿದೆ ಎಂದು ಹೊಗಳುತ್ತಿದ್ದಳು.

ಆಗ ಶ್ರೀ ಕೃಷ್ಣನು, "ತಂಗೀ! ಅಳಬೇಡ ಏಳು, ನೀನು ಬಹ ಳವಾಗಿ ನೊಂದೆ" ಎಂದು ಅವಳನ್ನು ಎತ್ತಿ ಹಿಡಿದು ಕಣ್ಣೀರನ್ನೊರಸಿ, ಮೈಗೆ ಹತ್ತಿದ್ದ ಧೂಳಿಯನ್ನು ಕೊಡಹಿದನು ಪೊರೆಯನ್ನು ಕಳೆದ ಹಾವಿನಂತೆ ಆ ಪಾಂಚಾಲಿಗೆ ದುಃಖವು ಉಕ್ಕಿ ಉಕ್ಕಿ ಬರುತ್ತಿರಲು, ಅದನ್ನು ಕಂಡು, ಸುತ್ತಲೂ ಇದ್ದ ಬ್ರಾಹ್ಮಣರೂ, ಋಷಿಗಳೂ, ರಾಜರೂ, ಸ್ತ್ರೀಜನರೂ ಮರುಕದಿಂದ ಕಣ್ಣೀರು ಸುರಿಸುತ್ತಿದ್ದರು. ಆಗ ಶ್ರೀ ಕೃಷ್ಣನು ಅವಳನ್ನು ಸಮಾಧಾನಪಡಿಸತ್ತೊಡಗಿ ಇಂತೆಂದನು.

ಶ್ರೀ ಕೃಷ್ಣ:—ಎಲಾ ದ್ರೌಪದೀ! ಮುಡಿಯನ್ನು ಕಟ್ಟಿಕೋ. ಇದೋ ಹೊಸ ಸೀರೆಗಳನ್ನು ತಂದಿರುವೆನು. ಇವುಗಳನ್ನು ಧರಿಸು ಮನ ಸ್ಸಿನ ಚಿಂತೆಯನ್ನು ಬಿಡು. ದುರ್ಯೋಧನನ ರಾಜಸಂತತಿಯು ಉರಿದುಹೋಯಿತೆಂದು ತಿಳಿ. ಖೂಳ ನಾಯಿಗಳು ನಿನ್ನನ್ನು ಕೆಣಕಿ ತಮ್ಮ ಅಪಾಯಕ್ಕೆ ತಾನೇ ದಾರಿಯನ್ನು ಮಾಡಿಕೊಂಡು ಕೆಟ್ಟರು. ಹೇಳಿಕೊಂಡರೆ ಫಲವಿಲ್ಲ. ಈ ವನವಾಸದ ಗಡುವು ಮುಗಿಯುವ ತನಕ ಸೈರಿಸಿಕೊಂಡು ಇರಮ್ಮಾ. ನಿನಗೆ ಎಲ್ಲವೂ ಅನುಕೂಲವಾಗುವುದು.

ದ್ರೌಪದಿ:—(ನಗುತ್ತಾ) ಎಲೈ ಲೋಕನಾಯಕನೇ, ಸಕಲ ಪ್ರಾಣಿಗಳ ಹೃದಯದಲ್ಲಿಯೂ ಸಾಕ್ಷಿಯಾಗಿದ್ದುಕೊಂಡು ಸರ್ವಜ್ಞನಾಗಿರುವ ನಿನಗೆ ತಿಳಿಯದೆ ಇರುವ ವಿಷಯವು ಏನಾದರೂ ಇರುವುದೆ? ನಾನು ಯಾವಾಗ ತುರುಬನ್ನು ಗಂಟುಹಾಕಿ ಕಟ್ಟುವೆನೆಂಬ ಪ್ರತಿ ಜ್ಞೆಯನ್ನು ನೀನರಿಯೆಯಾ? ನನ್ನ ಮುಡಿ ಹಿಡಿದೆಳೆದ ದುಶ್ಶಾಸ ನನ ಕರುಳಿನ ರಕ್ತದಲ್ಲಿ ಅದ್ದಿ ಕಟ್ಟಬೇಕಾದ ತುರುಬನ್ನು ಈಗ ಹೇಗೆ ಕಟ್ಟಲಿ? ಹೇಳು.

ಶ್ರೀ ಕೃಷ್ಣ:—(ಮೆಚ್ಚಿಗೆಯಿಂದ) ಭಲಾ! ನಿನ್ನ ಪ್ರತಿಜ್ಞೆಯು ಚೆ ಲ್ವದು. ಭೀಮಾರ್ಜುನರ ಪರಾಕ್ರಮದ ಇದಿರಿಗೆ ಕುನ್ನಿಗಳಾದ ದುರ್ಯೋಧನಾದಿಗಳು ಎಷ್ಟುಮಾತ್ರದವರು? ಆ ನೀಚನ ರಕ್ತ

ದಲ್ಲಿ ನಿನ್ನ ಮುಡಿಯನ್ನು ನಾನು ಕಟ್ಟಿಸುವೆನು. ಅಮ್ಮಾ, ಆತುರ ಪಡಬೇಡ. ನಿನ್ನ ಪ್ರತಿಜ್ಞೆಯು ನನ್ನದಲ್ಲವೇ ? ತಪಸ್ವಿನಿಯಾದ ನಿನ್ನನ್ನು ಆ ಖೂಳ ನಾಯಿಗಳು ಕೆಣಕಿ ತಮ್ಮ ಕೇಡಿಗೆ ತಾವೇ ಗುದ್ದಲಿ ಹಾಕಿಕೊಂಡರು. ಪ್ರಸಿದ್ಧವಾದ ಭರತರಾಯನ ವಂಶವು ಹಣ್ಣುಬಿಟ್ಟ ಬಾಳೆಯ ಗಿಡದಂತೆ ಬರಡಾಗಿ ಹೋಗುವುದು. ಕುರುಡನಾದ ಧೃತರಾಷ್ಟ್ರನಿಗಂತು ಕಣ್ಣು ಕಾಣಿಸದು. ಕಣ್ಣುಳ್ಳ ವಿದುರಭೀಷ್ಮಾದಿಗಳೂ ನಿನ್ನ ಸ್ಥಿತಿಯನ್ನು ನೋಡಿ ಹೇಗೆ ಸೈರಿಸಿ ಕೊಂಡಿದ್ದರೋ ಕಾಣೆನು. ಶಕುನಿಯು ಕಲ್ಪಿಸಿದ ಕಪಟದ ಜೂಜಿನ ಫಲದಿಂದ ನೀವು ಈ ಅರಣ್ಯವಾಸಕ್ಕೆ ಬರಬೇಕಾಯಿತು. ಆ ದ್ಯೂತ ಕಾಲದಲ್ಲಿ ನಾನಿದ್ದದ್ದರೆ ಇಷ್ಟು ಅನರ್ಥಕ್ಕೆ ಅವಕಾಶ ಉಂಟಾಗುತ್ತಿರಲಿಲ್ಲ.

ದ್ರೌಪದಿ:—ಅಣ್ಣಯ್ಯಾ! ಇದೇನು ಹೀಗೆ ಹೇಳುವೆ ! ಸಕಲ ಜೀವಿಗಳ ಕರ್ಮಕ್ಕೆ ಸಾಕ್ಷಿಯಾಗಿ ಸರ್ವಾಂತರ್ಯಾಮಿಯಾಗಿರುವ ನೀನು ಇಲ್ಲದ ಸ್ಥಳವೊಂದುಂಟೆ ? ನನ್ನ ಸಂಗಡ ಸುಳ್ಳಾಡಿ ಮರಳುಗೊಳಿಸುವೆಯಾ ? ಇದನ್ನು ನಾನು ಒಪ್ಪಲಾರೆನು.

ಶ್ರೀ ಕೃಷ್ಣ:—ತಾಯಿ! ನಾನೆಂದಿಗೂ ಸುಳ್ಳು ಕತೆಕಟ್ಟುವನೇ ಅಲ್ಲ. ನಿಜ ಸ್ಥಿತಿಯನ್ನು ಹೇಳುವೆನು ಕೇಳು. ನಿಮ್ಮ ರಾಜಸೂಯದ ಕಾಲ ದಲ್ಲಿಯೇ ದುಷ್ಟರಾದ ರಾಕ್ಷಸರು ಬಂದು ನಮ್ಮ ದ್ವಾರಕಾನಗರ ವನ್ನು ಮುತ್ತಿಗೆ ಹಾಕಿದರು. ಆಗ ಪಟ್ಟಣದಲ್ಲಿ ಬಲರಾಮನೂ ಪ್ರದ್ಯುಮ್ನನೂ ಮುಂತಾದ ವೀರರು ಇದ್ದುದರಿಂದ ಅವರೊಂದಿಗೆ ಕಾದಿ ಸೋಲಿಸಿ, ಹಿಂದಕ್ಕಟ್ಟಿದರು. ಯಜ್ಞವನ್ನು ತೀರಿಸಿ ಕೊಂಡು ನಾನು ದ್ವಾರಕೆಗೆ ಹೋದಮೇಲೆ ಈ ಸುದ್ದಿ ತಿಳಿಯಿತು. ಆಗ ನಾನು ಆ ದುರುಳರ ಗರ್ವಭಂಗ ಮಾಡಿ ಮುಯ್ಯಿ ತೀರಿಸ ಬೇಕೆಂದು ಸಾಲ್ವನ ಪಟ್ಟಣದ ಮೇಲೆ ದಂಡೆತ್ತಿ ಹೋದೆನು. ಮಾಯಾಪುರದಲ್ಲಿದ್ದ ಅವನನ್ನೂ ಅವನ ಅನುಯಾಯಿಗಳಾದ ಶೂರ ರಾಕ್ಷಸರನ್ನೂ ಯುದ್ಧದಲ್ಲಿ ಸಂಹಾರ ಮಾಡಿ ದ್ವಾರಕೆಗೆ ಬರುವ ಷ್ಟರಲ್ಲಿ ನಿಮ್ಮ ಜೂಜಾಟದ ಸೋಲೂ ನಿನ್ನ ವಿಪತ್ತೂ ತಿಳಿದು

ಬಂದುವು. ನಾನು ಇದ್ದೂ ನಿಮಗೆ ಸಹಾಯ ಮಾಡಲಿಕ್ಕಿಲ್ಲದೆ ಹೋಯಿತಲ್ಲಾ ! ಎಂದು ವ್ಯಸನಪಡುತ್ತೇನೆ. ದೈವವಿಲಾಸಕ್ಕೆ ಯತ್ನವಿಲ್ಲ.

ದ್ರೌಪದಿ:—ಅಣ್ಣಾ ! ಕೇಳು, ನೀನು ದ್ವಾರಕೆಯಲ್ಲಿಯೇ ಇರು. ಅಥವಾ ನಮ್ಮ ಪಟ್ಟಣದಲ್ಲಿಯೇ ಇರು. ಅಥವಾ ದೂರದಲ್ಲಿರು. ಇಲ್ಲವೇ ಹತ್ತಿರದಲ್ಲಿಯೇ ಇರು. ನಿನ್ನ ಕೃಪಾಕಟಾಕ್ಷವು ಈ ಪಾಂಡವರ ಮೇಲೆ ಇರಲಿ. ನೀನು ಭಕ್ತಜನರಿಗೆ ಆಧಾರಭೂತನು. ಪರಮ ದಯಾಳು. ನಾವಂತು ಅನಾಥರೆಂಬದು ನಿನಗೆ ತಿಳಿದೇ ಇದೆ. ನಮ್ಮನ್ನು ರಕ್ಷಿಸುವ ಭಾರವು ನಿನಗೆ ಸೇರಿದ್ದು. ಅಜಾಮಿಳನು ಮಗನನ್ನು ಕರೆದಾಗ ಯಮನ ದೂತರನ್ನು ನೀನು ಅಟ್ಟಿ ಓಡಿಸಿದೆಯಂತೆ ! ಆಗ ಹತ್ತಿರದಲ್ಲಿಯೇ ಇದ್ದೆಯಾ ? ಕೃಷ್ಣಾ ! ಶ್ರಿಯಃ ಪತಿಯೇ ! ಎಂದು ಮುನಿಕುಮಾರನಾದ ಮಾರ್ಕಂಡೇಯನು ಮೃತ್ಯುಭಯದಿಂದ ಪ್ರಾರ್ಥಿಸುವಾಗ ಯಮನ ಗಂಟಲ ತುತ್ತಾಗಿ ಸಿಕ್ಕಿದ್ದ ಆ ಬಾಲಕನನ್ನು ನೀನು ಉಗುಳಿಸಲಿಲ್ಲವೆ ? ಆಗ ನೀನು ಎಷ್ಟರ ದೂರದಲ್ಲಿದ್ದೆ ! ಜಗನ್ಮಯನಾದ ನೀನು ಮಾತಿನಲ್ಲಿ ಬಲು ಜಾಣನಲ್ಲವೆ ? (ಎಂದು ಪುನಃ ಕಾಲಿನ ಮೇಲೆ ಬಿದ್ದಳು )

ಶ್ರೀ ಕೃಷ್ಣ:—(ಕನಿಕರದಿಂದ) ತಂಗೀ ! ಚಿಂತಿಸಬೇಡ. ಆದುದಾಯಿತು. ಏಳಮ್ಮಾ ! ನೀನು ಹೆಚ್ಚು ಕಷ್ಟಗಳನ್ನು ಅನುಭವಿಸಲಿಕ್ಕಾಗಿಯೇ ಹುಟ್ಟಿರುವೆ. ಯುಧಿಷ್ಠಿರನ ಭಾಷೆಯು ವ್ಯರ್ಥವಾಗಬಾರದು. ಭೀಮಸೇನನ ಪ್ರತಿಜ್ಞೆಯೂ ನೆರವೇರಲಿ. ನಿನ್ನ ಪ್ರತಿಜ್ಞೆಗೆ ನಾನೇ ಹೊಣೆಯಾಗಿರುವೆನು. ತಪ್ಪುವುದಿಲ್ಲ.

ಈ ರೀತಿಯಲ್ಲಿ ಶ್ರೀ ಕೃಷ್ಣನು ದ್ರೌಪದಿಗೆ ಕೈಮೇಲೆ ಕೈಹಾಕಿ ನಂಬುಗೆ ಮಾಡಿಕೊಟ್ಟು ಯುಧಿಷ್ಠಿರಾದಿಗಳನ್ನೂ ಪ್ರತ್ಯೇಕವಾಗಿ ಭರವಸೆಯ ಮಾತುಗಳಿಂದ ಸಂತೈಸಿ, ಯುಧಿಷ್ಠಿರನನ್ನು ನೋಡಿ, “ಭಾವಾ ! ಹದಿಮೂರು ವರುಷಗಳ ಕಾಲ ನೀವು ಈ ಜನಸಮುದಾಯವನ್ನೂ ಮಕ್ಕಳುಮರಿಗಳನ್ನೂ ಹೇಗೆ ಸಂರಕ್ಷಿಸಿಕೊಂಡಿರುವಿರಿ ? ಬಹು ಕಷ್ಟಕ್ಕೆ ಬಂದಿದೆ. ಅಭಿಮನ್ಯುವನ್ನೂ ಸುಭದ್ರೆಯನ್ನೂ

ನನ್ನೊಂದಿಗೆ ಕಳುಹಿರಿ. ದ್ರೌಪದೀ ಪುತ್ರರಾದ ಉಪಪಾಂಡವರಯ್ವ
ರನ್ನೂ ದ್ರುಪದರಾಯನ ಸಂಗಡ ಕಳುಹಿಸಿಕೊಡಿರಿ. ನಿಮ್ಮ ಅವಧಿಯು
ಪೂರಯಿಸುವ ತನಕ ಇವರು ಅಜ್ಜನ ಮನೆಯಲ್ಲಿ ವಾಸಮಾಡಿಕೊಂಡಿ
ರಲಿ. ದ್ರೌಪದಿಯು ಹೊರತು ಉಳಿದ ನಿಮ್ಮ ಪತ್ನಿಯರನ್ನೂ ಅವರ
ಪರಿವಾರ ಸಹಿತವಾಗಿ ಅವರವರ ತೌರುಮನೆಗಳಿಗೆ ಕಳುಹಿರಿ. ಈ ಅರ
ಣ್ಯವಾಸದ ಗತುಬವು ತೀರಲಿ. ದ್ರೌಪದಿಯ ಕೋಪಾಗ್ನಿಗೆ ಕುರುಕು
ಲವೆಂಬುದು ಕರತು ಹುಲ್ಲಿನ ಬಣವೆಯಾಗಿ ಉರಿದುಹೋಗುವುದೆಂದು
ನಂಬಿರಿ. ನನ್ನ ಮಾತು ಎಂದಿಗೂ ಸುಳ್ಳಾಗುವುದಿಲ್ಲ" ಎಂದು ಹೇಳಿ
ಸಮಾಧಾನ ಮಾಡಿದನು.

ಆಗ ಪಾಂಚಾಲರಾಯನು ಮಗಳ ಮತ್ತು ಅಳಿಯಂದಿರ ಕಷ್ಟದ
ಶೆಗೆ ತುಂಬ ಮರುಗಿ ಅವರಿಗೆ ಸಮಾಧಾನ ಹೇಳಿದನು. ತಂಗಿಯ ದುಃಖ
ದಿಂದ ಖಿನ್ನರಾದ ಶಿಖಂಡಿ ಧೃಷ್ಟದ್ಯುಮ್ನರು ಭೀಷ್ಮದ್ರೋಣರನ್ನು
ನಾವು ಸಂಹಾರ ಮಾಡುವೆನೆಂತಲೂ ನಿಮ್ಮ ಪ್ರತಿಜ್ಞೆಯ ಜತೆಗೆ
ಇದನ್ನೂ ಸೇರಿಸಿಕೊಳ್ಳುವುದೆಂತಲೂ ಸಮಾಧಾನ ಹೇಳಿ ತಮ್ಮ ರಾಜಧಾ
ನಿಗೆ ಹೊರಟರು.

ಈ ಮಧ್ಯದಲ್ಲಿ ಒಂದು ದಿನ ಪಾಂಡುರಾಯನ ಶ್ರಾದ್ಧದಿನವು ಬಂದು
ದರಿಂದ ಅದನ್ನು ಪೂರಯಿಸಿಕೊಂಡು ಹೊರಡಬೇಕೆಂದು ಧರ್ಮರಾ
ಯನು ಶ್ರೀ ಕೃಷ್ಣನನ್ನು ಪ್ರಾರ್ಥಿಸಲು ಯಜ್ಞಪುರುಷನಾದ ಆ
ಸ್ವಾಮಿಯು ಒಪ್ಪಿ ಅಲ್ಲಿಯೇ ನಿಂತನು. ಮೃತತಿಥಿಯ ಪೂರ್ವದಿನ
ಶ್ರೀ ಕೃಷ್ಣನು ಯುಧಿಷ್ಠಿರನನ್ನು ನೋಡಿ "ಅಯ್ಯಾ! ನಾಳೆ ಅಯುದ್ಧ
ಮಂದಿ ಬ್ರಾಹ್ಮಣರಿಗೆ ಆಮಂತ್ರಣ ಹೇಳು. ದೂರ್ವಾಸ ಧೌಮ್ಯಮು
ನಿಗಳಿಬ್ಬರನ್ನೂ ವಿಶ್ವೇದೇವಸ್ಥಾನಕ್ಕೆ ಪ್ರಾರ್ಥಿಸು. ವ್ಯಾಸ ಕೌಶಿಕ
ಮಹರ್ಷಿಗಳಿಬ್ಬರನ್ನೂ ಮುಖ್ಯಸ್ಥಾನದಲ್ಲಿ ಕ್ಷಣಿಸು. ಪ್ರಪಿತಾಮಹನ
ಸ್ಥಾನಕ್ಕೆ ಜೈಮಿನಿ ಮುನಿಗೆ ಆತಿಥ್ಯವನ್ನು ಕೊಡು. ಶ್ರಾದ್ಧಸಂರಕ್ಷಣೆಗೆ
ನಮ್ಮನ್ನು ವರಿಸು" ಎಂದು ಹೇಳಿದನು. ಧರ್ಮರಾಯನು ಶ್ರೀ ಕೃಷ್ಣನ
ಆಜ್ಞೆಯಂತೆ ನಾಲ್ವರು ಮಹರ್ಷಿಗಳಿಗೂ ಕ್ಷಣವನ್ನು ಕೊಟ್ಟನು.
ಜೈಮಿನಿ ಮುನಿಯು ಇರುವ ಸ್ಥಳವು ಗೊತ್ತಾಗಿಲ್ಲ. ಏನುಮಾಡಬೇ

ಕೆಂದು ಕೇಳಲು ಶ್ರೀ ಕೃಷ್ಣನು “ಅಯ್ಯಾ! ಆತನ ಆಶ್ರಮವು ಹಿಮ ಗಿರಿಯ ಬತ್ತಿನಲ್ಲಿರುವ ನೀಲಪರ್ವತದಲ್ಲಿರುವುದು. ಶ್ರಾದ್ಧಕಾರ್ಯಕ್ಕೆ ಬರಬೇಕೆಂದು ಪ್ರಾರ್ಥಿಸಿದರೆ ಆತನು ತಪ್ಪದೆ ಬರುವನು. ನಮ್ಮ ಭೀಮಸೆನ್ನು ಕಳುಹಿ ಕರೆಯಿಸು” ಎಂದನು. ಬಳಿಕ ಯುಧಿಷ್ಠಿರನ ಅಪ್ಪಣೆ ಪಡೆದು ಭೀಮನು ಜಾಗ್ರತೆಯಲ್ಲಿ ಹೋಗಿ ಆ ಮಹರ್ಷಿಯನ್ನು ಕರೆದುಕೊಂಡು ಬಂದನು. ಸ್ವಾಮಿಯ ಆಜ್ಞೆಯಂತೆ ಪಿತೃಯಜ್ಞವು ಸಾಂಗವಾಗಿ ನೆರವೇರಿತು.

ಈ ಬಳಿಕ ಶ್ರೀ ಕೃಷ್ಣನು ಸುಭದ್ರಾರ್ಜುನರನ್ನು ತಮ್ಮವರೊಂದಿಗೆ ದ್ವಾರಕೆಗೆ ಪ್ರಯಾಣ ಮಾಡಿಸಿ, ಉಪಪಾಂಡವರನ್ನು ಪಾಂಚಾಲರಾಯನ ಸಂಗಡ ಕಳುಹಿಸಿ ಕೊಟ್ಟನು. ಪಾಂಡವರ ಪತ್ನಿಯರಯ್ಯರನ್ನೂ ಅವರವರ ತೌರುಮನೆಯವರು ಕರೆದುಕೊಂಡು ಹೋದರು. ಬಳಿಕ ಶ್ರೀ ಕೃಷ್ಣನು ಮರಳಿ ದ್ರೌಪದಿಗೆ ಸಮಾಧಾನ ವಾಕ್ಯಗಳನ್ನು ಹೇಳಿ ಯಾದವರೊಂದಿಗೆ ಹೊರಟನು. ಪಾಂಡವರು ಆತನನ್ನು ಸಾಗಕಳುಹಿ ಬಂದ ಮೇಲೆ, ಕುಂತೀಭೋಜ, ಕೈಕಯ ಮೊದಲಾದ ರಾಜರನ್ನೆಲ್ಲಾ ಅವರವರ ರಾಜಧಾನಿಗಳಿಗೆ ಪ್ರಯಾಣ ಮಾಡಿ ಕಳುಹಿದರು.

ಬಂದಿದ್ದ ಬಂಧುಜನರೆಲ್ಲರೂ ತಮ್ಮ ತಮ್ಮ ನೆಲೆಗಳಿಗೆ ಹೊರಟು ಹೋದ ಬಳಿಕ ಯುಧಿಷ್ಠಿರನು ಪತ್ನೀಸಹೋದರರಿಂದೊಡಗೂಡಿ ಅಲ್ಲಿಂದ ಮುಂದೆ ಮತ್ತೊಂದು ವನಕ್ಕೆ ಪ್ರಯಾಣ ಮಾಡಿ, ಅಲ್ಲಿ ಪರ್ಣಶಾಲೆಗಳನ್ನು ಕಟ್ಟಿಸಿಕೊಂಡು ಕೆಲವು ಕಾಲ ವಾಸವಾಗಿದ್ದನು.

---

## ಮೂರನೆಯ ಸಂಧಿ.

---

ಸೂಚನೆ:— ಭೀಮಸೇನನು ವನದಲ್ಲಿ ಸಂಚರಿಸುತ್ತಿರುವಾಗ ಕಣ್ವಮುನಿಯ ಆಶ್ರಮದ ಬಳಿಯಲ್ಲಿದ್ದ ಒಂದು ನೇರಿಳೆ ಹಣ್ಣನ್ನು ತರಲು ಅದರಿಂದ ಅನರ್ಥವುಂಟಾಗುವುದೆಂದು ಕೇಳಿ ಯುಧಿಷ್ಠಿರನು ಸಂಕಟಪಡುತ್ತಿರುವಾಗ ಶ್ರೀಕೃಷ್ಣನು ಬಂದು ಆ ಹಣ್ಣನ್ನು ಮರದ ಮೇಲಕ್ಕೆ ಏರಿಸಿ ದ್ವಾರಕೆಗೆ ಹೋದನು.

ಯುಧಿಷ್ಠಿರನು ಪತ್ನೀಸಹೋದರರ ಸಹಿತನಾಗಿ ಮುನಿಜನಗಳೊಂದಿಗೆ ಆ ವನದಿಂದ ಹೊರಟು ಮತ್ತೊಂದು ಕಾಡಿಗೆ ಹೋಗಿ ಸೇರಿದನು. ಪಟ್ಟಣವಾಸಕ್ಕಿಂತಲೂ ಅರಣ್ಯವಾಸವೇ ಅವರಿಗೆ ಬಹು ರಮಣೀಯವಾಗಿ ತೋರುತ್ತಿದ್ದಿತು. ದಾರಿಯಲ್ಲಿ ಸಿಂಹ, ಹುಲಿ, ಕರಡಿ ಮುಂತಾದ ಹಲವು ಬಗೆಯ ಮೃಗಗಳು ಸಂಚರಿಸುತ್ತಿದ್ದುವು. ಸಾವಿರಾರು ಜಾತಿಯ ಪಕ್ಷಿಗಳು ಸುಶ್ರಾವ್ಯಮಧುರಗಾನದಿಂದ ಕರ್ಣಾನಂದಗೊಳಿಸುತ್ತಿದ್ದವು. ಸರೋವರಗಳಲ್ಲಿ ಕಮಲ ಕಲ್ಹಾರ ಮುಂತಾದ ವಿವಿಧ ಕುಸುಮಗಳು ತುಂಬಿದ್ದುದರಿಂದ ಅವುಗಳ ಮಕರಂದ ಪಾನಕ್ಕಾಗಿ ಮರಿದುಂಬಿಗಳು ಹಿಂಡುಹಿಂಡಾಗಿ ಬಂದೆರಗುತ್ತಿದ್ದುವು. ವೃಕ್ಷಗಳಲ್ಲಿ ಬಗೆಬಗೆಯ ಹಣ್ಣು ಹಂಪಲುಗಳು ಚೆನ್ನಾಗಿ ಮಾಗಿ, ತಮ್ಮ ವರ್ಣದಿಂದಲೂ ವಾಸನೆಯಿಂದಲೂ ಜನರ ಕಣ್ಣನ್ನೂ ಮೂಗನ್ನೂ ಸಂತೋಷಗೊಳಿಸುತ್ತಿದ್ದುವು. ಇಂತಹ ದರ್ಶನೀಯ ಪ್ರದೇಶಗಳುಳ್ಳ ಅರಣ್ಯದ ಒಂದು ಭಾಗದಲ್ಲಿ ಪರ್ಣಶಾಲೆಗಳನ್ನು ಕಟ್ಟಿಸಿಕೊಂಡು ಒಂದೆರಡು ತಿಂಗಳಲ್ಲಿ ಅಲ್ಲಿ ವಾಸಮಾಡುತ್ತಾ, ಅಲ್ಲಿ ಬೇಸರ ತೋರಿದರೆ ಅಲ್ಲಿಂದ ಮುಂದೆ ಸ್ವಲ್ಪ ದೂರ ಹೋಗಿ ಮತ್ತೊಂದು ದೇಶದಲ್ಲಿ ಸ್ಥಳಮಾಡಿಕೊಂಡು ಅಲ್ಲಿ ಕೆಲವು ದಿನಗಳಿರುತ್ತಾ ಪಾಂಡವರು ತಮ್ಮ ಸಂಗಡ ಇದ್ದ ಜನರಿಗೆ ಯಾವ ಕೊರತೆಯೂ ತೋರದಂತೆ ತಕ್ಕ ಅನುಕೂಲತೆಗಳನ್ನು ಕಲ್ಪಿಸಿಕೊಡುತ್ತಿದ್ದರು. ಯುಧಿಷ್ಠಿರನು ತನ್ನ ಧರ್ಮವನ್ನು ಬಿಡದೆ, ನಿತ್ಯವೂ ಸತ್ಕರ್ಮಗಳನ್ನು ಆಚರಿಸುತ್ತಾ, ಮುನಿಜನರಿಂದ ಸತ್ಕಥೆಗಳನ್ನೂ, ವಿಶೇಷ ಧರ್ಮಗಳನ್ನೂ ಕೇಳಿ ತಿಳಿಯುತ್ತಾ ಸತ್ಕಾಲಕ್ಷೇಪದಲ್ಲಿ ಇದ್ದನು.

ಹೀಗೆ ಕೆಲವು ಕಾಲ ಕಳೆದ ಮೇಲೆ ಬಂದಾನೊಂದು ವಸಂತಋತುವಿನಲ್ಲಿ ಆ ಯುಧಿಷ್ಠಿರನು ಮುನಿಜನಗಳನ್ನೆಲ್ಲಾ ಬಗೆಬಗೆಯ ಹಣ್ಣು ಹಂಪಲುಗಳಿಂದ ಸಂತೃಪ್ತಿಗೊಳಿಸಿ, ಯಾವಾಗಲೂ ಆ ಮಹನೀಯರ ಸಹವಾಸದಲ್ಲಿಯೇ ಸ್ನಾನ, ಭೋಜನ, ಪಾನ, ವೇದವೇದಾಂತಗಳ ಅರ್ಥ ವಿಚಾರ ಇವುಗಳಲ್ಲಿಯೇ ಕಾಲ ಕಳೆಯುತ್ತಾ ಆ ಮಧುಮಾಸವು ಪೂರಯಿಸುವ ತನಕ ಕಾಡಿನಲ್ಲಿಯೇ ವಾಸಮಾಡಿಕೊಂಡಿದ್ದನು. ಅಷ್ಟರಲ್ಲಿ ಗ್ರೀಷ್ಮರ್ತುವು ಹುಟ್ಟಿತು. ಸೂರ್ಯನ ತಾಪವು ದುಸ್ಸಹವಾಗಿ, ಅಕೊ

ರಾತ್ರಿಗಳನ್ನು ಕಳೆಯುವುದು ಬಹು ಕಷ್ಟವೆನಿಸುತ್ತಿತ್ತು. ಆ ಕಾಲ
ದಲ್ಲಿ ನೇರಿಳೆ ಹಣ್ಣುಗಳು ವಿಶೇಷವಾಗಿದ್ದುದರಿಂದ ಅವುಗಳನ್ನು ಬ್ರಾಹ್ಮ
ಣರಿಗೆ ಕೊಟ್ಟು ಅವರ ದಾಹಶಾಂತಿ ಮಾಡಬೇಕೆಂಬ ಬುದ್ಧಿಯು ಪಾಂಡ
ವರಿಗೆ ಹುಟ್ಟಿತು. ಆ ವನಪ್ರಾಂತದಲ್ಲಿದ್ದ ಜಾಂಬೂಫಲಗಳೆಲ್ಲವೂ ನಾಲ್ಕ
ಯ್ದು ದಿನಗಳಲ್ಲಿಯೇ ತೀರಿಹೋದುವು. ಮುಂದೆ ಎಷ್ಟು ದೂರ ಹೋಗಿ
ಹುಡುಕಿದರೂ ಆ ಹಣ್ಣುಗಳು ಸಿಕ್ಕದೆ ಹೋದವು. ಪಾಂಡವರು ಅವು
ಗಳಿಗಾಗಿ ಸುತ್ತಿ ಸುತ್ತಿ ಬೇಸತ್ತು ಬಂದು, ಹಣ್ಣು ದೊರೆತಿಲ್ಲವೆಂದು
ಹೇಳುತ್ತಿದ್ದರು. ಬ್ರಾಹ್ಮಣರಿಗೆಲ್ಲಾ ಭೋಜನವಾದ ಮೇಲೆ ತಮ್ಮ
ಸಂಕಲ್ಪದಂತೆ ಜಾಂಬೂಫಲಗಳು ಸಿಕ್ಕಲಿಲ್ಲವೆಂದು ಅವರೈವರೂ, ಪತ್ನಿ
ಯಾದ ದ್ರೌಪದಿಯೂ ಆಹಾರವನ್ನು ಸ್ವೀಕರಿಸದೆ ಉಪವಾಸ ಮಾಡುತ್ತಾ
ಬಂದರು. ಹೀಗೆ ಪಂಚರಾತ್ರಿಗಳು ಕಳೆದುಹೋದುವು.

ಆ ಮರುದಿನ ಬೆಳಗ್ಗೆ ಬೇಟೆಗೆ ಬರಬೇಕೆಂದು ಬೇಡರು ಬಂದು
ಪ್ರಾರ್ಥಿಸಲು ಭೀಮಸೇನನು ಅವರೊಂದಿಗೆ ಮೃಗಯಾವಿಹಾರಾರ್ಥವಾಗಿ
ಹೊರಟನು. ಕಿರಾತರ ಹಾವಳಿಗೆ ಹೆದರಿ ಆ ವನದಲ್ಲಿದ್ದ ಸಿಂಹ, ಹೆಬ್ಬು
ಲಿ, ಚಿರತೆ, ತೋಳ, ಕಾಡುಹಂದಿ, ಆನೆಗಳು ಮುಂತಾದ ಪ್ರಾಣಿಗಳೆಲ್ಲ
ನಿಂತಲ್ಲಿ ನಿಲ್ಲದೆ ದಿಕ್ಕುಪಾಲಾಗಿ ಓಡಿಹೋದುವು. ಬೇಡರು ಬೇಟೆಯ
ನಾಯಿಗಳ ಕೊರಳಿಗೆ ಕಟ್ಟಿದ್ದ ಹಗ್ಗಗಳನ್ನು ಸೆಳೆಯುತ್ತಾ ಬೀಸುವ
ಬಲೆ, ಬೀಸುವ ದೊಣ್ಣೆ, ಕಲುಕಣ್ಣಿ, ಬಿಲ್ಲು, ಬಾಣ, ಕತ್ತಿ ಮುಂತಾದ
ಸಾಧನಗಳನ್ನು ಧರಿಸಿ, ತಮ್ಮ ಪದ್ಧತಿಗೆ ತಕ್ಕಂತೆ ಗಾಜಿನ ಒಡವೆಗಳಿಂದ
ಲೂ, ಚಿಗುರು ಮತ್ತು ಹೂವಿನ ಅಲಂಕಾರಗಳಿಂದಲೂ ಸಿಂಗರಿಸಿ
ಕೊಂಡು ತಮ್ಮೊಡೆಯನಾದ ಭೀಮಸೇನನ ಹಿಂದೆ ಓಡುತ್ತಿದ್ದರು. ಶೂರ
ನಾದ ಆ ಮಾರುತಿಯು ಸಿಂಹಗಳನ್ನು ಕಡಿದು ಬಿಸುಡುತ್ತಿದ್ದನು; ಆನೆ
ಗಳ ಕಾಲುಹಿಡಿದು ಸೀಳಿ ಬಗೆಯುತ್ತಿದ್ದನು. ಬಲವಾಗಿ ಗರ್ಜಿಸುತ್ತಾ
ಹೆಬ್ಬುಲಿಗಳನ್ನು ಹಿಡಿದು ಅಪ್ಪಳಿಸುತ್ತಿದ್ದನು; ಕಾಡುಹಂದಿಗಳನ್ನು ಕೆಡ
ಹಿ ಬಿಸುಟನು. ಈ ರೀತಿಯಲ್ಲಿ ಶೌರ್ಯವನ್ನು ಪ್ರಕಟಿಸಿ ಬೇಟೆಯಾಡು
ತ್ತಿರುವ ಭೀಮಸೇನನನ್ನು ಕಂಡು ಶಬರರ ಸೇನೆಯು ಮೈಯ್ಯಿಂದ
ಬೆವರು ಸುರಿಯುತ್ತಿರಲು, ಎಡಹಿ ಮುಗ್ಗರಿಸುವುದು ಕೂಡ ಗಣಿಸದೆ,

ಓಟದಿಂದ ನಿಟ್ಟುಸಿರು ಬಿಡುತ್ತಾ ಬಹು ಸಂಭ್ರಮದಿಂದ ಓಡಿಯಾಡಿ, ಸಿಕ್ಕಿದ ಮೃಗಗಳನ್ನು ಕೊಲ್ಲುತ್ತಲೂ, ಮರೆಯಲ್ಲಿ ಅಡಗಿಕೊಂಡ ಮೃಗಗಳನ್ನು ಹೊರಕ್ಕೆ ಓಡಿಸಿ ದಂಡಿಸುತ್ತಲೂ, ಓಡಿಹೋಗುವ ಮೃಗಗಳ ಬೆನ್ನುಹತ್ತಿ ಹೋಗಿ ಹಿಡಿದು ಕೆಡಹುತ್ತಲೂ ಆ ಕಾಡಿನಲ್ಲಿದ್ದ ಪ್ರಾಣಿಗಳ ಸಂಖ್ಯೆಯನ್ನು ಬಹುಮಟ್ಟಿಗೆ ತಗ್ಗಿಸಿಬಿಟ್ಟರು. ಬೇಟೆಯ ಕೆಲಸವೆಲ್ಲಾ ಮುಗಿದ ಬಳಿಕ ಭೀಮಸೇನನು ಬೇಟೆಯಲ್ಲಿ ಹತವಾದ ಪ್ರಾಣಿಗಳನ್ನೆಲ್ಲಾ ಒಂದು ಕಡೆ ಕೂಡಿಸಿಟ್ಟು, ಆ ವ್ಯಾಧರಿಗೆಲ್ಲಾ ಅವರವರ ಯೋಗ್ಯತೆಗೆ ತಕ್ಕಂತೆ ಅವುಗಳನ್ನು ಹಸುಗೆ ಮಾಡಿಕೊಟ್ಟನು. ಅವರು ತಮ್ಮ ತಮ್ಮ ಪಾಲಿಗೆ ಬಂದುವುಗಳನ್ನು ಆ ಕಾಡಿನಲ್ಲಿಯೇ ಬೇಯಿಸಿ, ವಿನೋದದಿಂದ ಮಾಂಸವನ್ನು ಭಕ್ಷಿಸುತ್ತಾ ಕಾಲ ಕಳೆಯುತ್ತಿದ್ದರು.

ಭೀಮಸೇನನು ಆ ಸಮೀಪದಲ್ಲಿದ್ದ ಒಂದು ವನವನ್ನು ಹೊಕ್ಕು ಅಲ್ಲಿದ್ದ ಮರಗಳನ್ನೂ ಅವುಗಳ ಹೂ ಹಣ್ಣುಕಾಯಿಗಳನ್ನೂ ನೋಡಿ ಆನಂದಿಸುತ್ತಿರುವಾಗ ಅವುಗಳ ಮಧ್ಯದಲ್ಲಿ ದೊಡ್ಡದಾದ ನೇರಿಳೆಯ ಮರವೊಂದು ಬಲು ಅಂದವಾಗಿ ಕಂಗೊಳಿಸುತ್ತಿದ್ದಿತು. ಆ ವೀರನು ಆ ಜಂಬೂವೃಕ್ಷದ ಸೊಬಗನ್ನು ನೋಡಿ ಆನಂದಿಸುತ್ತಿರುವಾಗ ಅದರಲ್ಲಿ ಬಹು ದೊಡ್ಡ ಒಂದು ಹಣ್ಣು ಕಾಣಿಸಿತು. ಅದನ್ನು ನೋಡಿ ಆತನು ಅತ್ಯಾಶ್ಚರ್ಯಗೊಂಡು, “ಆಹಾ! ಇದೇನು ವಿಚಿತ್ರವಾಗಿದೆ! ನೇರಿಳೆಹಣ್ಣು ಇಷ್ಟು ಗಾತ್ರವಿರುವುದಲ್ಲ! ಇಂತಹ ಹಣ್ಣನ್ನು ನಾನು ನೋಡಿದುದೇ ಇಲ್ಲ. ದೊಡ್ಡ ಆನೆಯ ಗಾತ್ರವಿರುವ ಈ ಹಣ್ಣಿನ ರುಚಿಯೂ ಬಹಳ ಮಧುರವಾಗಿಯೇ ಇರಬಹುದು. ಇದನ್ನು ಕೊಂಡೊಯ್ದು ಅಣ್ಣಯ್ಯನಿಗೆ ಸಮರ್ಪಿಸಿದರೆ ಬಹು ಸಂತೋಷ ಪಡುವನು. ಅಯ್ದು ದಿನಗಳಿಂದ ನೇರಿಲುಹಣ್ಣು ಸಿಕ್ಕದೆ ಇರುವುದರಿಂದ ವ್ರತವು ಸಾಂಗವಾಗಲಿಲ್ಲವೆಂದು ಎಲ್ಲರೂ ಉಪವಾಸದಿಂದ ಇರುವೆವು. ನಮ್ಮ ಪಾರಣೆಗೆ ಉತ್ತಮ ಫಲವು ದೊರೆಯಿತು” ಎಂದು ಯೋಚಿಸಿ, ತನ್ನ ಕಾಂಕುಳಲ್ಲಿ ಗದೆಯನ್ನು ಇರಿಕಿಸಿಕೊಂಡು ಅತ್ಯಾತುರದಿಂದ ಮರವನ್ನೇರಿ ಜಂಬೂಫಲವನ್ನು ಕೊಯ್ದುಕೊಂಡು ಇಳಿದು ಬಂದನು ಬಳಿಕ ಅಲ್ಲಿಸಿಲ್ಲನೆ ಹಣ್ಣನ್ನು ತಲೆಯ ಮೇಲೆ ಹೊತ್ತುಕೊಂಡು ಅವಸರವಸರದಿಂದ

ಯುಧಿಷ್ಠಿರನ ಬಳಿಗೆ ಬಂದು ಅದನ್ನಾತನ ಸನ್ನಿಧಿಯಲ್ಲಿ ಒಪ್ಪಿಸಲು ಸೋದರಸಹಿತನಾದ ಆ ರಾಜನೂ, ಹತ್ತಿರ ಇದ್ದ ಮುನಿಜನರೂ ಬಹು ಗಾತ್ರವಾಗಿದ್ದ ಆ ಜಂಬೂಫಲವನ್ನು ನೋಡಿ ಬೆರಗಾಗಿ ಭೀಮನ ಪರಾಕ್ರಮವನ್ನು ಹೊಗಳುತ್ತಿದ್ದರು.

ಆಗ ಯುಧಿಷ್ಠಿರನು ತ್ರಿಕಾಲಜ್ಞಾನಿಯಾಗಿ ದಿವ್ಯದೃಷ್ಟಿಯನ್ನು ಪಡೆದಿದ್ದ ಸಹದೇವನನ್ನು ನೋಡಿ "ತಮ್ಮಾ! ಈ ಹಣ್ಣನ್ನು ನೋಡಿದೆಯಾ? ಇದರ ವಿಚಾರವೇನು?" ಎಂದು ಕೇಳಿದನು. ಅದಕ್ಕವನು "ಜೀಯಾ. ಚಿತ್ತವಿಸು. ಇದು ಕಣ್ವಮಹರ್ಷಿಗಳ ಆಶ್ರಮದಲ್ಲಿರುವ ನೇರಿಳೇಮರದ ಫಲವು. ಆ ಮರದಲ್ಲಿ ವರುಷಕ್ಕೆ ಒಂದೇ ಒಂದು ಹಣ್ಣು ಬಿಡುವುದು. ಅದು ಚೆನ್ನಾಗಿ ಪಕ್ವವಾದುದನ್ನು ತಿಳಿದು ಆ ಮಹರ್ಷಿಯು ಯೋಗಧ್ಯಾನವನ್ನುಳಿದು ಬಹಿರ್ಮುಖನಾಗಿ ಕಣ್ಣುತೆರೆದು ಕೈನೀಡುವನು. ಕೂಡಲೇ ಈ ಫಲವು ಆತನ ಕೈಯ್ಯಲ್ಲಿ ಬಂದು ಬೀಳುವುದು. ಅವನು ಇದನ್ನು ಭಕ್ಷಿಸಿ ಪುನಃ ತಪಸ್ಸಿಗೆ ಕುಳಿತುಕೊಳ್ಳುವನು. ಆತನ ಪಾರಣೆಯು ವರುಷಕ್ಕೊಂದು ಸಲ ಮಾತ್ರವೇ. ಈ ಫಲ ಹೊರತು ಮತ್ತಾವುದನ್ನೂ ಆತನು ಪರಿಗ್ರಹಿಸನು. ಆತನಿಗೆ ಸಿಟ್ಟು ಬಂದರೆ ಹರಿಹರಬ್ರಹ್ಮಾದಿಗಳಿಗೆ ಕೂಡ ಶಾಪವನ್ನು ಕೊಡದೆ ಬಿಡನು. ಭೀಮಣ್ಣನು ಇದನ್ನು ತಿಳಿಯದೆ ಹಣ್ಣನ್ನು ಕುಯ್ದು ಕೆಲಸವನ್ನು ಕೆಡಿಸಿದನಲ್ಲಾ! ಇದರಿಂದ ಮುಂದೆ ಯಾವ ಅನರ್ಥ ಸಂಭವಿಸುವುದೋ ಕಾಣೆನು" ಎಂದನು.

ಅದನ್ನು ಕೇಳಿ ಧರ್ಮರಾಯನು "ಆಹಾ! ಎಷ್ಟರ ಪ್ರಮಾದವಾಯಿತು! ಕಣ್ವಮಹರ್ಷಿಯು ಕಣ್ಣುತೆರೆದು ನೋಡಿದರೆ ನಮ್ಮನ್ನು ಏನುಮಾಡಿ ಬಿಡುವನೋ? ಮುಂದೇನು ಗತಿ? ಹೋಗಿ ನೋಡೋಣ ನಡೆಯಿರಿ," ಎಂದು ಭೀಮಾದಿಗಳನ್ನು ಕರೆದುಕೊಂಡು ಬಹು ವೇಗದಿಂದ ಆ ಮರದ ಬಳಿಗೆ ಬಂದು ಸೇರಿದನು. ಧೌಮ್ಯಾದಿ ಮುನಿಜನರೂ ಅವರ ಸಂಗಡಲೇ ಬಂದರು. ಮರದ ಮೇಲೆ ನೋಡಿದರೆ ಬೇರೆ ಹಣ್ಣು ಒಂದಾದರೂ ಇರಲಿಲ್ಲ. ವರುಷದಿಂದ ಉಪವಾಸವಿರುವ ಮಹರ್ಷಿಯು ಕಣ್ಣುತೆರೆದು ನೋಡಿದರೆ ಮುಂದೇನು ಗತಿ? ಎಂದು ಯುಧಿ

ಷ್ಠಿರನು ಬಹಳವಾಗಿ ನೊಂದುಕೊಂಡು, ತಲೆಬಾಗಿ ಕಣ್ಣೀರು ಸುರಿಸು ತ್ತಿದ್ದನು. ಆಗ ಧೌಮ್ಯನು "ಎಲೈ ರಾಯನೇ! ಈ ಹಣ್ಣು ಕಣ್ವ ಮಹರ್ಷಿಯ ಬಾಯತುತ್ತು. ಭೀಮಸೇನನು ಇದನ್ನರಿಯದೆ ಕಿತ್ತು ಬಿ ಟ್ಟನು. ಬ್ರಹ್ಮಸ್ವತ್ತಾದ ಇದನ್ನು ಅಪಹರಿಸಿದುದರಿಂದ ಕೇಡು ಸಂಭವಿ ಸುವುದು. ವಿಷಪ್ರಯೋಗದಿಂದ ಒಬ್ಬನು ಮಾತ್ರವೇ ಸಾಯುವನು. ಬ್ರಹ್ಮಸ್ವವನ್ನು ಪರಿಗ್ರಹಿಸಿದರೆ ವಂಶವೇ ಹಾಳಾಗುವುದು. ರಾಜ್ಯಭ್ರ ಷ್ಟರಾಗಿ ವನಕ್ಕೆ ಬಂದ ನಿಮಗೆ ಇಲ್ಲಿ ಇದೊಂದು ಕಷ್ಟವು ಸಂಭವಿಸಿ ತಲ್ಲಾ!" ಎಂದು ಅನುತಾಪದಿಂದ ನುಡಿದನು. ಅದನ್ನು ಕೇಳಿ ಯುಧಿ ಷ್ಠಿರನು ಬಹು ಚಿಂತಾಕ್ರಾಂತನಾಗಿ "ಅಯ್ಯೋ! ಈಗ ಏನುಮಾ ಡೋಣ? ಅರಗಿನ ಮನೆಯು ಉರಿಯಿಂದ ತಪ್ಪಿಸಿಕೊಂಡೆವು. ವಿಷದ ಕಜ್ಜಾಯಗಳ ದೋಷವೂ ಪರಿಹರವಾಯಿತು. ಐರಾವತವನ್ನು ತರಿಸು ವಾಗ ದೇವೇಂದ್ರನಿಗೆ ಬಂದಿದ್ದ ಕೋಪವೂ ಶಾಂತವಾಯಿತು. ರಾಜ ಸೂಯಯಾಗಾನಂತರದಲ್ಲಿ ಭಗವಂತನನ್ನು ನಿಂದಿಸಿ, ನಮ್ಮ ವಂಶಕ್ಕೇನೇ ಕುಂದುತರುತ್ತಿದ್ದ ಶಿಶುಪಾಲನ ಸೊಕ್ಕು ಅಡಗಿತು ಇವೆಲ್ಲವೂ ಭಕ್ತ ವತ್ಸಲನಾದ ಭಗವಂತನ ಅನುಗ್ರಹ ಬಲದಿಂದಲೇ ಹೊರತು ಮತ್ತೆ ಏತ ರಿಂದಲೂ ಅಲ್ಲ. ಈಗಲೂ ಮಹಾತ್ಮನಾದ ಶ್ರೀ ಕೃಷ್ಣನು ಕರುಣಿಸಿ ದರೆ ನಾವು ಬದುಕಿಕೊಳ್ಳುವೆವು" ಎಂದು ಮುನಿಗಳ ಕಡೆ ತಿರುಗಿ "ಮಹಾತ್ಮರುಗಳಿರಾ! ಈ ಹಣ್ಣನ್ನು ಮರದ ಮೇಲಕ್ಕೆ ಹತ್ತಿಸುವ ಉಪಾಯವನ್ನು ತಿಳಿದು ಹೇಳಿರಿ" ಎಂದು ಪ್ರಾರ್ಥಿಸಿದನು. ಆಗ ಧೌಮ್ಯನು "ಎಲೈ ರಾಯನೇ! ಇದನ್ನು ಹೇಳಲಿಕ್ಕೆ ನಮಗೆ ಶಕ್ತಿ ಎತ್ತಣದು? ಪಾಂಡವಪ್ರತಿಷ್ಠಾಪನಾಚಾರ್ಯನೆಂಬ ಬಿರುದನ್ನು ಹೊತ್ತಿ ರುವ ಶ್ರೀ ಗೋಪಾಲಕೃಷ್ಣನೊಬ್ಬನಿಗೆ ಮಾತ್ರವೇ ಈ ಉಪಾಯವು ತಿಳಿಯುವುದು. ಸಾವಕಾಶ ಮಾಡದೆ ಆ ಮಹಾತ್ಮನನ್ನು ಭಜಿಸು. ನಿಮಗೆ ಕ್ಷೇಮವಾಗುವುದು" ಎಂದು ಹೇಳಿದನು.

ಕೂಡಲೇ ಧರ್ಮರಾಯನು ಕೈಕಾಲುಗಳನ್ನು ತೊಳೆದುಕೊಂಡು, ಶುದ್ಧಾಚಮನ ಮಾಡಿ, ಸುಖಾಸನದಲ್ಲಿ ಕುಳಿತು "ಸ್ವಾಮಿ! ಆಪದ್ರಕ್ಷ ಕನಾದ ಗೋವಿಂದನೇ! ದೀನನಾದ ನನ್ನನ್ನು ರಕ್ಷಿಸು. ಭಕ್ತವತ್ಸಲ

ನಾದ ಸ್ವಾಮಿಯೇ, ವಿಪತ್ತಿನಲ್ಲಿ ಸಿಕ್ಕಿಬಿದ್ದಿರುವ ನಮ್ಮನ್ನು ಈ ವೇಳೆಯಲ್ಲಿ ಸಲಹದಿದ್ದರೆ ಕೆಟ್ಟುಹೋಗುವೆವು, ಕೃಷ್ಣಾ ! ಬೇಗ ಮೈದೋರಿ ಬಂದು ನಮ್ಮನ್ನು ಸಲಹು '' ಎಂದು ನಿಶ್ಚಲಭಕ್ತಿಯಿಂದ ಸ್ತುತಿಸಿದನು.

ದಯಾಸಮುದ್ರನಾದ ಪರಮಾತ್ಮನ ವಾತ್ಸಲ್ಯವು ಅಗಾಧವಾದುದು. ಆ ವೇಳೆಯಲ್ಲಿ ದ್ವಾರಕಾ ಪಟ್ಟಣದಲ್ಲಿ ಸತ್ಯಭಾಮೆಯೊಂದಿಗೆ ಸರಸಸಲ್ಲಾಪದಿಂದ ಕಾಲಕ್ಷೇಪ ಮಾಡುತ್ತಿದ್ದ ಶ್ರೀ ಕೃಷ್ಣನು ಯುಧಿಷ್ಠಿರನ ಸ್ಥಿತಿಯನ್ನೂ, ಸ್ತುತಿಯನ್ನೂ ತಿಳಿದು, ಪ್ರಿಯಪತ್ನಿಯನ್ನು ನೋಡಿ "ದೇವೀ ! ಭೀಮನ ಅಕೃತ್ಯದಿಂದ ಪಾಂಡವರಿಗೆ ಮಹದ್ವಿಪತ್ತು ಸಂಭವಿಸಿದೆ. ಋಷಿಶಾಪದಿಂದ ಕೆಟ್ಟುಹೋಗುವರು. ನಾನು ಈಗಲೇ ಹೋಗಿ ಅವರನ್ನು ರಕ್ಷಿಸಬೇಕು. ನೀನು ಇಲ್ಲಿಯೇ ಇರು. ಹೋಗಿಬರುವೆನು '' ಎಂದು ಹೇಳಿ ತತ್‌ಕ್ಷಣದಲ್ಲಿಯೇ ಹೊರಟು ಕಾಮ್ಯಕವನಕ್ಕೆ ಬಂದು ಸೇರಿದನು. "ನೆನೆದವರ ಮನದಲ್ಲಿಯೇ ಹರಿಯಿರುವನೆಂಬ ಲೋಕೋಕ್ತಿಯು ಸುಳ್ಳಲ್ಲ. '' ಒಡನೆಯೇ ಪ್ರತ್ಯಕ್ಷನಾಗಿ ಬಂದ ವಾಸುದೇವನನ್ನು ಕಂಡು, ದ್ರೌಪದೀಸಹಿತರಾದ ಪಾಂಡವರೂ, ಧೌಮ್ಯಾದಿ ಮುನಿಜನರೂ ಆ ಪರಮಾತ್ಮನ ಪಾದಗಳಿಗೆ ವಂದಿಸಿ ನುತಿಸಿದರು ಆಗ ಶ್ರೀ ಕೃಷ್ಣನು ಅವರೆಲ್ಲರ ಯೋಗಕ್ಷೇಮವನ್ನು ವಿಚಾರಿಸಿ, ದ್ರೌಪದಿಯನ್ನು ನೋಡಿ "ತಂಗೀ ! ಇದೇನು ! ನೀವೆಲ್ಲರೂ ಬಹು ಚಿಂತೆಯಿಂದಿರುವಂತೆ ಕಾಣುತ್ತಿದೆ ! ನಿಮ್ಮ ಮನಸ್ಸಿನ ದುಗುಡಕ್ಕೆ ಕಾರಣವೇನು ? '' ಎಂದು ಕೇಳಿದನು. ಪಾಂಚಾಲಿಯು ಆತನಿಗೆ ಕೈಮುಗಿದು "ಅಣ್ಣಯ್ಯಾ ! ಚರಾಚರಾತ್ಮಕವಾದ ಈ ಪ್ರಪಂಚದಲ್ಲಿ ನಿಮಗೆ ಗೋಚರವಾಗದ ವಿಷಯವೊಂದಿದೆಯೇ ! ನೀನು ಸರ್ವಜ್ಞನು. ಪತಿಯು ತಿಳಿಯದೆ ಕಿತ್ತುತಂದ ಈ ಜಂಬೂಫಲವನ್ನು ಯಥಾಸ್ಥಾನದಲ್ಲಿ ಹತ್ತಿಸುವ ಬಿನ್ನಣವನ್ನೀಗ ನೀನು ತೋರಬೇಕಾಗಿದೆ. ಸತ್ತುಹೋದ ಮಕ್ಕಳನ್ನು ಸಾಂದೀಪನಿಗೆ ತಂದು ಒಪ್ಪಿಸಿದ ಮಹಾಮಹಿಮನಾದ ನಿನಗೆ ಅಸಾಧ್ಯವಾವುದು ? ಈ ವೇಳೆಯಲ್ಲಿ ನಮ್ಮನ್ನು ರಕ್ಷಿಸುವ ಭಾರವು ನಿನ್ನದು. ಹೆಚ್ಚಾಗಿ ಹೇಳಲು ಶಕ್ತಳಲ್ಲ '' ಎಂದು ಶ್ರೀ ಕೃಷ್ಣನ ಪಾದಗಳ ಮೇಲೆ ಬಿದ್ದಳು.

ಆಗ ಶ್ರೀ ಕೃಷ್ಣನು ದ್ರೌಪದಿಯನ್ನು ಎತ್ತಿ ಹಿಡಿದು “ ತಂಗೀ! ಏಳು ಹೆದರಬೇಡ ಸುಮ್ಮನೆ ನಮ್ಮ ಮೇಲೆ ದೇವತ್ವವನ್ನು ಹೊರಿಸಿ ನಿನ್ನವರು ಇಂತಹ ಕೃತ್ಯಗಳನ್ನು ಮಾಡಿಬಿಡುವರು. ಅವುಗಳನ್ನು ಹರಿಸಬೇಕಾದರೆ ನನಗೆ ಸಾಕಾಗುವುದು. ಋಷಿಯ ಶಾಪವು ಸಂಭವಿಸುವು ದೆಂದು ಅರಿಯದೆ ಕೆಲಸ ಕೆಡಿಸಿಬಿಟ್ಟಿರಿ. ಆದರೂ ತಕ್ಕ ಉಪಾಯವನ್ನು ಹೇಳುವೆನು. ಈ ಹಣ್ಣಿನ ತೊಟ್ಟು ಬಣಗುವುದಕ್ಕೆ ಮುಂಚೆಯೇ ಇದನ್ನೇರಿಸಿ ಪೂರ್ವಸ್ಥಾನದಲ್ಲಿ ನಿಲ್ಲಿಸಬೇಕಾಗಿದೆ. ಹಣ್ಣನ್ನು ನನ್ನೆದುರಿಗೆ ತಂದಿರಿಸಿ, ನಿಮ್ಮ ನಿಮ್ಮ ಮನೋಭಿಪ್ರಾಯವನ್ನು ನಿರ್ವಂಚನೆಯಿಂದ ಹೇಳಿರಿ, ನೋಡೋಣ ” ಎಂದನು.

ಕೂಡಲೇ ಭೀಮಸೇನನು ಆ ನೇರಿಳೆಯ ಹಣ್ಣನ್ನು ತಂದು ಶ್ರೀ ಕೃಷ್ಣನ ಮುಂದೆ ಇಟ್ಟನು. ಆಗ ಅವರೆಲ್ಲರೂ ತಮ್ಮ ಅಂತರಂಗದ ನಿಶ್ಚಯಾಭಿಪ್ರಾಯವನ್ನು ಸ್ವಾಮಿಯ ಎದುರಿಗೆ ಒಬ್ಬರೊಬ್ಬರಾಗಿ ತಿಳಿಸುತ್ತಾ ಬಂದರು. ಅವರಲ್ಲಿ ಮೊದಲು—

ಯುಧಿಷ್ಠಿರನು:—ಸ್ವಾಮೀ! ಲಾಲಿಸು. ನನಗೆ ಸತ್ಯವೇ ತಾಯಿ, ಜ್ಞಾನವೇ ತಂದೆಯು, ಧರ್ಮವೇ ಸಹೋದರನು, ದಯೆಯೇ ಮಿತ್ರನು, ಶಾಂತಿಯೇ ನನ್ನ ಹೆಂಡತಿ, ಕ್ಷಮೆಯೇ ಪುತ್ರನು. ಈ ಆರು ಮಂದಿಯೇ ನನ್ನ ಮುಖ್ಯ ಬಂಧುಗಳೆಂದು ತಿಳಿದಿರುವೆನು. ಇದರಲ್ಲಿ ಸಂಶಯವಿಲ್ಲ.

ಈ ಮಾತನ್ನು ಹೇಳಿದ ಕೂಡಲೇ ಆ ಜಂಬೂಫಲವು ನೆಲದಿಂದ ಒಂದು ಮೊಳ ಎತ್ತರಕ್ಕೆ ಏರಿತು.

ಆಗ ಭೀಮಸೇನನು ಶ್ರೀ ಕೃಷ್ಣನನ್ನು ನೋಡಿ:—ದೇವಾ! ನನ್ನ ಮನೋಭಿಪ್ರಾಯವನ್ನು ವಿಜ್ಞಾಪಿಸುವೆನು, ಕೇಳು. ನಾನು ಪರಸ್ತ್ರೀಯರನ್ನೆಲ್ಲಾ ನನ್ನ ತಾಯಿಯಾದ ಕುಂತಿದೇವಿಯಂತೆಯೂ, ಪರಸ್ವತ್ತನ್ನು ಮಣ್ಣಿನ ಹೆಂಟೆಯಂತೆಯೂ, ಸಮಸ್ತ ಭೂತಗಳನ್ನೂ ನನ್ನಂತೆಯೂ ಭಾವಿಸಿಕೊಂಡಿರುವೆನು. ಇದು ನಿಶ್ಚಯವೆಂದನು.

ಕೂಡಲೇ ಆ ನೇರಿಳೇ ಹಣ್ಣು ಅಲ್ಲಿಂದ ಮೇಲಕ್ಕೆ ಇನ್ನೊಂದು ಮೊಳವೇರಿ ಅಂತರಿಕ್ಷದಲ್ಲಿ ನಿಂತುಬಿಟ್ಟಿತು. ಬಳಿಕ ಶ್ರೀ ಕೃಷ್ಣನು ಅರ್ಜುನನನ್ನು ನೋಡಿ "ಎಲೈ ಪಾರ್ಥನೇ, ನಿನ್ನ ಅಭಿಮತವೇನು ? ಮಾಜದೆ ಹೇಳು" ಎಂದು ಕೇಳಲು ಅವನಿಂತೆಂದನು.

ಅರ್ಜುನ:—ಕೃಷ್ಣಾ ! ಬ್ರಾಹ್ಮಣರಿಗೆ ಪರರ ಮನೆಯ ನಿಮಂತ್ರಣವೇ ಉತ್ಸಾಹಕರವು, ಗೋವುಗಳಿಗೆ ಹಸುರಾದ ಹುಲ್ಲೇ ಮಹೋತ್ಸವವು, ಪತಿವ್ರತಾಸ್ತ್ರೀಯರಿಗೆ ತಮ್ಮ ಅಗಲಿರುವ ತಮ್ಮ ಕಾಂತನ ಆಗಮನವೇ ಸಂತೋಷಕರವಾದುದು. ನನಗಾದರೋ ಯಾವಾಗಲೂ ಯುದ್ಧಮಾಡುತ್ತಿರಬೇಕೆಂದರೆ ಬಹಳ ಸಂತೋಷವು.

ಈ ಮಾತನ್ನು ಹೇಳಿದ ಕೂಡಲೇ ಹಣ್ಣು ಮತ್ತೊಂದು ಮೊಳ ಮೇಲಕ್ಕೆ ಹತ್ತಿತು. ಬಳಿಕ ಮಾದ್ರೀಪುತ್ರನಾದ ನಕುಲನು ತನ್ನ ಮನೋಭಿಪ್ರಾಯವನ್ನು ತಿಳಿಸಿದನು.

ನಕುಲ:—ಸ್ವಾಮಿ ! ಲಾಲಿಸು. ಪ್ರಾಣಗಳನ್ನಾದರೂ ಪರಿತ್ಯಜಿಸಿ, ಮಾನವನ್ನು ರಕ್ಷಿಸಿಕೊಳ್ಳಬೇಕು. ಪ್ರಾಣಗಳು ಅಸ್ಥಿರವಾದುವುಗಳು. ಶಾಶ್ವತವಾಗಿರತಕ್ಕುವುಗಳಲ್ಲ. ಮಾನವಾದರೋ ಚಂದ್ರಸೂರ್ಯರಿರುವ ತನಕ ನಿತ್ಯವಾಗಿರುವುದು ಇದೇ ನನ್ನ ಅಭಿಮತವು

ಹೀಗೆ ನಕುಲನು ಹೇಳಿದ ಕೂಡಲೇ ಜಂಬೂಫಲವು ಇನ್ನೊಂದು ಮೊಳ ಮೇಲಕ್ಕೆ ಎದ್ದಿತು. ಆಗ ಸಹದೇವನು ತನ್ನ ಮನೋಗತವನ್ನು ತಿಳಿಸಿದನು.

ಸಹದೇವ:—ಎಲೈ ಪರಮಪುರುಷನೇ, ಶರೀರಗಳು ನಿತ್ಯವಾದುವುಗಳಲ್ಲ ಐಶ್ವರ್ಯವೂ ಅಸ್ಥಿರವಾದುದು. ಮೃತ್ಯುವು ಗಳಿಗೆ ಗಳಿಗೆಗೂ ಸಮೀಪಕ್ಕೆ ಬರುತ್ತಲಿರುವುದು. ಆದುದರಿಂದ ಜಾಗರೂಕನಾಗಿದ್ದುಕೊಂಡು ಧರ್ಮಸಂಗ್ರಹ ಮಾಡುತ್ತಿರಬೇಕೆಂಬುದೇ ನನ್ನ ಸಂಕಲ್ಪವು.

ಈ ಮಾತು ನುಡಿದ ಕೂಡಲೇ ಆ ಫಲವು ಮತ್ತೊಂದು ಮೊಳ ಮೇಲಕ್ಕೇರಿತು. ಆಗ ಶ್ರೀ ಕೃಷ್ಣನು ದ್ರೌಪದಿಯನ್ನು ನೋಡಿ,— ತಂಗೀ ! ನಿನ್ನ ಪತಿಗಳೆಲ್ಲರೂ ತಮ್ಮ ಅಭಿಪ್ರಾಯವನ್ನು ಹೇಳಿದುದರ

ಮೇಲೆ ಫಲವು ಬಹುಮಟ್ಟಿಗೆ ಮೇಲಕ್ಕೆ ಏರಿತು. ನಿನ್ನ ಮನೋಭಿ ಪ್ರಾಯವನ್ನು ಮರೆಮಾಚದೆ ಹೇಳಬಿಡಮ್ಮಾ! ಎಂದನು. ಆಗಲಾ ಪಾಂಚಾಲಿಯು ಲಜ್ಜೆಯಿಂದ ತಲೆಬಾಗಿಸಿಕೊಂಡು ಇಂತೆಂದಳು.

ದ್ರೌಪದಿ:—ಅಣ್ಣಾ! ನಿನ್ನಲ್ಲಿ ಮುಚ್ಚುಮರೆಯೇನು? ಪುರುಷನು ಸುಂದರನಾಗಿದ್ದರೆ ಅವನು ತಂದೆಯಾಗಲಿ, ಮಗನಾಗಲಿ, ಸಹೋದ ರನಾಗಲಿ ಸ್ತ್ರೀಯರ ಮನಸ್ಸು ಅವನನ್ನು ಕಂಡು ಭ್ರಮಿಸುವುದು ನಿಜವು. ಇಷ್ಟೇ ನನ್ನ ಅಭಿಪ್ರಾಯವು.

ಈ ಮಾತಿನಿಂದ ಜಂಬೂಫಲವು ಸ್ವಲ್ಪವೂ ಮೇಲಕ್ಕೇರಲಿಲ್ಲ. ಆಗ ಶ್ರೀಕೃಷ್ಣನು ಪುನಃ ಆಕೆಯನ್ನು ನೋಡಿ “ಅಮ್ಮಾ! ದ್ರೌಪದೀ! ನಿನ್ನ ಪತಿಗಳು ವಂಚಿಸದೆ ತಮ್ಮ ಮನೋಗತಗಳನ್ನು ಹೇಳಬಿಟ್ಟದ್ದ ರಿಂದ ಹಣ್ಣು ಐದು ಮೊಳ ಮೇಲಕ್ಕೆ ಎದ್ದಿತು. ನಿನ್ನ ಮಾತಿನಿಂದ ಸ್ವಲ್ಪವೂ ಏರಲಿಲ್ಲ. ಇದರಿಂದ ನೀನು ಅಭಿಪ್ರಾಯವನ್ನು ಪೂರ್ಣವಾಗಿ ಹೇಳಲಿಲ್ಲವೆಂದು ತಿಳಿಯುತ್ತೇನೆ. ನೀನು ಪತಿವ್ರತಾ ಸ್ತ್ರೀಯರಿಗೆಲ್ಲಾ ಗುರುವು, ಸಚ್ಚರಿತಳು, ಪ್ರಾಜ್ಞಳು. ನೀನು ಮನಸ್ಸಿನಲ್ಲಿ ಯಾವುದನ್ನೂ ಮರಸಿಟ್ಟುಕೊಳ್ಳದೆ ಹೇಳಮ್ಮಾ” ಎಂದು ಕೇಳಿದನು. ಆಗ ದ್ರೌಪ ದಿಯು ಹೇಳಿದುದು—

ದ್ರೌಪದಿ:—ದೇವಾದಿದೇವನೇ ಕೇಳು. ನನಗೆ ಅಯ್ದು ಮಂದಿ ಗಂಡಂದಿ ರಿರುವರು. ಅದೂ ಸಾಲದೆ ಆರನೆಯ ಪತಿಯ ಕಡೆಗೆ ನನ್ನ ಮನ ಸ್ಸು ಎಳೆಯುತ್ತಿರುವುದು. ಈ ಲೋಕದಲ್ಲಿ ಪುರುಷರೇ ಇಲ್ಲದಿ ದ್ದರೆ ಸ್ತ್ರೀಯರೆಲ್ಲರೂ ಪತಿವ್ರತೆಯರೇ ಎಂದುಕೊಳ್ಳಬಹುದು. ಇದು ನನ್ನ ಅಂತರಂಗವು. ಎಲೈ ಸ್ವಾಮಿಯೇ, ಬ್ರಹ್ಮಸಂಕಲ್ಪ ದಿಂದ ಕೈಹಿಡಿದ ಪತಿಯ ಮನಸ್ಸನ್ನು ಅನುಸರಿಸಿ ನಡೆಯುತ್ತಿರು ವುದು ಸತೀಧರ್ಮವು. ಅದನ್ನು ಬಿಟ್ಟು ಪರಪುರುಷನನ್ನು ಮನ ಸ್ಸಿನಲ್ಲಿ ಸ್ಮರಿಸುವವಳು ಎಂದಿಗೂ ಸಾಧ್ವಿಯೆನಿಸಳು. ಸರ್ವಜ್ಞ ನಾದ ನಿನಗೆ ವೇದ್ಯವಿಲ್ಲದ ವಿಷಯವಿರುವುದೇ?

ಈ ಮಾತು ಹೇಳಿದ ಕೂಡಲೇ ಜಂಬೂಫಲವು ಮೇಲಿನಿಂದ ಕೆಳಕ್ಕೆ ಬಿದ್ದು ಪುಟಹಾರಿಸಿದಂತೆ ಥಟ್ಟನೆ ಮೇಲಕ್ಕೇರಿ ಮರದಲ್ಲಿ ತಾನು

ಮೊದಲಿದ್ದ ಸ್ಥಳದಲ್ಲಿ ಸೇರಿ ಹತ್ತಿಕೊಂಡಿತು. ಅದನ್ನು ಕಂಡು ಪಾಂಡ
ವರ ಪುರೋಹಿತನಾದ ಧೌಮ್ಯನು ಮುನಿಜನರೊಂದಿಗೆ ಕೈಯನ್ನು
ಮೇಲಕ್ಕೆತ್ತಿ ಜಯಧ್ವನಿ ಮಾಡಿ, ಯುಧಿಷ್ಠಿರನನ್ನು ಕುರಿತು "ಎಲೈ
ರಾಜನೇ! ಕೃಷ್ಣನ ಅನುಗ್ರಹ ಬಲವಿರುವಾಗ ನಿನಗೆ ಅಸಾಧ್ಯವಾದ
ಕಾರ್ಯವೊಂದಿರುವುದೇ? ನಿಮಗೆ ಸಂಭವಿಸಿದ್ದ ಮಹದ್ವಿಪತ್ತು ಬಿರು
ಗಾಳಿಗೆ ಸಿಕ್ಕಿದ ಮೋಡದಂತೆ ಮಾಯವಾಯಿತು. ಇನ್ನು ನಿರ್ಭೀತಿ
ಯಿಂದಿರು" ಎಂದನು.

ಬಳಿಕ ಶ್ರೀ ಕೃಷ್ಣನು ಎಲ್ಲರನ್ನೂ ಕರೆದುಕೊಂಡು ಅಲ್ಲಿಂದ
ಮುಂದೆ ಹೊರಟು ಸಮೀಪದಲ್ಲಿದ್ದ ಒಂದು ಕೊಳದ ಬಳಿಗೆ ಬಂದು ಸೇರಿ
ದನು. ಅತ್ತ ಕಣ್ವಋಷಿಯು ತನ್ನ ಪದ್ಧತಿಯಂತೆ ಕಣ್ತೆರದು ನೋಡಿ,
ಮರದ ಮೇಲೆ ಇರುವ ಹಣ್ಣನ್ನು ಕಂಡು, "ಇದೇನು! ಹಣ್ಣನ್ನು
ಕಿತ್ತು ಪುನಃ ಹತ್ತಿಸಿದಂತೆ ಕಾಣುತ್ತಿರುವುದು ಇಂತಹ ಮಹತ್ಕಾರ್ಯ
ವನ್ನು ಮಾಡಿರಬೇಕಾದರೆ ಅವನು ಶಿವನೋ, ನಾರಾಯಣನೋ, ಅಥವಾ
ಬ್ರಹ್ಮದೇವನೋ ಆಗಿರಬೇಕು. ಉಳಿದವರಿಗೆ ಇಂತಹ ಶಕ್ತಿಯು
ಹೇಗೆ ಬಂದೀತು? ಎಂದು ಯೋಚಿಸಿ, ಆ ಮಹಾವೃಕ್ಷದ ತಳದಲ್ಲಿ
ನೋಡಲು, ಹಲವು ಜನರ ಹೆಜ್ಜೆಯ ಗುರುತುಗಳು ಕಾಣಬಂದುವು.
ಅದನ್ನು ನೋಡಿ ಆ ಕಣ್ವಮುನಿಯು ಯಾವ ರಾಜನೋ ಇಲ್ಲಿಗೆ ಬಂದಿರ
ಬೇಕು. ಹೋಗಿ ನೋಡೋಣವೆಂದು ಆ ಹೆಜ್ಜೆಯ ಗುರುತನ್ನೇ ಅನು
ಸರಿಸಿ ಶ್ರೀ ಕೃಷ್ಣಾದಿಗಳು ಕುಳಿತಿದ್ದ ಸರೋವರದ ಬಳಿಗೆ ಬಂದು ಸೇರಿ
ದನು. ಅಲ್ಲಿ ತಂಪಾದ ಒಂದು ಮರದ ಕೆಳಗೆ ಹಾಸಿರುವ ಚಿಗುರಿನ
ಸಿಂಹಾಸನದ ಮೇಲೆ ಕುಳಿತು ಸುತ್ತಲೂ ಪಾಂಡವರೂ ದ್ರೌಪದಿಯೂ
ಬಳಸಿಕೊಂಡಿರಲು—ಧೌಮ್ಯಾದಿ ಋಷಿಗಳು ವೇದಮಂತ್ರಗಳಿಂದ ಸ್ತು
ತಿಸುತ್ತಿರಲು ಆನಂದಮಯನಾಗಿರುವ ಶ್ರೀ ಕೃಷ್ಣನನ್ನು ಕಂಡು,
ತಾನು ತಂದ ಜಂಬೂಫಲವನ್ನು ಆ ಸ್ವಾಮಿಗೆ ಕಾಣಿಕೆಯಾಗಿ ಸಮ
ರ್ಪಿಸಿ, "ಎಲೈ ದೇವದೇವನೇ, ಇದನ್ನು ಸ್ವೀಕರಿಸಬೇಕು" ಎಂದು
ಪ್ರಾರ್ಥಿಸಿದನು. ಆಗ ಶ್ರೀ ಕೃಷ್ಣನು ನಸುನಗುತ್ತಾ, ಆ ಮುನಿಯ
ಸಾರನನ್ನು ಕೊಂಡಾಡಿ ಆ ಫಲವನ್ನು ಪರಿಗ್ರಹಿಸಿ ದ್ರೌಪದಿಯ

ಕೈಯಲ್ಲಿ ಕೊಟ್ಟು " ಎಲೌ ಸಾಧ್ವಿಯೇ, ಇದನ್ನು ಎಲ್ಲರಿಗೂ ಹಂಚ
ವ್ವಾ " ಎಂದು ಹೇಳಿದನು. ಬಳಿಕ ದ್ರೌಪದಿಯು ಹಣ್ಣನ್ನು ಕೊಯ್ದು
ಆ ಮಹರ್ಷಿಗೆ ಮೊದಲನೆಯ ಭಾಗಿನವನ್ನು ಕೊಟ್ಟು, ಉಳಿದುದನ್ನು
ಹತ್ತು ಪಾಲು ಮಾಡಿ, ಕೃಷ್ಣನನ್ನು ನೋಡಿ, ಎಲೈ ದೇವನೇ, ಬ್ರಾಹ್ಮ
ಣರನ್ನು ಒಬ್ಬೊಬ್ಬರನ್ನಾಗಿ ಕರೆ ಎಂದು ಹೇಳಲು ಆತನು ಋಷಿಗಳನ್ನು
ಕರೆಯ ದ್ರೌಪದಿಯು ಕೊಟ್ಟ ಹಣ್ಣಿನ ಚೂರುಗಳನ್ನು ಹಂಚುತ್ತಾ
ಬಂದನು. ಮುನಿಜನರಿಗೂ ಮುನಿಪತ್ನಿಯರಿಗೂ ಪಾಂಡವರಿಗೂ ದ್ರೌಪ
ದಿಗೂ ವಿನಿಯೋಗಿಸಿದ ಮೇಲೆ ಶ್ರೀ ಕೃಷ್ಣನು ಕಣ್ವನಿಗೆ ಒಂದು ಭಾಗ
ವನ್ನಿರಿಸಿ, ತಾನೂ ಸ್ವಲ್ಪ ತೆಗೆದುಕೊಂಡು ಭಕ್ಷಿಸಿ ತೃಪ್ತನಾದನು. ಯುಧಿ
ಷ್ಠಿರನ ಇಷ್ಟದಂತೆ ಸರ್ವರಿಗೂ ಪಾರಣೆಯಾಯಿತು.

ಬಳಿಕಲಾ ಕಣ್ವಮಹರ್ಷಿಯು ಶ್ರೀ ಕೃಷ್ಣನನ್ನು ನೋಡಿ
" ಎಲೈ ಭಕ್ತವತ್ಸಲನೇ, ಈ ಪಾಂಡವರು ಹರಕೆ ಮಾಡಿಕೊಂಡಿ
ದ್ದುದೂ, ಅಯ್ದು ದಿನಗಳ ತನಕ ಒಂದು ನೇರಿಳೇ ಹಣ್ಣಾದರೂ ಸಿಕ್ಕದೆ
ಹೋದುದೂ, ಭೀಮನು ಬೇಟೆಯ ನೆವದಿಂದ ಕಾಡಿಗೆ ಹೋದುದೂ,
ಆತನ ದೃಷ್ಟಿಗೆ ಈ ಹಣ್ಣು ಗೋಚರವಾದುದೂ, ಅವನು ಅದನ್ನು
ಕಿತ್ತು ಬಿಟ್ಟುದೂ, ಶಾಪಭಯದಿಂದ ನಿನ್ನನ್ನು ಧ್ಯಾನಿಸಿದುದೂ, ನೀನು
ದಯಮಾಡಿ ಬಂದು, ಈ ಫಲವನ್ನು ಪೂರ್ವಸ್ಥಾನದಲ್ಲಿ ಸೇರಿಸಿದುದೂ
ಇವೆಲ್ಲವೂ ನಿನ್ನ ಪ್ರೇರಣೆಯಿಂದ ನಡೆದುವೇ ಹೊರತು ಜನರ ಪ್ರಯತ್ನ
ಗಳಿಂದ ಸಾಧ್ಯವೇ? ನನ್ನ ಪುಣ್ಯವಿಶೇಷದಿಂದ ನಿನ್ನ ಪಾದದರ್ಶನವಾ
ಯಿತು. ನನಗೆ ಅಪ್ಪಣೆ ಕೊಡು."

ಈ ಪ್ರಕಾರ ಹೇಳಿ ಕಣ್ವಮಹರ್ಷಿಯು ತಪೋವನಕ್ಕೆ ಹೊರಟು
ಹೋದನು, ಬಳಿಕ ಶ್ರೀ ಕೃಷ್ಣನು ಪಾಂಡವರಯ್ವರನ್ನು ಸಂತೈಸಿ,
ದ್ರೌಪದಿಗೆ ಸಮಾಧಾನೋಕ್ತಿಗಳನ್ನು ಹೇಳಿ, " ಪಾಂಡವರಿರಾ! ಸತ್ಯ
ವನ್ನು ರಕ್ಷಿಸಿರಿ ಅಣ್ಣಯ್ಯನ ಆಜ್ಞೆಯನ್ನು ಸ್ವಲ್ಪವೂ ಮೀರಬೇಡಿರಿ.
ವನವಾಸ ಮಾಡುವೆನೆಂದು ಮನಸ್ಸಿನಲ್ಲಿ ಕೊರಗದೆ ನಿಮ್ಮ ನಿತ್ಯನಿಯಮ
ವನ್ನು ಆಚರಿಸಿಕೊಂಡಿರಿ ಧೌಮ್ಯಮುನಿಯು ಮಾತನ್ನು ಮನ್ನಿಸಿ
ಆತನ ಆಜ್ಞಾನುಸಾರ ನಡೆದುಕೊಳ್ಳಿರಿ ಈ ಭೀಮನು ಮುಡುಕನು.

ಅರ್ಜುನನಿಗೆ ಸ್ವಲ್ಪ ಸ್ಮರಣೆಯುಂಟು. ದ್ರೌಪದಿಯು ಶತ್ರುನಿಗ್ರಹ ಮಾಡಬೇಕೆಂದು ಬೋಧಿಸುತ್ತಿರುವಳು. ಎಲೈ ಯುಧಿಷ್ಠಿರನೇ, ಅಂತಹ ಬಿಕ್ಕಟ್ಟಿನ ಪ್ರಸಂಗದಲ್ಲಿ ನೀನು ಧೌಮ್ಯಮುನಿಯ ಅನುಮತಿಯಂತೆ ನಡೆಯುತ್ತಿರು " ಎಂದು ಬುದ್ಧಿಯ ಮಾತನ್ನು ಹೇಳಿ, ದ್ರೌಪದಿಯನ್ನು ನೋಡಿ "ತಂಗೀ! ನೀನು ಹೆದರಬೇಡ. ನೆನೆದಾಗ ಬಂದು ಸೇರುವೆನು. ಕಾಲನಿರೀಕ್ಷಣೆ ಮಾಡಿಕೊಂಡಿರು. ಅಜ್ಞಾತವಾಸದ ಅವಧಿಯು ಮುಗಿದ ಕೂಡಲೇ ನಿನ್ನ ಪ್ರತಿಜ್ಞೆಯನ್ನು ನೆರವೇರಿಸುವೆನು. ಚಿಂತಿಸದಿರು " ಎಂದು ಅಭಯವನ್ನು ಕೊಟ್ಟು ದ್ವಾರಕಾಪುರಕ್ಕೆ ತೆರಳಿದನು. ಪಾಂಡವರು ಶ್ರೀ ಕೃಷ್ಣನ ಹಿಂದೆ ಸ್ವಲ್ಪ ದೂರ ಹೋಗಿ ಸಾಗಕಳುಹಿ ಬಂದು ತಮ್ಮ ಆಶ್ರಮವನ್ನು ಸೇರಿ, ಆ ಪರಮಾತ್ಮನನ್ನು ಧ್ಯಾನಿಸುತ್ತಾ ಸತ್ಕಾಲಕ್ಷೇಪದಲ್ಲಿ ನಿರತರಾಗಿದ್ದರು.

---

## ನಾಲ್ಕನೆಯ ಸಂಧಿ.

---

ಸೂಚನೆ:—ಪಾಂಡವರು ಕಾಮ್ಯಕವನದಿಂದ ದ್ವೈತಾರಣ್ಯಕ್ಕೆ ಹೋದರು. ವೇದವ್ಯಾಸಾದಿ ಮಹರ್ಷಿಗಳು ಬಂದು ಅವರ ಕ್ಷೇಮಸಮಾಚಾರಗಳನ್ನು ವಿಚಾರಿಸಿಕೊಂಡು ಹೋದ ಮೇಲೆ ದ್ರೌಪದಿಯು ಶಾಂತಿಯನ್ನು ಬಿಟ್ಟು ಕೌರವ ಜಯಕ್ಕೆ ಯತ್ನಿಸಬೇಕೆಂದು ಯುಧಿಷ್ಠಿರನಿಗೆ ಬೋಧಿಸಿದಳು.

ಬಳಿಕ ಪಾಂಡವರು ಆ ಕಾಮ್ಯಕವನ ಪ್ರಾಂತಾರಣ್ಯಗಳಲ್ಲಿ ಕೆಲವು ಕಾಲ ವಾಸಮಾಡುತ್ತಲಿದ್ದು, ಅಲ್ಲಿಂದ ಮುಂದಕ್ಕೆ ಬಹು ದೂರ ಹೋಗಿ, ದ್ವೈತವನವೆಂಬ ಒಂದು ಕಾಡಿಗೆ ಸೇರಿ ಅಲ್ಲಿ ಆಶ್ರಮಗಳನ್ನು ಕಲ್ಪಿಸಿಕೊಂಡು ವಾಸಮಾಡುತ್ತಲಿದ್ದರು. ಹೀಗೆ ಇರುವಾಗ ಅವರ ಕ್ಷೇಮಸಮಾಚಾರವನ್ನು ವಿಚಾರಿಸಲಿಕ್ಕೆ ಬಕನೂ ದಾಲ್ಭ್ಯನೂ ದ್ವೈಪಾಯನನೂ ನಾರದನೂ ಪರಶುರಾಮನೂ ಕಾಶ್ಯಪನೂ ಹಾರೀತನೂ ಸ್ಥೂಲಕರ್ಣನೂ ಅಗ್ನಿವೇಶ್ಯನೂ ಶೌನಕನೂ ಬೃಹದಶ್ವನೂ, ಇನ್ನೂ ಕೆಲವರು ಮಹರ್ಷಿಗಳೂ ಅಲ್ಲಿಗೆ ಬಂದು ಆ ಪಾಂಡವರಿಂದ ಸತ್ಕಾರಗಳನ್ನು ಪಡೆದು, ಮನುಷ್ಯರಿಗೆ ಕಷ್ಟಸುಖಗಳು ಸ್ಥಿರವಲ್ಲವೆಂತಲೂ, ಕಾಲಾನು

ಸಾರವಾಗಿ ಬಾಮುವನ್ನು ಅನುಭವಿಸಿಯೇತೀರಬೇಕೆಂತಲೂ ನಾನಾವಿಧ
ವಾದ ಪೌರಾಣಿಕ ಕಥೆಗಳನ್ನು ಹೇಳಿ, ಯುಧಿಷ್ಠಿರನ ಕ್ಲೇಶಪರಿಹಾರವಾ
ಗುವಂತೆ ಸಮಾಧಾನೋಕ್ತಿಗಳನ್ನು ಹೇಳುತ್ತಾ ಬಂದರು. ಆತನು
ಅವರ ಹಿತೋಕ್ತಿಗಳನ್ನು ಲಾಲಿಸಿ ಅವರನ್ನು ಸಾತ್ವೈಸಿ ಕಳುಹಿದನು.

ಒಂದು ದಿನ ಯುಧಿಷ್ಠಿರನು ಕೌರವರ ಕ್ಷೇಮಸಮಾಚಾರಗ
ಳನ್ನೂ ಅವರ ಸ್ಥಿತಿಯನ್ನೂ ತಿಳಿದುಕೊಂಡು ಬರಹೇಳಿ ಕೆಲವು ದೂತ
ರನ್ನು ಕಳುಹಿಸನು. ಅವರು ಹಸ್ತಿನಾಪುರಕ್ಕೆ ಹೋಗಿ, ಕೌರವರ
ಶೌರ್ಯಪರಾಕ್ರಮ ವಿಭವಾದಿಗಳನ್ನು ಪ್ರತ್ಯಕ್ಷವಾಗಿ ನೋಡಿಕೊಂಡು
ಬಂದು ಪಾಂಡವರೆಲ್ಲರೂ ಕುಳಿತಿರುವಾಗ ತಾವು ನೋಡಿ ಬಂದ ಸಂಗತಿ
ಗಳನ್ನೆಲ್ಲಾ ವಿವರಿಸಿ ಹೇಳಿದರು. ಅದನ್ನು ಕೇಳಿ ದ್ರೌಪದಿಯು ಮತ್ಸ
ರಗ್ರಸ್ತಳಾಗಿ ಭೀಮಾದಿಗಳನ್ನು ಮೂದಲಿಸಿ, ಅವರ ಪರಾಕ್ರಮಗಳನ್ನು
ಹೀಯಾಳಿಸಿದಳು. ಅದನ್ನು ಕೇಳಿ, ಭೀಮಸೇನನು ಬಹು ಕೋಪಾ
ಕ್ರಾಂತನಾಗಿ, ಕೂಡಲೇ ಕೌರವರ ಗರ್ವವನ್ನು ಮಟ್ಟುಮಾಡಿ ಬರು
ವೆನೆಂದು ತನ್ನ ಗದೆಯನ್ನು ತೆಗೆದುಕೊಂಡು ಹೊರಟನು. ಅದನ್ನು
ಕಂಡು ಯುಧಿಷ್ಠಿರನು "ತಮ್ಮಾ! ನಾವು ಧರ್ಮಭ್ರಷ್ಟರಾಗಬಾರದು.
ಕಾಲನಿರೀಕ್ಷಣೆ ಮಾಡಿಕೊಂಡಿದ್ದು ದೈವಾನುಗ್ರಹ ಬಂದಾಗ ಮುಂದುವ
ರಿಯೋಣ. ಸ್ವಲ್ಪ ಸೈರಿಸು ಎಂದು ತಡೆದು, ತಮ್ಮಾ, ನಶ್ವರವಾದ ಈ
ಲೋಕದ ಸುಖಕ್ಕಾಗಿ ಧರ್ಮವನ್ನು ಬಿಡಲಾಗದು. ಈ ಶರೀರವು
ಹಾಳಾಗಲಿ ತಮ್ಮಂದಿರು ಕಾಡುಪಾಲಾಗಲಿ. ಹೆಂಡತಿಯು ಮುನಿ
ಯಲಿ. ಭೂಮಿಯೆಲ್ಲವೂ ಕೌರವನಿಗೇನೇ ಸೇರಿಹೋಗಲಿ. ಆಗು
ಹೋಗುಗಳ ಚಿಂತೆ ನನಗಿಲ್ಲ. ನನ್ನ ಸತ್ಯಕ್ಕೆ ಕುಂದು ಬಾರದಿದ್ದರೆ
ಸಾಕು. ಅದನ್ನು ಮಾತ್ರ ರಕ್ಷಿಸೆಂದು ಅವನ ಗಲ್ಲವನ್ನು ಹಿಡಿದು
ಕೊಂಡು ಸಾತ್ವೈಸುತ್ತಿರಲು ಆಗ ದ್ರೌಪದಿಯು ಆ ರಾಜನನ್ನು ಕುರಿತು
ಇಂತೆಂದಳು.

ದ್ರೌಪದಿ:—ಎಲೈ ಮಹಾರಾಜನೇ, ದುರಾತ್ಮನಾದ ದುರ್ಯೋಧನನ ದೆಸೆ
ಯಿಂದ ನಮಗೆ ಎಷ್ಟು ಕಷ್ಟಗಳು ಸಂಪ್ರಾಪ್ತವಾದುವು?
ನೋಡು. ಅತ್ಯುಚ್ಛ್ರಾಯಸ್ಥಿತಿಯಲ್ಲಿದ್ದ ನಾವೆಲ್ಲರೂ ರಾಜ್ಯಭ್ರ

ಷ್ಟರಾಗಿ ರಾಜಭೋಗಗಳನ್ನೆಲ್ಲಾ ಕಳೆದುಕೊಂಡು ಈ ಘೋರ ಕಾನನದಲ್ಲಿ ಇಂತಹ ದುರವಸ್ಥೆಯನ್ನು ಅನುಭವಿಸಬೇಕಾಗಿ ಬಂದಿತಲ್ಲಾ! ದುರ್ಯೋಧನ, ಕರ್ಣ, ಶಕುನಿ, ದುಶ್ಶಾಸನರ ದುರ್ಮಂತ್ರಗಳಿಂದ ಎಂತಹ ಅನರ್ಥಗಳು ಉಂಟಾದುವು? ದಿವ್ಯ ವಸ್ತ್ರಾಭರಣಗಳಿಂದ ಅಲಂಕೃತರಾಗಿ ಶೋಭಿಸುತ್ತಲಿದ್ದ ನೀವು ವಲ್ಕಲಾಜಿನಗಳನ್ನುಟ್ಟುಕೊಂಡು ದರ್ಭೆಯ ಹುಲ್ಲಿನ ಮೇಲೆ ಕುಳಿತಿರುವುದನ್ನು ನೋಡಲಿಕ್ಕೆ ನನಗೆ ಎಷ್ಟೋ ವ್ಯಸನವಾಗುತ್ತಿದೆ! ದಿನಂಪ್ರತಿ ಲಕ್ಷಾಂತರ ಬ್ರಾಹ್ಮಣರಿಗೆ ಆದರಾತಿಥ್ಯಗಳನ್ನು ಮಾಡಿ ಸತ್ಕರಿಸುತ್ತಿದ್ದ ನಾವು ಕಾಡುಮೃಗಗಳಂತೆ ಇಲ್ಲಿ ಜೀವಿಸಿಕೊಂಡಿರುವುದಕ್ಕಿಂತ ಹೆಚ್ಚಿದ ಕಷ್ಟವುಂಟೆ? ಮಹಾ ಬಲಪರಾಕ್ರಮಶಾಲಿಗಳಾದ ಭೀಮಾರ್ಜುನರು ತಮ್ಮ ಶಸ್ತ್ರಾಸ್ತ್ರಗಳನ್ನು ಒರೆಯಿಂದ ಈಚೆಗೆ ತೆಗೆಯದೆ ಮುಚ್ಚಿಟ್ಟುಬಿಟ್ಟು ವ್ಯರ್ಥವಾಗಿ ಕಾಲಹರಣ ಮಾಡುತ್ತಿರುವುದನ್ನು ನೀನು ಕಣ್ಣಾರೆ ಕಂಡೂ ಸುಮ್ಮನಿರುವೆಯಲ್ಲಾ! ಆಹಾ! ನಿನಗೆ ಸ್ವಲ್ಪವಾದರೂ ಕೋಪವಿಲ್ಲವೆ! ನೀನು ಎಂತಹ ಕ್ಷತ್ರಿಯನು? ಪರರಾಜರನ್ನು ಗೆದ್ದು ಯಥೇಚ್ಛವಾಗಿ ದ್ರವ್ಯಸಂಪಾದನೆಯನ್ನು ಮಾಡಿ ಯಜ್ಞಯಾಗಾದಿಗಳಿಂದ ದೇವತೆಗಳಿಗೆ ತೃಪ್ತಿಯುಂಟುಮಾಡಿ, ಸತ್ಪಾತ್ರದಲ್ಲಿ ದ್ರವ್ಯವನ್ನು ತ್ಯಾಗಮಾಡಿಕೊಂಡಿದ್ದ ನೀನು ಕಡುಬಡವನಂತೆ ಕೈಯುಡುಗಿ, ಕಣ್ಣುಕಣ್ಣು ಬಿಡುತ್ತಿರುವೆಯಲ್ಲ! ಯಮಳರಾದ ಈ ನಕುಲಸಹದೇವರನ್ನು ನೋಡಿದರೆ ನಿನಗೆ ದುಃಖಬರುವುದಿಲ್ಲವೆ? ಎಲೈ ಮಾನವೇಂದ್ರನೇ! ಎಷ್ಟೆಂದು ಹೇಳಲಿ? ದ್ರುಪದರಾಜನ ಹೊಟ್ಟೆಯಲ್ಲಿ ಹುಟ್ಟಿ ಪಾಂಡುಮಹಾರಾಯನಿಗೆ ಸೊಸೆಯಾಗಿ, ಧೃಷ್ಟದ್ಯುಮ್ನನಿಗೆ ಸಹೋದರಿಯಾಗಿ, ನಿಮ್ಮಂತಹ ಶೂರರ ಕೈಹಿಡಿದು ವೀರಪತ್ನಿಯಾಗಿರುವ ನಾನು ನಿಮ್ಮೊಂದಿಗೆ ವನೇಚರಿಯಾಗಿರುವುದನ್ನು ಕಂಡು ಕಂಡು ನೀನು ಹೇಗೆ ಸೈರಿಸುತ್ತಿರುವೆ? ಇದಕ್ಕಾಗಿ ನಿನ್ನ ಮನಸ್ಸಿನಲ್ಲಿ ಸ್ವಲ್ಪವಾದರೂ ವ್ಯಥೆಯಿಲ್ಲವೆ? ಕೋಪವಿಲ್ಲದವನು ಕ್ಷತ್ರಿಯನೇ ಅಲ್ಲವೆಂಬ ಲೋ

ಕೋಕ್ತಿಯು ನಿನ್ನಲ್ಲಿ ವಿಪರೀತವಾಗಿ ಪರಿಣಮಿಸಿದೆಯಲ್ಲ! ಕ್ಷಮಾ ಶೀಲನಾದ ಕ್ಷತ್ರಿಯನು ಸರ್ವಭೂತಗಳಿಗೂ ಅಪ್ರಿಯನಾಗಿ ಇಹ ಪರಸುಖಗಳನ್ನು ಕಳೆದುಕೊಳ್ಳುವನೆಂಬುದು ನಿನಗೆ ತಿಳಿಯದೆ? ಈ ವಿಷಯವಾಗಿ ಪುರಾತನವಾದ ಇತಿಹಾಸವೊಂದನ್ನು ನಿನಗೆ ಹೇಳುವೆನು ಕೇಳು.

ಧರ್ಮಾತ್ಮನಾಗಿಯೂ, ಮಹಾಪ್ರಾಜ್ಞನಾಗಿಯೂ ಇರುವ ಪ್ರಹ್ಲಾದನ ಬಳಿಗೆ ಒಂದು ದಿನ ಅವನ ಮೊಮ್ಮಗನಾದ ಬಲಿಚಕ್ರವರ್ತಿಯು ಬಂದು ಹೀಗೆಂದನು.—ಎಲೈ ಆರ್ಯನೇ; ಲೋಕದಲ್ಲಿ ಕ್ಷಮೆಯು ಶ್ರೇಷ್ಠವೋ, ತೇಜಸ್ಸು ಶ್ರೇಷ್ಠವೋ, ಎಂಬ ಸಂಶಯವು ನನಗೆ ಉಂಟಾಗಿದೆ. ಧರ್ಮಜ್ಞನಾದ ನೀನು ಇದನ್ನು ಪರಿಹರಿಸಿ ನನ್ನ ಮನಸ್ಸಮಾಧಾನ ಪಡಿಸಬೇಕು ಎಂದು ಬೇಡಿಕೊಂಡನು ಅದಕ್ಕೆ ಪ್ರಹ್ಲಾದನಿಂತೆಂದನು.—ಎಲೈ ಬಲಿಯೇ ಕೇಳು. ಲೋಕದಲ್ಲಿ ತೇಜಸ್ಸೇ ಯಾವಾಗಲೂ ಶ್ರೇಯಸ್ಕರವಾದುದೆಂದು ಹೇಳಲಿಕ್ಕೆ ಆಗದು. ಕ್ಷಮೆಯೇ ಹಿತಕರವಾದುದೆಂದು ಹೇಳಲಿಕ್ಕೂ ಬಾರದು. ನೀನು ಕೇಳುವ ಪ್ರಶ್ನೆಯು ಸಂದಿಗ್ಧವಾದುದು ಯಾವನು ಸದಾಕಾಲವೂ ಕ್ಷಮಾಶೀಲನಾಗಿರುವನೋ ಅವನು ಬಹು ದೋಷಗಳಿಗೆ ಗುರಿಯಾಗುವನು. ಸ್ವಂತ ಭೃತ್ಯರು ಕೂಡ ಅವನ ಆಜ್ಞೆಯನ್ನು ಉಲ್ಲಂಘಿಸಿ ನಡೆಯುವರು. ಯಾವ ಪ್ರಾಣಿಯೂ ಅವನ ಮಾತನ್ನು ಕೇಳುವುದಿಲ್ಲ. ಅವನಿಗೆ ಯಾವನೂ ಕೈಯೆತ್ತಿ ನಮಸ್ಕರಿಸುವುದಿಲ್ಲ. ಆದುದರಿಂದ ಯಾವಾಗಲೂ ಕ್ಷಮೆಯಿಂದ ಕೂಡಿದವನು ಪಂಡಿತರಿಂದ ನಿಂದಿಸಲ್ಪಡುವನು. ಅವನ ದ್ರವ್ಯವನ್ನು ನೀಚಜನರು ಅಪಹರಿಸುವರು. ವಸ್ತ್ರಭೂಷಣಗಳು, ಭೋಜನ ಪಾನೀಯಾದಿಗಳು ಮುಂತಾದ ಸಮಸ್ತ ಭೋಗಗಳನ್ನೂ ಅವನು ಕಳೆದುಕೊಳ್ಳುವನು. ಈ ಲೋಕದಲ್ಲಿ ಮರಣಕ್ಕಿಂತಲೂ ಹೆಚ್ಚಾದ ಅಪಮಾನಗಳಿಗೆ ಅವನು ಗುರಿಯಾಗುವನು. ಪರಿಜನರೂ ಮಕ್ಕಳೂ ಭೃತ್ಯರೂ ಪತ್ನಿಯರೂ ಅವನನ್ನು ಅಲಕ್ಷ್ಯಮಾಡಿ ಸ್ವೇಚ್ಛೆಯಿಂದ ನಡೆಯುವರು. ಕ್ಷಮಾವಂತನಿಗೆ ನಿತ್ಯವೂ ಇಂತಹ ಕಷ್ಟಗಳೂ ಇನ್ನೂ ಹಲವು ಸಂಭವಿಸುತ್ತಿರುವುವು. ಇನ್ನು ತೇಜಸ್ವಿಯಾದ ಪುರುಷನ ವಿಷಯವನ್ನು

ಹೇಳುವೆನು ಕೇಳು. ಅವನನ್ನು ಕಂಡರೆ ಎಲ್ಲರೂ ಹೆದರುವರು. ತೇಜ ಸ್ವಿಯೂ ದಂಡದಿಂದ ಸರ್ವರನ್ನೂ ವಶಪಡಿಸಿಕೊಳ್ಳುವನು. ಅಂತವನು ಅಪರಾಧಿಗಳನ್ನು ದಂಡಿಸಿ, ಶತ್ರುಗಳನ್ನು ಗೆದ್ದು ಇಹಲೋಕದಲ್ಲಿ ಕೀರ್ತಿ ಯನ್ನೂ ಸುಖಗಳನ್ನೂ ಪಡೆಯುವನು. ಆದುದರಿಂದ ಲೋಕದಲ್ಲಿ ಮನುಷ್ಯನು ಯಾವಾಗಲೂ ಮೃದುವಾಗಿ ಇರಬಾರದು. ತೀಕ್ಷ್ಣವಾ ಗಿಯೂ ಇರಬಾರದು. ದೇಶಕಾಲಪಾತ್ರಗಳನ್ನರಿತು ಯಾವ ಸಂದರ್ಭ ದಲ್ಲಿ ಕ್ಷಮೆಯನ್ನುಪಯೋಗಿಸಬೇಕೋ, ಯಾವ ಕಾಲದಲ್ಲಿ ತೇಜಸ್ಸನ್ನು ಉಪಯೋಗಿಸಬೇಕೋ ಚೆನ್ನಾಗಿ ಯೋಚಿಸಿ, ನಡೆಯುವವನೇ ಪ್ರಾಜ್ಞ ನೆನಿಸುವನು. ಕ್ಷಮಾಗುಣವನ್ನುಪಯೋಗಿಸತಕ್ಕ ಸಂದರ್ಭಗಳನ್ನು ಹೇಳುವೆನು ಕೇಳು. ಒಂದು ಸಾರಿ ತನಗೆ ಉಪಕಾರ ಮಾಡಿದವನು ಮಹಾಪರಾಧ ಮಾಡಿದರೂ ಅಂತವನ ತಪ್ಪುಗಳನ್ನು ಕ್ಷಮಿಸಬೇಕು. ಆಶ್ರಿತರು ಬುದ್ಧಿಹೀನತೆಯಿಂದ ತಪ್ಪುಮಾಡಿದರೆ ಅಂತವರ ತಪ್ಪುಗ ಳನ್ನೂ ಮನ್ನಿಸಬಹುದು. ಬುದ್ಧಿಪೂರ್ವಕವಾಗಿ ಅಪರಾಧ ಮಾಡಿ, ಬುದ್ಧಿಹೀನತೆಯಿಂದ ಹೀಗೆ ನಡೆಯಿತೆಂದು ಸುಳ್ಳಾಡಿದರೆ ಆ ಅಪರಾಧವು ಅಲ್ಪವಾಗಿದ್ದರೂ ಅಂತವರನ್ನು ಮನ್ನಿಸದೆ ಹೆಚ್ಚಾಗಿ ಶಿಕ್ಷಿಸಬೇಕು. ಯಾವನೇ ಆಗಲಿ, ಮೊದಲು ಸಾರಿ ಮಾಡಿದ ತಪ್ಪನ್ನು ಕ್ಷಮಿಸಬಹುದು. ಅವನು ಎರಡನೆಯ ಸಾರಿ ತಪ್ಪುಮಾಡಿದರೆ ಅಪರಾಧವು ಅಲ್ಪವಾಗಿದ್ದರೂ ಅಂತವನು ವಧ್ಯನೇ ಸರಿಯೆಂದು ತಿಳಿಯತಕ್ಕುದು. ಮನುಷ್ಯನು ಅಜ್ಞಾ ನದಿಂದ ಮಾಡಿದ ಅಪರಾಧವು ಮಹತ್ತಾಗಿದ್ದರೂ ಅದನ್ನು ಮನ್ನಿಸುವುದು ದೋಷವಲ್ಲ. ದೇಶಕಾಲವರ್ತಮಾನಗಳನ್ನೂ ತನ್ನ ಬಲಾಬಲಗಳನ್ನೂ ವಿಚಾರ ಮಾಡಿ ಅಪರಾಧಿಗಳ ತಪ್ಪುಗಳನ್ನು ಕ್ಷಮಿಸುವುದು ಯುಕ್ತವು. ಕೇವಲ ಕ್ಷಮಾಗುಣವೇ ಮುಖ್ಯವೆಂದು ತಿಳಿದು ದೋಷಿಗಳನ್ನು ಮನ್ನಿ ಸುತ್ತಾ ಬಂದರೆ ಲೋಕದಲ್ಲಿ ಅಧರ್ಮವು ಹೆಚ್ಚಿ, ಸತ್ಯಧರ್ಮಗಳಿಗೆ ಕುಂದು ಬರುವುದು. ತೇಜಸ್ಸೇ ಶ್ರೇಷ್ಠವೆಂದು ತಿಳಿದು ಪ್ರತಿ ಒಂದು ಸಂದರ್ಭದಲ್ಲಿಯೂ ಪ್ರತಾಪಶೌರ್ಯಗಳನ್ನೇ ಉಪಯೋಗಿಸುತ್ತಾ ಬಂದರೆ ಅದರಿಂದಲೂ ಅನರ್ಥಗಳು ಉಂಟಾಗುವುವು. ಆದುದರಿಂದ ಸಂದರ್ಭಾನುಸಾರ ಕ್ಷಮಾಪ್ರತಾಪಗಳನ್ನು ಉಪಯೋಗಿಸುತ್ತಾ ಬರು ವುದೇ ಪ್ರಾಜ್ಞರ ಲಕ್ಷಣವು.

ಈ ಪ್ರಕಾರ ಪ್ರಹ್ಲಾದನು ಬಲಿಚಕ್ರವರ್ತಿಗೆ ಬುದ್ಧಿ ಹೇಳಿರುವನು. ನಿಮ್ಮ ದಾಯಾದ್ಯರಾದ ಕೌರವರು ದುಷ್ಟರು, ಅಪರಾಧಿಗಳು, ವಂಚಕರು ಮತ್ತು ಅಸೂಯಾಳುಗಳು. ಅಂತಹ ನೀಚರಲ್ಲಿ ಕ್ಷಮಾ ಗುಣವು ಎಂದಿಗೂ ತೋರಿಸಲ್ಪಡತಕ್ಕದಲ್ಲ. ನಿಮ್ಮ ತೇಜಸ್ಸನ್ನು ಪ್ರಕಾಶಪಡಿಸತಕ್ಕ ಕಾಲವು ಈಗ ಪ್ರಾಪ್ತವಾಗಿರುವುದರಿಂದ ಇಂತಹ ಸಂದರ್ಭದಲ್ಲಿ ನೀನು ಕ್ಷಮಾಗುಣವನ್ನು ವರ್ಜಿಸಿ ಕ್ಷಾತ್ರತೇಜವನ್ನು ತೋರಿಸುವುದು ಯುಕ್ತವು.

ಯುಧಿ:—ಎಲೌ ಪ್ರಿಯಳೇ, ನೀನು ಹೇಳಿದ ರೀತಿಯಲ್ಲಿ ಸಂದರ್ಭಾನುಸಾರ ಕ್ಷಮಾತೇಜಸ್ಸುಗಳನ್ನು ಉಪಯೋಗಿಸುತ್ತಿರುವುದು ಸಾಮಾನ್ಯಲಕ್ಷಣವಾಗಿದ್ದರೂ ಧರ್ಮಸೂಕ್ಷ್ಮವನ್ನು ಹೇಳುವೆನು ಕೇಳು. ಕ್ರೋಧವು ಮನುಷ್ಯನನ್ನು ಕೊಂದುಬಿಡುವ ಶತ್ರುವು. ಆದರೂ ಒಂದೊಂದು ವೇಳೆ ಅದೇ ಮನುಷ್ಯನಿಗೆ ಅಭಿವೃದ್ಧಿಯನ್ನೂ ಉಂಟುಮಾಡುವುದು. ಆದುದರಿಂದ ಪಾಪಪುಣ್ಯಗಳು ಮನುಷ್ಯರಿಗೆ ಕ್ರೋಧದಿಂದಲೇ ಉಂಟಾಗುತ್ತವೆ. ಕ್ರೋಧವನ್ನು ಯಾವನು ಬಿಟ್ಟುಬಿಡುವನೋ ಅವನೇ ಪಂಡಿತನು. ಕ್ರೋಧದಿಂದ ಹಲವು ಬಗೆಯ ಕೇಡುಗಳು ಉಂಟಾಗುವುವು. ಅಜಾತಶತ್ರುವೆಂತಲೂ, ಧರ್ಮರಾಜನೆಂತಲೂ ಹೆಸರುಗೊಂಡಿರುವ ನಾನು ಕ್ರೋಧಕ್ಕೆ ಹೇಗೆ ವಶನಾಗಲಿ? ಕೋಪಿಷ್ಠನು ಗುರುವನ್ನಾದರೂ ಕೊಂದುಬಿಡುವನು. ತಾಯಿತಂದೆಗಳನ್ನೂ ಶಿಕ್ಷಿಸುವನು. ಕೋಪಗಾರನು ಎಂತಹ ಪಾಪಕೃತ್ಯಗಳನ್ನು ಮಾಡಲಿಕ್ಕೂ ಹೇಸುವುದಿಲ್ಲ. ಕೋಪದಿಂದ ಮನುಷ್ಯನ ಸದ್ಗುಣಗಳೆಲ್ಲವೂ ಮುಚ್ಚಲ್ಪಟ್ಟು ಮನಸ್ಸು ಕಠಿನವಾಗುವುದು. ಅಂತವನ ಬಾಯಿಂದ ಯಾವಾಗಲೂ ಅವಾಚ್ಯಗಳಾದ ಕಠಿನ ವಾಕ್ಯಗಳೇ ಹೊರಟುಬರುತ್ತಿರುವುವು ಈ ಮಾತನಾಡಬಹುದು, ಇಂತಹ ಮಾತುಗಳನ್ನಾಡಬಾರದು ಎಂಬ ಜ್ಞಾನವೇ ಕ್ರುದ್ಧನಾದವನಿಗೆ ಇರುವುದಿಲ್ಲ. ಅವನು ಕೋಪ ಬಂದಾಗ ನಿರಪರಾಧಿಗಳನ್ನು ಕೂಡ ಹಿಂಸಿಸಿಬಿಡುವನು. ವಧ್ಯರನ್ನು ಸನ್ಮಾನಿಸಿ ಪ್ರೀತಿ ತೋರಿ

ಸುತ್ತಾ ಬರುವನು. ಕೋಪಿಷ್ಠನು ತನ್ನನ್ನು ತಾನೇ ಕೊಂದು ಕೊಳ್ಳುವನೆಂದು ತಿಳಿ. ಇಹಪರ ಸುಖಗಳನ್ನು ಹಾಳುಮಾಡುವ ಕ್ರೋಧವನ್ನು ವರ್ಜಿಸುವವನೇ ಧನ್ಯನು. ಎಲೌ ಪಾಂಚಾಲಿಯೇ ಕೇಳು. ನಾನು ಹಲವು ನೀತಿಶಾಸ್ತ್ರಗಳನ್ನು ಓದಿರುವೆನು. ಧರ್ಮಸೂಕ್ಷ್ಮಗಳನ್ನು ಹಿರಿಯರಿಂದ ಕೇಳಿರುವೆನು ನಾನು ಚೆನ್ನಾಗಿ ವಿಚಾರಮಾಡಿ, ಕ್ರೋಧವು ಕೆಟ್ಟುದೆಂದು ತಿಳಿದು ಆ ಗುಣವನ್ನು ವರ್ಜಿಸಿಬಿಟ್ಟೆನು. ನನ್ನ ಕ್ಷಮಾಗುಣವೇ ನನ್ನನ್ನೂ ಪರರನ್ನೂ ಮಹದ್ಭಯದಿಂದ ರಕ್ಷಿಸುತ್ತಲಿದೆ. ಕೋಪಗೊಂಡವನ ಮೇಲೆ ನಾವೂ ಕೋಪಿಸಿಕೊಂಡರೆ ಇಬ್ಬರೂ ಕೆಟ್ಟುಹೋಗುವೆವು. ಪ್ರಾಜ್ಞನಾದವನು ತಾನು ಪರರಿಂದ ಕ್ಲೇಶಗೊಂಡರೂ ಅವರ ಮೇಲೆ ಕೋಪಿಸಿಕೊಳ್ಳಬಾರದು. ತನಗೆ ಕ್ಲೇಶಪಡಿಸಿದವನನ್ನು ಕೊಲ್ಲದೆ ಹುನ್ನಿಸಿದರೆ ಇಹಲೋಕದಲ್ಲಿ ಕೀರ್ತಿಯನ್ನು ಪಡೆಯುವುದಲ್ಲದೆ ಪರದಲ್ಲಿ ದೇವತೆಗಳಿಂದಲೂ ಸನ್ಮಾನಿಸಲ್ಪಡುವನು. ಆಪತ್ಕಾಲದಲ್ಲಿ ಕೂಡ ಕ್ಷಮಾಗುಣವನ್ನು ಬಿಡದೆ ಇರುವವನೇ ವಿವೇಕಿಯೆನಿಸುವನು. ಕ್ಷಮೆಯೇ ವಿಜಯವು, ಕ್ಷಮೆಯೇ ಶ್ರೇಯಸ್ಕರವು, ಕ್ಷಮಾಗುಣವೇ ಕೀರ್ತಿಪ್ರದವಾದುದು. ಆದುದರಿಂದ ಸಾಧುಜನರು ಬಹು ದೋಷಗಳಿಗೆ ತವರ್ಮನೆಯಾದ ಕ್ರೋಧವನ್ನು ಪರಿತ್ಯಜಿಸಬೇಕು. ಕ್ರೋಧದಿಂದ ಉಂಟಾಗುವ ದೋಷಗಳು ಅನಂತವಾಗಿರುವುವು. ಕ್ಷಮಾಗುಣದಿಂದ ಸಾಧ್ಯವಾಗದೆ ಇರತಕ್ಕ ಕಾರ್ಯವು ಒಂದಾದರೂ ಇಲ್ಲ ಪುರುಷನು ಯಾವಾಗಲೂ ಕ್ಷಮಾಶೀಲನಾಗಿರುವುದು ಉತ್ತಮವು. ಕ್ಷಮೆಯೇ ಧರ್ಮವು, ಕ್ಷಮೆಯೇ ಯಜ್ಞವು, ಕ್ಷಮೆಯೇ ವೇದಶಾಸ್ತ್ರಗಳು, ಕ್ಷಮೆಯೇ ತಪಸ್ಸು, ಕ್ಷಮೆಯೇ ಶೌಚವು. ಈ ಲೋಕವೆಲ್ಲವೂ ಕ್ಷಮೆಯಿಂದಲೇ ಧರಿಸಲ್ಪಟ್ಟಿರುವುದೆಂದು ಮಹಾತ್ಮನಾದ ಕಶ್ಯಪನು ಹೇಳಿರುವನು. ನಮ್ಮ ಪಿತಾಮಹನಾದ ಭೀಷ್ಮನು ಕೂಡ ಕ್ಷಮೆಯೇ ದೊಡ್ಡದೆಂದು ಹೇಳಿರುವನು. ನಮ್ಮ ಸ್ವಾಮಿಯಾದ ಶ್ರೀ ಕೃಷ್ಣನ ಅಭಿಪ್ರಾಯವು ಕೂಡ ಹೀಗೆಯೇ ಇರು

ವುದು ನಮ್ಮ ವಿದುರನೂ, ಕೃಪಾಚಾರ್ಯನೂ, ಸಂಜಯನೂ, ಅಶ್ವತ್ಥಾಮನೂ. ಆರ್ಯನಾದ ವೇದವ್ಯಾಸನೂ ಕ್ಷಮೆಯೇ ಸರ್ವೋತ್ತಮವಾದ ಗುಣವೆಂದು ಸಾರಿಸಾರಿ ಹೇಳುತ್ತಿರುವರು. ದುರ್ಯೋಧನನು ದ್ರವ್ಯಲೋಭದಿಂದ ನಮ್ಮ ರಾಜ್ಯಕೋಶಗಳನ್ನು ಅಪಹರಿಸಿದನು. ಇದರಿಂದ ನಾವೇನೂ ಕೆಟ್ಟುಹೋಗುವುದಿಲ್ಲ. ಕಾಲವು ದಾರುಣವಾಗಿರುವುದರಿಂದ ನಮ್ಮ ಭರತವಂಶಕ್ಕೆ ಮುಂದೆ ಏಳಿಗೆಯಿಲ್ಲವೆಂದು ತಿಳಿದಿರುವೆನು. ಸುಯೋಧನನು ಕ್ಷಮೆಗೆ ಅರ್ಹನಲ್ಲವೆಂಗು ನಾನು ಚೆನ್ನಾಗಿ ಬಲ್ಲೆನು. ಆದರೂ ಅಜಾತಶತ್ರುವೆನಿಸಿದ ನನ್ನ ಹೆಸರನ್ನು ಕೆಡಿಸಿಕೊಳ್ಳಬಾರದೆಂದು ಕ್ಷಮಾಗುಣವನ್ನು ಬಿಡಲಾರದೆ ಇದ್ದೇನೆ.

ದ್ರೌಪದಿ:—(ಆಗ್ರಹದಿಂದ) ಎಲೈ ಧರ್ಮಪುತ್ರನೇ, ನಿನಗೆ ಮೋಹವನ್ನುಂಟುಮಾಡಿರುವ ದೈವಕ್ಕೂ, ಇಂತಹ ನಿನ್ನನ್ನು ಸೃಷ್ಟಿಸಿದ ಬ್ರಹ್ಮದೇವನಿಗೂ ನಮಸ್ಕಾರವು. ಲೋಕದಲ್ಲಿ ಜನರು ಪ್ರತ್ಯೇಕವಾಗಿ ತಾವು ಮಾಡಿದ ಕರ್ಮಗಳಿಂದ ಅವುಗಳಿಗೆ ತಕ್ಕ ಫಲಗಳನ್ನು ಅನುಭವಿಸುತ್ತಾ ಬರುವರು. ಧರ್ಮದಿಂದಲಾಗಲಿ ಕ್ಷಮೆಯಿಂದಲಾಗಲಿ ಋಜುತ್ವದಿಂದಲಾಗಲಿ ಪುರುಷನು ಶ್ರೇಯಸ್ಸನ್ನು ಪಡೆಯುವುದಿಲ್ಲ. ನಮಗೆ ಈಗ ಸಂಭವಿಸಿರುವ ದುರ್ದಶೆಯು ಎಂತಹುದೆಂಬುದು ಇನ್ನೂ ನಿನಗೆ ತಿಳಿದಿಲ್ಲವಲ್ಲಾ ಎಂದು ವ್ಯಸನಪಡುತ್ತೇನೆ. ದುಸ್ಸಹವಾದ ಈ ಕ್ಲೇಶವನ್ನು ಅನುಭವಿಸಲು ನೀನಾಗಲಿ ನಿನ್ನ ಸಹೋದರರಾಗಲಿ ತಕ್ಕವರಲ್ಲ. ಪ್ರಾಣಸಂರಕ್ಷಣೆಯೆಂಬುದಕ್ಕಿಂತಲೂ ಪ್ರಿಯತಮವಾದ ಧರ್ಮವು ಮತ್ತಾವುದೂ ಇಲ್ಲವೆಂದು ಹಿರಿಯರಿಂದ ಕೇಳಿರುವೆನು. ನಿನ್ನ ರಾಜ್ಯವೂ, ಪ್ರೀತಿಪಾತ್ರರಾದ ಭೀಮಾದಿ ಸಹೋದರರೂ, ನಿನ್ನನ್ನಾಶ್ರಯಿಸಿರುವ ಈ ಬ್ರಾಹ್ಮಣೋತ್ತಮರೂ, ಧರ್ಮಪತ್ನಿಯಾದ ನಾನೂ ನಿನಗೆ ಬೇಕಾಗಿಲ್ಲ. ನೀನು ಹಿಡಿದಿರುವ ಧರ್ಮಶ್ರದ್ಧೆಯನ್ನು ಮಾತ್ರ ಬಿಡಲೊಲ್ಲದೆ ಇದ್ದೀಯೆ. ಧರ್ಮವನ್ನು ರಕ್ಷಿಸಿಕೊಂಡಿದ್ದರೆ ಅದು ಪುರುಷನನ್ನು ರಕ್ಷಿಸುತ್ತಾ ಬರುವುದೆಂಬ

ಆರ್ಯೋಕ್ತಿಯನ್ನೂ ಕೇಳಿರುವೆನು. ನಿನಗೆ ಸದಾ ಕಾಲವೂ ಧರ್ಮದಲ್ಲಿಯೇ ಬುದ್ಧಿಯಿರುವುದು. ನಿನ್ನ ಶ್ರೇಯಸ್ಸನ್ನು ಸೈರಿಸದೆ ಕಪಟದಿಂದ ದ್ರೋಹಮಾಡಿ, ದೇಶಕೋಶಗಳನ್ನು ಕಿತ್ತುಕೊಂಡು, ಅಷ್ಟರಿಂದಲೂ ತೃಪ್ತರಾಗದೆ ನಿಷ್ಕರುಣೆಯಿಂದ ಕಾಡಿಗೆ ಅಟ್ಟಿದ ಪರಮದ್ರೋಹಿಗಳಾದ ನಿನ್ನ ಶತ್ರುಗಳನ್ನು ಕೂಡ ಶಿಕ್ಷಿಸಬಾರ ದೆಂದು ನೀನು ತಿಳಿದು ಸುಮ್ಮನೆ ಕುಳಿತಿದ್ದರೆ ನಿನಗೆ ಶ್ರೇಯಸ್ಸು ಉಂಟಾಗುವುದು ಹೇಗೆ? ಭೂಮಿಯನ್ನು ಜಯಿಸಿ ಸ್ವಾಧೀನಪಡಿ ಸಿಕೊಳ್ಳದಿದ್ದರೆ ನಿನಗೆ ಕೀರ್ತಿಪ್ರತಿಷ್ಠೆಗಳು ಉಂಟಾಗುವುವೆ? ಎಲೈ ಯುಧಿಷ್ಠಿರನೆ! ನೀನು ದೇವತೆಗಳನ್ನೂ ಪಿತೃಗಳನ್ನೂ ಬ್ರಾಹ್ಮಣರನ್ನೂ ಸ್ವಾಹಾಕಾರಾದಿಗಳಿಂದ ಪೂಜಿಸಿ ಋಣವಿಮು ಕ್ತನಾಗುವುದು ಹೇಗೆ? ನೀನು ಬ್ರಾಹ್ಮಣರ ಇಷ್ಟಾರ್ಥಗಳನ್ನು ನೆರವೇರಿಸಬಲ್ಲೆಯಾ? ಅತಿಥಿಗಳನ್ನು ಸತ್ಕರಿಸಬೇಕಾದರೆ ಅಕಿಂಚ ನನಾದ ನಿನ್ನ ಮನೆಯಲ್ಲಿ ಏನಾದರೂ ಇದೆಯೆ? ನಿನಗೆ ಅಶ್ವಮೇ ಧಾದಿ ಮಹಾಕ್ರತುಗಳನ್ನು ಮಾಡಿ ಸ್ವರ್ಗಾದಿ ಪುಣ್ಯಲೋಕಗ ಳನ್ನು ಪಡೆಯುವ ಆಸೆಯೇ ಇಲ್ಲವಲ್ಲಾ! ಈ ಶರೀರವು ಕೇವಲ ಹೇತುಮಾತ್ರವಾದುದು. ಈಶ್ವರನ ಲೀಲಾವಿಲಾಸವೂ ಮಾಯಾ ಪ್ರಭಾವವೂ ತಿಳಿಯತಕ್ಕುದಲ್ಲ. ಅವನು ಭೂತಗಳನ್ನು ಭೂತ ಗಳಿಂದಲೇ ಮೋಹಗೊಳಿಸಿ ಕೊಲ್ಲಿಸುತ್ತಿರುವನು. (ಬಹು ದುಃ ಖದಿಂದ) ಆಹಾ! ನಿನಗೆ ಇಂತಹ ಕಷ್ಟ ಬಂದಿದ್ದರೂ ಅಪರಾಧಿ ಯಾದ ದುರ್ಯೋಧನನನ್ನು ಶಿಕ್ಷಿಸಬೇಕೆಂಬ ಬುದ್ಧಿಯು ಏತಕ್ಕೆ ಹುಟ್ಟಲಿಲ್ಲ? ಇದು ಕರ್ಮದ ಫಲವೆಂತಲೇ ತಿಳಿಯುತ್ತೇನೆ.

ಯುಧಿ:—(ಶಾಂತಿಯಿಂದ) ಎಲೌ ರಾಜಕುಮಾರಿಯೇ, ನನಗೆ ಭೋಗಾ ಪೇಕ್ಷೆಯಿಲ್ಲ. ಕರ್ಮದ ಫಲಗಳನ್ನೂ ಅಪೇಕ್ಷಿಸತಕ್ಕವನಲ್ಲ. ದಾನಮಾಡಬೇಕೆಂತಲೂ, ಯಜ್ಞಮಾಡಬೇಕೆಂತಲೂ, ಕರ್ಮಫ ಲಗಳನ್ನು ಅನುಭವಿಸಬೇಕೆಂತಲೂ ನನಗೆ ಬಯಕೆಯಿಲ್ಲ. ನನ್ನ ಮನಸ್ಸೆಲ್ಲವೂ ಧರ್ಮದಲ್ಲಿಯೇ ಮಗ್ನವಾಗಿದೆ. ನಾನು ಅದನ್ನು ರಕ್ಷಿಸುತ್ತಾ ಬರುವೆನು. ಹೆಚ್ಚಾಗಿ ಚರ್ಚಿಸುವುದರಿಂದ ಫಲ

ವೇನೂ ಇಲ್ಲ. ನಾನು ಸನಾತನ ಧರ್ಮವನ್ನು ನಡೆಸುತ್ತಾ ಅದರ ಫಲವನ್ನು ಭಗವದರ್ಪಣೆ ಮಾಡುತ್ತಾ ನಿಷ್ಕಾಮಿಯಾಗಿರುವೆನು. ನಾನು ದೈವವನ್ನಾಗಲಿ, ನನ್ನ ಕರ್ಮವನ್ನಾಗಲಿ ನಿಂದಿಸಲಾರೆನು. ಯಾವ ಭಗವಂತನ ಅನುಗ್ರಹದಿಂದ ನನಗೆ ಆತನಲ್ಲಿ ನಿಶ್ಚಲವಾದ ಭಕ್ತಿಯೂ ಹುಟ್ಟಿ ಉತ್ತಮ ಗತಿಯೂ ಲಭಿಸುವುದೋ ಅಂತಹ ದೇವರನ್ನು ನಂಬಿ ಸಮಸ್ತ ಭಾರವನ್ನೂ ಆತನಲ್ಲಿ ವಹಿಸಿರುವೆನು.

ದ್ರೌಪದಿ:—(ವಿನಯದಿಂದ) ಆರ್ಯಪುತ್ರನೇ, ನಾನು ಧರ್ಮವನ್ನಾಗಲಿ ಈಶ್ವರನನ್ನಾಗಲಿ ಅವಮಾನಪಡಿಸತಕ್ಕವಳಲ್ಲ. ಅವರನ್ನು ನಿಂದಿಸಬೇಕೆಂಬ ಅಭಿಪ್ರಾಯವೂ ನನಗೆ ಇಲ್ಲ. ಆರ್ತಳಾದ ನಾನು ನಮ್ಮ ಸ್ಥಿತಿಯನ್ನು ಕುರಿತು ವ್ಯಸನಪಟ್ಟು ಹೀಗೆ ಪ್ರಲಾಪಿಸುತ್ತಿದ್ದೇನೆ. ಕರ್ಮವನ್ನು ಆವಶ್ಯಕವಾಗಿ ಮಾಡಲೇ ಬೇಕು ಕರ್ಮ ಮಾಡದಿದ್ದರೆ ಯಾವ ಪ್ರಾಣಿಯೂ ಜೀವಿಸಲಾರದು. ಮನುಷ್ಯರಂತು ಈ ಲೋಕದಲ್ಲಿ ತಮ್ಮ ತಮ್ಮ ಕರ್ಮಗಳಿಂದ ಸುಖಾಸುಖಗಳನ್ನು ಬಯಸುತ್ತಲಿರುವರು. ತಾವು ಮಾಡಿದ ಕರ್ಮಫಲಗಳನ್ನು ಅನುಭವಿಸುತ್ತಲಿರುವರು ಯಾವ ಫಲವಾಗಲಿ ಕರ್ಮ ಮಾಡದೆ ಇರುವವನಿಗೆ ಅಕಸ್ಮಾತ್ತಾಗಿ ಸಿಕ್ಕಿಬಿಡುವುದೆ? ಇದು ಪ್ರತ್ಯಕ್ಷಸಿದ್ಧವಾಗಿರುವಾಗ ಕರ್ಮವನ್ನು ಮಾಡಲೇ ಬೇಕೆಂದು ಹೇಳದೆ ಇರತಕ್ಕವರು ಯಾರಿರುವರು? ಎಳ್ಳಿನಲ್ಲಿ ಎಣ್ಣೆಯೂ, ಹಸುವಿನಲ್ಲಿ ಹಾಲೂ, ಕಟ್ಟಿಗೆಯಲ್ಲಿ ಬೆಂಕಿಯೂ ಇರುವುದು ಸಿದ್ಧವಾದರೂ ತಕ್ಕ ಪ್ರಯತ್ನ ಮಾಡದಿದ್ದರೆ ಅವುಗಳನ್ನು ಪಡೆಯಲಿಕ್ಕೆ ಸಾಧ್ಯವೆ? ಪುರುಷನು ತನ್ನ ಕರ್ತವ್ಯದಿಂದ ಕರ್ಮಸಿದ್ಧಿಯನ್ನು ಪಡೆಯುವನು. ವೈರಾಗ್ಯದಿಂದ ಫಲಪ್ರಾಪ್ತಿಯಾಗುವುದಿಲ್ಲ. ಆದುದರಿಂದ ಮನುಷ್ಯರಿಗೆ ಪ್ರವೃತ್ತಿಯು ಅಗತ್ಯವು. ದೇಶಕಾಲೋಪಾಯಗಳನ್ನು ತಿಳಿದು ಶುಭಪ್ರಾಪ್ತಿಗಾಗಿ ಯಥಾಶಕ್ತಿಯಿಂದ ಪ್ರಯತ್ನಿಸಿದರೆ ಫಲವು ಲಭಿಸುವುದು. ಪೂರ್ವದಲ್ಲಿ ನಮ್ಮ ತಂದೆಯು ಪಂಡಿತನಾದ ಬ್ರಾಹ್ಮಣೋತ್ತಮನೊಬ್ಬನನ್ನು ಕೇಳಿದಾಗ ಆತನು ಇದೇ ರೀತಿಯನ್ನು ಹೇಳಿದನು. ಪ್ರಾಜ್ಞ

ನಾದ ನಿನ್ನಲ್ಲಿ ಹೆಚ್ಚಾಗಿ ಮಾತನಾಡಲಾರೆನು. ನಮ್ಮ ದುರವಸ್ಥೆ ಯನ್ನೂ, ದೇಶಕಾಲ ಸ್ಥಿತಿಗಳನ್ನೂ ತಿಳಿದು ಯುಕ್ತಾನುಸಾರ ರಾಜ್ಯಪ್ರಾಪ್ತಿಗೂ ನಮ್ಮ ಏಳಿಗೆಗೂ ತಕ್ಕ ಪ್ರಯತ್ನಗಳನ್ನು ಮಾಡಬಹುದು.

ಈ ಮಾತುಗಳನ್ನು ಕೇಳಿ ಮೌನವಾಗಿ ಕುಳಿತಿದ್ದ ಯುಧಿಷ್ಠಿರನನ್ನು ನೋಡಿ ಭೀಮಸೇನನು ಕೋಪದಿಂದ ನಿಟ್ಟುಸಿರುಗಳನ್ನು ಬಿಡುತ್ತಾ ಅವನನ್ನು ಕುರಿತು ಇಂತೆಂದನು —

ಭೀಮ:—ಅಣ್ಣಾ! ದ್ರೌಪದಿಯು ಹೇಳಿದ ನೀತಿಮಾತುಗಳನ್ನು ಕೇಳಿಯೂ ಅವಳಿಗೆ ಉತ್ತರವನ್ನು ಕೊಡದೆ ಮೌನವಾಗಿರುವೆಯಲ್ಲ! ಸತ್ಪುರುಷರಿಗೆ ಉಚಿತವಾದ ರಾಜ್ಯಪದವಿಯನ್ನು ಧರ್ಮದಿಂದ ಸಂಪಾದಿಸಿ, ಅದನ್ನು ಸಂರಕ್ಷಿಸುವುದು ನಿನ್ನ ಕರ್ತವ್ಯವಲ್ಲವೆ? ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳೂ ಇಲ್ಲದಿರುವ ನಾವು ಈ ತಪೋವನದಲ್ಲಿ ವಾಸಮಾಡಿಕೊಂಡಿರುವೆವು. ನಾವು ಧರ್ಮದಿಂದಾಗಲಿ ಆರ್ಜವದಿಂದಲಾಗಲಿ ತೇಜಸ್ಸಿನಿಂದಲಾಗಲಿ ನಮ್ಮ ರಾಜ್ಯವನ್ನು ಕಳೆದುಕೊಂಡವರಲ್ಲ ದುರಾತ್ಮನಾದ ದುರ್ಯೋಧನನು ಕಪಟದ್ಯೂತದಿಂದ ನಮ್ಮ ಸರ್ವಸ್ವವನ್ನೂ ಅಪಹರಿಸಿಕೊಂಡು ನಮ್ಮನ್ನು ಕಾಡಿಗೆ ಅಟ್ಟಿಬಿಟ್ಟನು. ಬಲಿಷ್ಠವಾದ ಸಿಂಹದ ಮಾಂಸವನ್ನು ದುರ್ಬಲವಾದ ನರಿಯು ಅಪಹರಿಸುವಂತೆ ನಮ್ಮ ರಾಜ್ಯವೆಲ್ಲವೂ ಆ ದುರುಳನಿಂದ ಆಕ್ರಮಿಸಲ್ಪಟ್ಟಿತು ನಮ್ಮ ಸ್ವಾರ್ಥವನ್ನು ಕಳೆದುಕೊಂಡು ನಾವು ದುಃಖದಿಂದ ಪರಿತಾಪಪಟ್ಟುಕೊಂಡು ಈ ಕಾಡಿನಲ್ಲಿ ಏತಕ್ಕೆ ಅಲೆದಾಡುತ್ತಿರಬೇಕು? ನಮ್ಮ ರಾಜ್ಯವೆಲ್ಲವೂ ಹೋದುದು ನಿನ್ನ ಪ್ರಮಾದದಿಂದಲೇ ಅಲ್ಲವೆ? ನಿರ್ಭಾಗ್ಯರಾದ ನಾವು ನಮ್ಮ ಮಿತ್ರರಿಗೆ ದುಃಖವನ್ನುಂಟುಮಾಡಿ, ನಮ್ಮ ಶತ್ರುವರ್ಗವನ್ನು ಸಂತೋಷಗೊಳಿಸುತ್ತಿದ್ದೇವೆ. ಕಳೆದುದಕ್ಕೆ ಚಿಂತಿಸಿ ಫಲವಿಲ್ಲ. ಈಗಲಾದರೂ ನೀನು ಅಪ್ಪಣೆ ಕೊಟ್ಟರೆ ಕೌರವರನ್ನೆಲ್ಲಾ ಯುದ್ಧದಲ್ಲಿ ಕೊಂದುಹಾಕಿ ನಮ್ಮ ರಾಜ್ಯವನ್ನು ಸಂಪಾದಿಸಿಕೊಡುವೆವು. ಅಣ್ಣಾ! ಈ ನಮ್ಮ

ಪಾಂಚಾಲಿಯು ದುರವಸ್ಥೆಯನ್ನು ನೋಡಿದೆಯಾ! ಶೂರರಾದ ಅರ್ಜುನಾದಿಗಳು ಎಷ್ಟು ಕ್ಲೇಶಪಡುತ್ತಿರುವರು ನೋಡು. ನೀನು ಯಾವಾಗ ನೋಡಿದರೂ ಧರ್ಮ, ಧರ್ಮ, ಧರ್ಮವೆಂದು ಬದ ರುತ್ತಾ ವೈರಾಗ್ಯದಿಂದ ಷಂಡನಂತೆ ಜೀವನಾ ಮಾಡಿಕೊಂಡಿರುವೆ. ಆತ್ಮಘಾತುಕವಾದ ಇದರ ಫಲವನ್ನು ನಾವೆಲ್ಲರೂ ಈಗ ಅನುಭವಿ ಸಬೇಕಾಗಿ ಬಂದಿದೆ ನಾವು ಯುದ್ಧಮಾಡಿ ಜಯಿಸಲಿಕ್ಕೆ ಶಕ್ತ ರಾಗಿದ್ದರೂ ಅಶಕ್ತರಂತೆ ಇದ್ದುಕೊಂಡು ಕಷ್ಟಪಡಬೇಕಾಗಿದೆ. ನಾವು ಶತ್ರುಗಳನ್ನು ಕೊಂದು ರಾಜ್ಯಸಂಪಾದನೆ ಮಾಡಿಕೊಂಡು ಸೌಖ್ಯವಾಗಿರೋಣ. ಅಥವಾ ಅವರೊಂದಿಗೆ ಕಾದಿ ಮಡಿದು ವೀರಸ್ವರ್ಗವನ್ನು ಪಡೆಯೋಣ. ಹಾಗೆ ಮಾಡದೆ ಸಂಶಯಗ್ರ ಸ್ತರಾಗಿ ಹಿಂದು ಮುಂದು ನೋಡುತ್ತಾ ಕೂತಿದ್ದರೆ ನಮಗೆಂದಿ ಗೂ ಕ್ಷೇಮವುಂಟಾಗಲಾರದು. ಹೇಗಾದರೂ ಮಾಡಿ ಯುದ್ಧಕ್ಕೆ ನಿಂತರೆ ನಮ್ಮ ರಾಜ್ಯವನ್ನು ಸಂಪಾದಿಸಬಹುದು. ಅಯ್ಯೋ! ಎಂತಹ ಕಷ್ಟವಿದು! ಅರ್ಜುನನ ಗಾಂಡಿವವೂ ನನ್ನ ಗದೆಯೂ ನಿರರ್ಥಕವಾಗಿ ಬಿದ್ದಿವೆಯಲ್ಲ! ಅಣ್ಣಾ! ನೀನು ಮನಸ್ಸಿನಲ್ಲಿ ಧೈರ್ಯವನ್ನು ತಂದುಕೊಂಡು, ಯುದ್ಧಮಾಡಲಿಕ್ಕೆ ನಮಗೆ ಅಪ್ಪಣೆ ಕೊಡು.

ಯುಧಿ:—ಎಲೈ ಭೀಮಸೇನನೇ, ನಿನ್ನ ಮಾತುಗಳೆಲ್ಲಾ ಸತ್ಯದಾಗಿವೆ. ಆದರೂ ಇಂತಹ ವಾಕ್ಯಗಳೆಂಬ ಶಲ್ಯಗಳಿಂದ ನನ್ನನ್ನೇತಕ್ಕೆ ನಿಂದಿಸಿ ನೋಯಿಸುತ್ತಿದ್ದೀಯೆ? ನನ್ನ ಅಜ್ಞಾನದಿಂದಲೇ ನಿಮಗೆ ಇಂತಹ ಕಷ್ಟವೂ ವ್ಯಸನವೂ ಪ್ರಾಪ್ತವಾಗಿವೆ. ನಾನು ಮರಳು ತನದಿಂದ ಜೂಜನ್ನಾಡಿ ದೇಶಕೋಶಗಳನ್ನೆಲ್ಲ ಕಳೆದುಬಿಟ್ಟೆನು. ಧೃತರಾಷ್ಟ್ರನು ಪುನಃ ಅವುಗಳನ್ನು ನನಗೆ ಅನುಗ್ರಹಿಸಿಕೊಟ್ಟನು. ಆದರೂ ಮಾಯಾವಿಯಾದ ಶಕುನಿಯು ಪ್ರೇರಣೆಯಿಂದ ದುರ್ಯೋ ಧನನು ನನ್ನಿಂದ ಅನುದ್ಯೂತವನ್ನಾಡಿಸಿ, ಮೋಸದಿಂದ ಈ ವನವಾ ಸದ ಪಣವನ್ನು ಕಟ್ಟಿಸಿ, ನಮ್ಮನ್ನೀಕಾಡಿಗೆ ಅಟ್ಟಿಬಿಟ್ಟನು. ಪೂರ್ವ ಕರ್ಮದಂತೆ ನಾವು ಈ ಕಷ್ಟಗಳನ್ನು ಅನುಭವಿಸಬೇಕಾಗಿ

ಬಂದಿದೆ. ನೀವುಗಳು ಶಕ್ತರೇ ಅಹುದು. ನಮ್ಮ ಪಾಂಚಾಲಿಯು ಪಾತಿವ್ರತ್ಯವು ಪರಿಶುದ್ಧವಾದುದೆಂದು ಜಗತ್ಪ್ರಸಿದ್ಧವೇ ಆಗಿದೆ. ಆದರೂ ಹನ್ನೆರಡು ವರುಷಗಳ ಕಾಲ ವನವಾಸ ಮಾಡುವೆನೆಂದು ಸತ್ಯಪ್ರತಿಜ್ಞೆ ಮಾಡಿಕೊಟ್ಟು ಬಂದಿರುವ ನಾವು ಅವಕ್ಕೆ ವಿರೋಧವಾಗಿ ಯುದ್ಧಮಾಡಲಿಕ್ಕೆ ಹೊರಡುವುದು ಧರ್ಮವೇ? ನೀನೇ ಯೋಚಿಸಿ ನೋಡಪ್ಪಾ! ಸತ್ಯಧರ್ಮಗಳನ್ನು ಉಲ್ಲಂಘಿಸಿ, ರಾಜ್ಯ ಸಂಪಾದನೆ ಮಾಡಿ ಅದನ್ನಾಳುವುದಕ್ಕಿಂತಲೂ ಮರಣವನ್ನಾದರೂ ಹೊಂದುವುದು ಲೇಸೆಂದು ತಿಳಿದಿದ್ದೇನೆ ಸತ್ಯವಾದಿಯೆನಿಸಿಕೊಂಡಿರುವ ನಾನು ನನ್ನ ಪ್ರತಿಜ್ಞೆಯನ್ನತಿಕ್ರಮಿಸಿ ಅಧರ್ಮದಲ್ಲಿ ಕಾಲಿಡಲೊಲ್ಲದೆ ಇದ್ದೇನೆ. ರಾಜ್ಯವಾಗಲಿ, ಹೆಂಡತಿಯಾಗಲಿ, ಮಕ್ಕಳಾಗಲಿ, ಒಡಹುಟ್ಟಿದವರಾಗಲಿ, ಕೀರ್ತಿಯಾಗಲಿ, ದ್ರವ್ಯವಾಗಲಿ, ದೇಶಕೋಶಗಳೇ ಆಗಲಿ, ಸತ್ಯಪರಿಪಾಲನೆಯ ಕಲಾಮಾತ್ರವನ್ನಾದರೂ ಹೋಲಲಾರವೆಂದು ತಿಳಿ.

ಭೀಮ:—ಎಲೈ ರಾಜೇಂದ್ರನೇ, ಧರ್ಮವೇ ಶ್ರೇಷ್ಠವೆಂಬುದೂ, ಅದನ್ನು ರಕ್ಷಿಸಬೇಕೆಂಬುದೂ ನಿಜವೇ ಸರಿ. ಇದಕ್ಕೋಸ್ಕರ ಹದಿಮೂರು ವರುಷಗಳ ಕಾಲ ನಿರೀಕ್ಷಿಸಿಕೊಂಡಿದ್ದು ಆಯುಷ್ಯವನ್ನು ಹಾಳುಮಾಡಿಕೊಳ್ಳಬೇಕೆ? ಪ್ರಾಣಿಗಳಿಗೆ ಎಂದಿದ್ದರೂ ಮರಣವು ಸಿದ್ಧವು. ಸಾವು ಬರುವುದಕ್ಕಿಂತ ಮುಂಚಿತವಾಗಿಯೇ ನಾವು ರಾಜ್ಯಲಾಭಕ್ಕೋಸ್ಕರ ಪ್ರಯತ್ನಿಸೋಣ. ದುರಾತ್ಮರಾದ ಆ ಕೌರವರಲ್ಲಿ ಸತ್ಯಧರ್ಮಗಳ ಉಪಯೋಗದಿಂದೇನು ಫಲ? ಅವರೂ ಸತ್ಯಶೀಲರಾಗಿದ್ದರೆ ನಾವು ಅವರಲ್ಲಿಯೂ ಸತ್ಯದಿಂದ ನಡೆಯಬಹುದು. ವಿಷವನ್ನು ಪ್ರತಿ ವಿಷದಿಂದಲೇ ಪರಿಹರಿಸಬೇಕೇ ಹೊರತು ಅಮೃತದಿಂದ ಹೋಗಲಾಡಿಸಲಾದೀತೆ? ಅಣ್ಣಾ! ಮೋಸಗಾರರನ್ನು ಮೋಸದಿಂದ ಕೊಲ್ಲುವುದರಲ್ಲಿ ಪಾಪವು ಲೇಶವೂ ಇಲ್ಲ. ಕ್ಷತ್ರಿಯರು ಸರ್ವಪ್ರಕಾರದಲ್ಲಿಯೂ ಶತ್ರುನಿಗ್ರಹ ಮಾಡುವುದೇ ಪರಮಧರ್ಮವೆಂದು ತಿಳಿದಿದ್ದೇನೆ.

ಯುಧಿ:—ತಮ್ಮಾ ! ರಾಜಧರ್ಮಗಳನ್ನು ನಾನೂ ತಿಳಿದುಕೊಂಡಿದ್ದೇನೆ. ಬಾಲಬುದ್ಧಿಯಿಂದಲಾಗಲಿ, ಚಾಪಲ್ಯದಿಂದಲೇ ಆಗಲಿ, ಅಥವಾ ಶೌರ್ಯಗರ್ವದಿಂದಲಾಗಲಿ ಕಾರ್ಯಾರಂಭ ಮಾಡಲಾಗದು. ನಾವು ಮಾಡಿಕೊಂಡಿರುವ ಸಂಕೇತವನ್ನು ಪಾಲಿಸದಿದ್ದರೆ ಈ ಲೋಕದಲ್ಲಿ ನಿಂದೆಯೂ, ಪರಲೋಕದಲ್ಲಿ ದುರ್ಗತಿಯೂ ತಪ್ಪುವುದಿಲ್ಲ. ಎಲೈ ಭೀಮಸೇನನೇ, ಕರ್ಣ ಭೀಷ್ಮ ದ್ರೋಣಾದಿ ವೀರರುಗಳ ಸಾಮರ್ಥ್ಯವನ್ನು ನೆನೆನೆನೆದು ದುಃಖದಿಂದ ಕೊರಗುತ್ತಿರುವ ನನಗೆ ನಿದ್ರಾಹಾರಗಳು ಕೂಡ ರುಚಿಸುವುದಿಲ್ಲ. ಈ ಸಂದರ್ಭದಲ್ಲಿ ಏನುಮಾಡಬೇಕೆಂಬುದೇ ನನಗೆ ತೋರದೆ.ಇದೆ ದೈವಸಂಕಲ್ಪವಿದ್ದಂತೆ ಆಗಲಿ.

ಈ ಪ್ರಕಾರ ಚಿಂತಿಸುತ್ತಿರುವಾಗ ಮಹಾತ್ಮನಾದ ವೇದವ್ಯಾಸಮುನಿಯು ಅಲ್ಲಿಗೆ ಬಂದನು. ಯುಧಿಷ್ಠಿರನು ಸಹೋದರ ಸಹಿತನಾಗಿ ಆ ಮುನೀಂದ್ರನಿಗೆ ಸಮುಚಿತ ಸತ್ಕಾರಗಳನ್ನು ಮಾಡಿದ ಮೇಲೆ ಸುಖಾಸೀನನಾದ ಆ ಮಹರ್ಷಿಯು ಯುಧಿಷ್ಠಿರನನ್ನು ಕುರಿತು ಇಂತೆಂದನು. “ಎಲೈ ರಾಜೇಂದ್ರನೇ, ನಿನ್ನ ಮನೋಭಿಪ್ರಾಯವನ್ನು ತಿಳಿದು ಹೊರಟು ಬಂದೆನು. ಕಷ್ಟನಷ್ಟಗಳಿಂದ ನೊಂದು ಚಿಂತೆಯಿಂದ ನರಳುತ್ತಿರುವ ನೀನು ಭೀಷ್ಮದ್ರೋಣಾದಿಗಳಿಗೂ, ಕೃಪಾಶ್ವತ್ಥಾಮಾದಿಗಳಿಗೂ, ಕರ್ಣ ದುರ್ಯೋಧನಾದಿಗಳಿಗೂ ಹೆದರಿ ನಿನ್ನ ಮನಸ್ಸಿನಲ್ಲಿ ಕುದಿಯುತ್ತಿದ್ದೀಯೆ. ಈ ಭಯವನ್ನು ಪರಿಹರಿಸಲು ಒಂದು ಮಾರ್ಗವನ್ನು ಹೇಳುವೆನು. ಧೈರ್ಯಶೀಲನಾಗಿ ಕೆಲಸ ಮಾಡಲಿಕ್ಕೆ ಪ್ರಯತ್ನಿಸು. ನಿನಗೆ ಈ ಭೀತಿಜ್ವರವು ಬಿಟ್ಟುಹೋಗುವುದು. ನನ್ನ ಸಂಗಡ ಬಾ” ಎಂದು ಏಕಾಂತ ಸ್ಥಳಕ್ಕೆ ಕರೆದುಕೊಂಡು ಹೋಗಿ ಅವನಿಗೆ ಪ್ರತಿಸ್ಮೃತಿಯೆಂಬ ಒಂದು ರಹಸ್ಯ ಮಂತ್ರವನ್ನಾತನಿಗೆ ಉಪದೇಶ ಮಾಡಿ, “ಎಲೈ ರಾಜೇಂದ್ರನೇ, ನಿನಗೆ ಶುಭಗಳನ್ನುಂಟುಮಾಡುವ ಉತ್ತಮ ಕಾಲವು ಬರುವುದು. ಅರ್ಜುನನಿಗೆ ಈ ಮಂತ್ರವನ್ನು ಉಪದೇಶಿಸು. ಅವನು ಘೋರತಪಸ್ಸು ಮಾಡಿ, ಶತ್ರುಗಳಿಗೆ ಅಜೇಯನಾಗಿ, ಇಂದ್ರಾದ್ಯಷ್ಟದಿಕ್ಪಾಲಕರಿಂದಲೂ, ಪರಮೇಶ್ವರನಿಂದಲೂ ಅನುಗ್ರಹಪೂರ್ವಕ ದಿವ್ಯಾಸ್ತ್ರಗಳನ್ನು ಸಂಪಾದಿಸಿ

ಕೊಂಡು ಬರುವನು. ನೀನು ಅಧೈರ್ಯಪಡದೆ ಅವನನ್ನು ಜಾಗ್ರತೆಯಲ್ಲಿ ತಪಸ್ಸಿಗೆ ಕಳುಹಿಸು” ಎಂದು ಹೇಳಿ ಅದೃಶ್ಯನಾದನು. ಯುಧಿಷ್ಠಿರನು ಸಂತೋಷದಿಂದ ತನ್ನ ಮನಸ್ಸಿನ ಭಯವನ್ನು ತೊರೆದು, ಸಹೋದರರಿಗೂ ದ್ರೌಪದಿಗೂ ಈ ವಿಷಯವನ್ನು ತಿಳಿಸಿ, ಮುಂದೆ ಬರುವ ಶುಭಕಾಲವನ್ನು ನಿರೀಕ್ಷಿಸಿಕೊಂಡಿರೋಣ. ಸ್ವಲ್ಪ ಸೈರಿಸಿಕೊಂಡಿರೆಂದು ಅವರನ್ನು ಸಮಾಧಾನ ಮಾಡಿ ಸುಖದಿಂದ ಇದ್ದನು.

---

## ಅಯ್ದನೆಯ ಸಂಧಿ.

---

ಸೂಚನೆ.—ಯುಧಿಷ್ಠಿರನ ಆಜ್ಞೆಯಿಂದ ಅರ್ಜುನನು ಇಂದ್ರಕೀಲಪರ್ವತಕ್ಕೆ ಹೋಗಿ ಪರಮೇಶ್ವರನನ್ನು ಕುರಿತು ತಪಸ್ಸು ಮಾಡಲು ಆ ಮಹಾದೇವನು ಪ್ರಸನ್ನನಾಗಿ ಪಾಶುಪತಾದ್ಯಸ್ತ್ರಗಳನ್ನು ಅನುಗ್ರಹಿಸಿಕೊಟ್ಟನು.

ವೇದವ್ಯಾಸ ಮುನಿಯು ಪಾಂಡವರಿಗೆ ಹಿತೋಕ್ತಿಗಳನ್ನು ಹೇಳಿ ಹೊರಟುಹೋದ ಬಳಿಕ ಯುಧಿಷ್ಠಿರನು ಅರ್ಜುನನನ್ನು ಸಮೀಪಕ್ಕೆ ಕರೆದು, ವ್ಯಾಸಮಹರ್ಷಿಯು ಉಪದೇಶಿಸಿದ ಮಂತ್ರವನ್ನಾತನಿಗೆ ಬೋಧಿಸಿ “ತಮ್ಮಾ! ನೀನು ಮಹೇಶಕ್ಷೇತ್ರವಾದ ಇಂದ್ರಕೀಲ ಪರ್ವತಕ್ಕೆ ಹೋಗಿ ಭಗವಂತನಾದ ಶಿವನನ್ನು ಕುರಿತು ತಪಸ್ಸು ಮಾಡಿ ಇಷ್ಟಸಿದ್ಧಿಯನ್ನು ಪಡೆದು ಬಾ. ಆ ಪರ್ವತವು ಕೈಲಾಸಗಿರಿಯ ಮೇರೆಯಲ್ಲಿಯೇ ಇರುವುದು. ಭಕ್ತರ ಇಷ್ಟಾರ್ಥಗಳನ್ನು ತಪ್ಪದೆ ಸಲ್ಲಿಸುವ ಮಹಾದೇವನು ಅಲ್ಲಿಯೇ ಇರುವನು. ನಿನ್ನ ತಪಸ್ಸು ನಿರ್ವಿಘ್ನವಾಗಿ ಜರುಗಲಿ. ಈಶ್ವರನು ಜಾಗ್ರತೆಯಲ್ಲಿ ನಿನಗೆ ಪ್ರಸನ್ನನಾಗಲಿ. ಪಾಶುಪತಾದಿ ದಿವ್ಯಾಸ್ತ್ರಗಳು ಆತನ ಅನುಗ್ರಹದಿಂದ ನಿನ್ನ ಕೈಸೇರಲಿ. ಶಿವಕೃಪಾಪಾತ್ರನಾಗಿ ಶೀಘ್ರದಲ್ಲಿ ಹೊರಟು ಬಾ. ಅರ್ಜುನಾ! ನೀತಿಯನ್ನು ಹೇಳುವೆನು ಕೇಳು. ಶಂಕರನ ಪಾದಭಕ್ತಿಯು ನಿನ್ನ ಮನಸ್ಸಿನಲ್ಲಿ ನಿಶ್ಚಲವಾಗಿರಲಿ. ನೀನು ಮಾಯೆಗೆ ಗುರಿಯಾಗಬೇಡ. ಅಹಂಕಾರದಿಂದ ಬೆರೆಯಬೇಡ. ನನ್ನ ಸಮಾನರು ಯಾರೂ ಇಲ್ಲವೆಂಬ ಅಹಂಕಾರದಿಂದ ಉಬ್ಬಬೇಡ

ರೋಷದಿಂದ ದುಡಿಕಿ ಅಕೃತ್ಯಗಳನ್ನು ಮಾಡಬೇಡ. ಲೋಭಕ್ಕೆ ವಶ
ವಾಗಬೇಡ. ಘನತೆಯನ್ನು ಬಿಟ್ಟು ಹಗುರನೆನಿಸಿಕೊಳ್ಳಬೇಡ. ಪರರು
ಹೊಗಳುವುದೆಲ್ಲ ನಿಜವೆಂದು ಹಿಗ್ಗಬೇಡ. ಎಲೈ ಪಾರ್ಥನೇ, ಸುಳ್ಳಾಡ
ಬೇಡ. ಕಾಪಟ್ಯವನ್ನು ಬಿಡು. ನಾಸ್ತಿಕರೊಂದಿಗೆ ಸಂಭಾಷಿಸಲೇಬೇಡ.
ನಂಬಿದವರನ್ನು ಕೆಡಿಸತಕ್ಕ ದ್ರೋಹಿಗಳ ಸ್ನೇಹವನ್ನು ಮಾಡಬೇಡ. ಎಂ
ತವನನ್ನಾದರೂ ಹೀನವಾಗಿ ತಿರಸ್ಕರಿಸಬೇಡ. ಪರಸ್ತ್ರೀಯರ ಸಹವಾಸ
ಮಾಡಬೇಡ. ಯುದ್ಧಭೂಮಿಯಲ್ಲಿ ಹೇಡಿಯಂತೆ ನಿಲ್ಲಬೇಡ. ಕ್ರೂರರಿಗೂ
ಶಠನೆಯುಳ್ಳವರಿಗೂ, ಅಹಂಕಾರ ಪಡುವವರಿಗೂ, ಉಪಕಾರಸ್ಮರಣೆಯಿ
ಲ್ಲದ ಕೃತಘ್ನರಿಗೂ, ಭೂತದ್ರೋಹದಿಂದಲೇ ಜೀವಿಸುವವರಿಗೂ, ಪರ
ಸ್ತ್ರೀಕಾಮುಕರಿಗೂ, ಮೂರ್ಖರಿಗೂ, ದುರಾಚಾರಶೀಲರಿಗೂ, ಚಾಡಿಮಾ
ತುಗಳನ್ನಾಡುವವರಿಗೂ, ಅಧರ್ಮನಿರತರಾದವರಿಗೂ ಸದ್ಗತಿಯಿಲ್ಲವೆಂದು
ಹಿರಿಯರು ಹೇಳುವರು. ಇದೂ ಅಲ್ಲದೆ ಒಡಹುಟ್ಟಿದವರಿಗೂ ಸ್ನೇಹಿತ
ರಿಗೂ ವಂಚಿಸಿ ಕೇಡುಮಾಡುವವನಿಗೂ ತಾಯಿತಂದೆಗಳನ್ನು ಕೊಲ್ಲುವ
ವನಿಗೂ, ನೀಚಕೃತ್ಯಗಳನ್ನು ಮಾಡುತ್ತಿರುವವನಿಗೂ ಉತ್ತಮ ಜಾತಿ
ಯನ್ನು ಹಾಳುಮಾಡುವವನಿಗೂ, ವರ್ಣಾಶ್ರಮಗಳನ್ನು ನಿಂದಿಸುವವ
ನಿಗೂ, ಜಾತಿಸಾಂಕರ್ಯವನ್ನುಂಟುಮಾಡುವವನಿಗೂ, ಬಹುಕ್ರೋಧವುಳ್ಳ
ವನಿಗೂ, ಅತಿ ಗರ್ವದಿಂದ ಬೆರೆಯುವವನಿಗೂ, ಪ್ರಾಣಹಿಂಸೆ ಮಾಡುವ
ವನಿಗೂ ಪರಲೋಕದಲ್ಲಿ ಸದ್ಗತಿ ಲಭಿಸದು. ತನ್ನೊಡೆಯನ ಕಾರ್ಯವನ್ನು
ಕೆಡಿಸುವವನಿಗೂ, ಅತಿ ಕಾಮುಕನಾದವನಿಗೂ, ಮಿಥ್ಯಾಲಾಪ ಮಾಡುವ
ವನಿಗೂ, ಬ್ರಹ್ಮದ್ವೇಷಿಗೂ, ಹೊಟ್ಟೆಬಾಕನಿಗೂ, ಬಕದಂತೆ ಕಪಟ
ಧ್ಯಾನ ಮಾಡತಕ್ಕವನಿಗೂ, ಗ್ರಾಮಾಧಿಕಾರಿಗೂ, ಪಾಷಂಡಿಗೂ, ಸುಳ್ಳು
ಸಾಕ್ಷಿ ಹೇಳುವವನಿಗೂ ಪರಲೋಕವಿಲ್ಲವೆಂದು ತಿಳಿ.

ತಮ್ಮಾ, ನೀನು ಯಾವನಿಗೂ ಉಪದ್ರವ ಮಾಡಬೇಡ. ಚರಾ
ಚರಾತ್ಮಕವಾಗಿ ಈ ಪ್ರಪಂಚದಲ್ಲಿರುವ ಸಮಸ್ತ ವಸ್ತುಗಳನ್ನೂ ನಿನ್ನ
ಶರೀರದಂತೆಯೇ ಭಾವಿಸು. ಘೋರವಾದ ತಪಸ್ಸು ಮಾಡುವುದಕ್ಕೆ ಹೆದ
ರದೆ ಧೈರ್ಯದಿಂದಿರು. ಪರಮೇಶ್ವರನ ಪಾದಾರವಿಂದವನ್ನು ಮರೆಯ
ಬೇಡ. ಈ ನೆವದಿಂದ ಹರಿಭಕ್ತಿಯನ್ನು ತಗ್ಗಿಸಲೂ ಬೇಡ. ಸುಖ

ವಾಗಿ ಹೋಗಿ ಬಾ. ಮೃತ್ಯುಂಜಯನು ನಿನ್ನಲ್ಲಿ ಅನುಗ್ರಹಿಸಿ ಮಹಾಸ್ತ್ರಗಳನ್ನು ಕೊಡಲಿ ಇಂದ್ರಾಗ್ನಿ ಮೊದಲಾದ ದಿಕ್ಪತಿಗಳೂ ಇತರ ದೇವಗಳೂ ನಿನಗೆ ಸ್ವಸ್ತಿವಾಚನ ಹೇಳಿ ತಮ್ಮ ತಮ್ಮ ಅಸ್ತ್ರಗಳನ್ನು ಕರುಣಿಸಲಿ.

ಈ ರೀತಿಯಲ್ಲಿ ಧರ್ಮರಾಯನು ಹೇಳಿದ ಉಪದೇಶ ವಾಕ್ಯಗಳನ್ನು ಕೇಳಿ ಅರ್ಜುನನು ತಮ್ಮ ಅಪ್ಪಣೆಯಂತೆ ನಡೆಯುವೆನೆಂದು ವಾಗ್ದಾನ ಮಾಡಿ, ಭೀಮಸೇನನಿಂದ ಆಶೀರ್ವಾದ ಪಡೆದು, ತನಗೆ ನಮಸ್ಕರಿಸಿದ ಮಾದ್ರೇಯರನ್ನು ಮನ್ನಿಸಿದನು. ಬಳಿಕ ಅಲ್ಲಿದ್ದ ಮುನಿಜನರಿಗೆಲ್ಲಾ ನಮಸ್ಕರಿಸಲು ಅವರು ಹರಸಿ ಚೆಲ್ಲಿದ ಮಂತ್ರಾಕ್ಷತೆಗಳಿಂದ ತಲೆಯೆಲ್ಲವೂ ತುಂಬಿಹೋಯಿತು. ಮುನಿಪತ್ನಿಯರು ಹರಸಿಕೊಟ್ಟ ಮೊಸರು, ಗರಿಕೆಯ ಹುಲ್ಲು, ಅಕ್ಷತೆ ಇವುಗಳನ್ನು ಸಂತೋಷದಿಂದ ಪರಿಗ್ರಹಿಸಿ ದ್ರೌಪದಿಗೆ ತಾನು ಹೊರಡುವ ವರ್ತಮಾನವನ್ನು ತಿಳಿಸಲು ಆಕೆಯು ಪತಿಗೆ ಕೈಮುಗಿದು ಇಂತೆಂದು ಹೇಳಿದಳು.

ಎಲೈ ಕಾಂತನೇ! ನೀನು ಶರೀರ ಸೌಖ್ಯವನ್ನು ತಪಸ್ಸು ಮಾಡುವಾಗ ಬಯಸಬೇಡ. ನಿನ್ನ ಶತ್ರುಗಳ ವಿಭವವನ್ನು ಚಿಂತಿಸಿ ನೋಡು. ನನಗೆ ಆ ದ್ರೋಹಿಗಳು ಮಾಡಿದ ಅವಮಾನಗಳನ್ನು ಜ್ಞಾಪಕದಲ್ಲಿಡು. ನಿಮ್ಮ ಅಣ್ಣಂದಿರ ಮಾತುಗಳನ್ನು ಮನದಲ್ಲಿಡು. ಮಹರ್ಷಿ ವೇದವ್ಯಾಸರು ಬೋಧಿಸಿದ ಮಂತ್ರವನ್ನು ಜಪಿಸುತ್ತಾ ಪರಮೇಶ್ವರನನ್ನು ಧ್ಯಾನ ಮಾಡಿಕೊಂಡಿರಬೇಕೆಂದು ಬೇಡುವೆನು. ಪ್ರಾಣವಲ್ಲಭಾ! ನಮ್ಮಂತವರು ಕ್ಷತ್ರಿಯ ಕುಲದಲ್ಲಿ ಹುಟ್ಟಬಾರದು. ನಮ್ಮ ಸ್ಥಿತಿ ನೋಡಿದಿಯಾ? ಬ್ರಾಹ್ಮಣರಂತೆ ತಿರಿದು ತಂದು ಹೊಟ್ಟೆ ಹೊರೆಯುಕೊಳ್ಳುವ ಈ ಬಾಳು ಎಂದಿಗೆ ತಪ್ಪುವುದೋ! ಪಾಪಬುದ್ಧಿಯುಳ್ಳ ದುರ್ಯೋಧನನು ರಾಜಸಭೆಯಲ್ಲಿ ಎಲೆ ಹಸುವೇ ಎಂದು ನನ್ನನ್ನು ಕರೆದನು ಅರ್ಜುನಾ! ಇದಕ್ಕಿಂತಲೂ ಹೆಚ್ಚಿದ ದುಃಖವೊಂದುಂಟೆ? ನನಗೆ ಭೋಗದಲ್ಲಿಯಾಗಲಿ ಧನದ ಮೇಲಾಗಲಿ ಆಶೆಯಿಲ್ಲ. ವೀರಪತ್ನಿಯೆನಿಸಿಕೊಂಡ ನಾನು ಪರಿಭವದುಃಖವನ್ನು ತಡೆಯಲಾರೆನು. ನೀನು ದೀರ್ಘ ಕಾಲ ನಮ್ಮನ್ನಗಲಿ ಪ್ರವಾಸ ಹೋಗುವುದರಿಂದ ನಮ್ಮಗಳಿಗೆಲ್ಲಾ ತುಂಬ ವ್ಯಸನವಾಗುತ್ತಿದೆ.

ನೀನು ದೃಢಮನಸ್ಕನಾಗಿ ಮಹಾದೇವನನ್ನಾರಾಧಿಸಿ ಕಾರ್ಯಸಿದ್ಧಿಯನ್ನು ಪಡೆದು ಬಾ ನಿನ್ನ ಕಾರ್ಯವು ನಿರ್ವಿಘ್ನವಾಗಿ ನೆರವೇರಲಿ. ಸಮಸ್ತ ದೇವತೆಗಳೂ ನಿನಗೆ ಸಹಾಯಕರಾಗಿ ಶುಭವನ್ನುಂಟುಮಾಡಲಿ. ಸುಖವಾಗಿ ಹೋಗಿ ಬಾ ಎಂದು ನಮಸ್ಕರಿಸಿದಳು.

ಇದನ್ನು ಕೇಳಿ ಪಾರ್ಥನು.—ಎಲೌ ಲಲನೇ! ಘೋರವಾದ ತಪಸ್ಸು ಮಾಡಿ ಪರಮೇಶ್ವರನ ಮನಸ್ಸನ್ನು ಮೆಚ್ಚಿಸುವೆನು. ಆ ಶಿವನ ಅನುಗ್ರಹದಿಂದ ಪಾಶುಪತವೇ ಮೊದಲಾದ ದಿವ್ಯಾಸ್ತ್ರಗಳನ್ನು ಪಡೆಯುವೆನು. ಬಳಿಕ ಬಂದು ಶತ್ರುಸಂಹಾರ ಮಾಡಿ ನಿನ್ನ ಪರಿಭವವೆಂಬ ಬೆಂಕಿಯನ್ನು ನಂದಿಸುವೆನು. ಚಿಂತಿಸಬೇಡ ಏಳು ಅಂದನು.

ಬಳಿಕ ಅರ್ಜುನನು ಪುರೋಹಿತನಾದ ಧೌಮ್ಯನಿಗೂ, ತನ್ನ ಅಣ್ಣಂದಿರಿಗೂ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ತನ್ನ ಕೈಯಲ್ಲಿ ಅಕ್ಷಯತೂಣೀರವನ್ನೂ ತನ್ನ ಗಾಂಡೀವ ಧನುಸ್ಸನ್ನೂ ದಿವ್ಯಾಸ್ತ್ರಗಳನ್ನೂ ಖಡ್ಗಗದಾದಿ ಆಯುಧಗಳನ್ನೂ ತೆಗೆದುಕೊಂಡು. ಅಲ್ಲಿದ್ದ ಬ್ರಾಹ್ಮಣರಿಗೆ ವಂದಿಸಿ, ಅವರ ಆಶೀರ್ವಾದವನ್ನು ಪಡೆದು, ಅಲ್ಲಿಂದ ಹಿಮವತ್ಪರ್ವತದ ಪುಣ್ಯಭೂಮಿಗಾಗಿ ಪ್ರಯಾಣ ಮಾಡಿದನು ಆತನಿಗೆ ಪ್ರಯಾಣ ಹೊರಡುವಾಗ ಶುಭಶಕುನಗಳಾದುವು. ಅರ್ಜುನನು ಮುಂದಕ್ಕೆ ನಡೆದು ಗಂಧಮಾದನ ಪರ್ವತವನ್ನು ದಾಟಿ ಇಂದ್ರಕೀಲ ಪರ್ವತಕ್ಕೆ ಹೋದನು. "ಎಲೈ ಅರ್ಜುನನೇ! ತಪಸ್ಸಿಗೆ ಅನುಕೂಲವಾದ ಸ್ಥಳವು ಇದೇ. ನೀನಿಲ್ಲಿಯೇ ತಪಸ್ಸಿಗೆ ನಿಲ್ಲು" ಎಂದು ಅಶರೀರವಾಣಿಯಾಯಿತು. ಅರ್ಜುನನು ಅಲ್ಲಿ ಬಂದು ಮರದಡಿಯಲ್ಲಿ ತಪಸ್ಸು ಮಾಡುತ್ತಾ ಕುಳಿತಿದ್ದ ಒಬ್ಬ ಮಹರ್ಷಿಯನ್ನು ಕಂಡು ಆತನಿಗೆ ವಂದಿಸಿ ನಿಂದಿದ್ದನು. ಅವನು ಪಾರ್ಥನನ್ನು ಕಂಡು, "ಅಯ್ಯಾ ತರುಣನೇ! ನೀನು ಯಾರು? ಏನು ಕೆಲಸದ ಮೇಲೆ ಇಲ್ಲಿಗೆ ಬಂದೆ? ಧನುರ್ಬಾಣಗಳನ್ನೂ ಉಕ್ಕಿನ ಕವಚವನ್ನೂ ಧರಿಸಿರುವುದರಿಂದ ನಿನ್ನನ್ನು ಕ್ಷತ್ರಿಯಪುತ್ರನೆಂದು ತಿಳಿಯುತ್ತೇನೆ. ಶಾಂತರಾದ ಋಷಿಗಳ ಆಶ್ರಮಗಳಿರುವ ಈ ಪುಣ್ಯಭೂಮಿಯಲ್ಲಿ ಇಂತಹ ಶಸ್ತ್ರಾಸ್ತ್ರಗಳಿಂದ ಯಾವ ಪ್ರಯೋಜನವೂ ಇಲ್ಲ. ಇಲ್ಲಿ ಶತ್ರುಗಳಾರೂ ಇಲ್ಲ. ಯುದ್ಧಪ್ರಸಂಗಗಳೂ ಸಂಭವಿಸಲಾರವು" ಎಂದನು.

ಅದಕ್ಕೆ ಅರ್ಜುನನು ವಿನಯದಿಂದ ಆ ಋಷಿಯನ್ನು ಕುರಿತು "ಮಹಾತ್ಮರೇ! ತಮ್ಮ ಮಾತು ಸತ್ಯವು. ತಪಸ್ಸು ಮಾಡಲಿಕ್ಕೆ ಬಂದಿರುವ ನಾನು ಆತ್ಮಸಂರಕ್ಷಣೆಗೋಸ್ಕರ ಧನುರ್ಬಾಣಗಳನ್ನು ಸಂಗಡಲೇ ತಂದೆನು ಇದರಿಂದ ನಿರ್ನಿಮಿತ್ತವಾಗಿ ಯಾರಿಗೂ ತೊಂದರೆ ಮಾಡತಕ್ಕವನಲ್ಲ" ಎಂದು ಹೇಳಿದನು. ಆಗಲಾ ತಪಸ್ವಿಯು "ಅಯ್ಯಾ ಧನಂಜಯನೇ! ನಾನು ದೇವೇಂದ್ರನು, ನಿನ್ನ ಮನೋದಾರ್ಢ್ಯವನ್ನು ತಿಳಿಯಬೇಕೆಂದು ಈ ರೂಪದಿಂದ ಬಂದು ಕಾಣಿಸಿಕೊಂಡೆನು ನಿನಗೆ ಬೇಕಾದ ವರವನ್ನು ಬೇಡು. ಕೊಡುವೆನು" ಎನಲಾ ಅರ್ಜುನನು ಆತನಿಗೆ ನಮಸ್ಕರಿಸಿ "ಆರ್ಯನೇ! ನನಗೆ ಐಶ್ವರ್ಯವಾಗಲಿ ದ್ರವ್ಯವಾಗಲಿ ಬೇಕಾಗಿಲ್ಲ. ಶತ್ರುನಿಗ್ರಹಕ್ಕೋಸ್ಕರ ದಿವ್ಯಾಸ್ತ್ರಗಳನ್ನು ಪಡೆಯಬೇಕೆಂದು ಬಂದಿರುವೆನು. ನನಗೆ ದಯಮಾಡಿ ದೇವತಾಸ್ತ್ರಗಳನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದನು. ಆಗ ಇಂದ್ರನು ಆತನನ್ನು ಕುರಿತು ಮೃದುವಾಕ್ಕುಗಳಿಂದ "ಮಗನೇ, ನೀನು ಮೊದಲು ತಪಸ್ಸು ಮಾಡಿ ಶೂಲಪಾಣಿಯಾದ ಪರಮೇಶ್ವರನನ್ನು ಮೆಚ್ಚಿಸಿ ಪಾಶುಪತಾಸ್ತ್ರವನ್ನು ಆ ಮಹಾದೇವನಿಂದ ಪಡೆದು ಬಾ. ಆಮೇಲೆ ನಾನೂ ನಿನಗೆ ಅನೇಕ ದಿವ್ಯಾಸ್ತ್ರಗಳನ್ನು ಕೊಡುವೆನು" ಎಂದು ಹೇಳಿ ಅದೃಶ್ಯನಾದನು.

ಬಳಿಕ ಅರ್ಜುನನು ಅಲ್ಲಿಂದ ಮುಂದೆ ಸ್ವಲ್ಪ ದೂರದಲ್ಲಿರುವ ಮನೋಹರವಾದ ವನದಲ್ಲಿ ಉತ್ತಮವಾದ ಬಾದು ಕೊಳದ ದಡದಲ್ಲಿ ದರ್ಭಾಸನದ ಮೇಲೆ ಕುಳಿತು ಮೊದಲನೆಯ ತಿಂಗಳಲ್ಲಿ ಮೂರು ದಿನಗಳಿಗೊಂದು ಸಾರಿ ಸ್ವಲ್ಪ ಆಹಾರವನ್ನು ತೆಗೆದುಕೊಳ್ಳುತ್ತಾ ತಪಸ್ಸು ಮಾಡಿದನು. ಎರಡನೆಯ ತಿಂಗಳಲ್ಲಿ ಆರು ದಿನಗಳಿಗೊಮ್ಮೆ ಫಲಾಹಾರ ಮಾಡುತ್ತಾ ಬಂದನು. ಮೂರನೆಯ ಮಾಸದಲ್ಲಿ ಪಕ್ಷಕ್ಕೊಂದು ಸಾರಿ ಎಲೆಗಳನ್ನು ಭಕ್ಷಿಸಿಕೊಂಡು ತಪಸ್ಸು ಮಾಡಿದನು. ನಾಲ್ಕನೆಯ ತಿಂಗಳಲ್ಲಿ ವಾಯುಭಕ್ಷಕನಾಗಿದ್ದನು. ಐದನೆಯ ತಿಂಗಳಲ್ಲಿ ಊರ್ಧ್ವಬಾಹುವಾಗಿ ಪಾದಾಂಗುಷ್ಠದ ಮೇಲೆ ನಿಂತು ಚಲಿಸದೆ ಘೋರವಾದ ತಪಸ್ಸು ಮಾಡಿದನು. ಆತನ ತಪಸ್ಸಿನ ಅಗ್ನಿಜ್ವಾಲೆಯು ಆ ವನವನ್ನೆಲ್ಲಾ ದಹಿಸುತ್ತಿದ್ದಿತು. ಅಲ್ಲಿದ್ದ ಋಷಿಗಳೆಲ್ಲರೂ ಪರಮೇಶ್ವರನ ಬಳಿಗೆ ಹೋಗಿ "ಮಹಾ

ದೇವನೆ ! ಯಾವನೋ ಒಬ್ಬ ಮಹಾತ್ಮನು ಉಗ್ರವಾದ ತಪಸ್ಸು ಮಾಡು ತ್ತಲಿರುವನು. ಅವನು ಯಾರೋ ? ಏನು ಉದ್ದೇಶದಿಂದ ತಪಸ್ಸು ಮಾಡುತ್ತಿರುವನೋ ನಮಗೆ ಅದೊಂದೂ ತಿಳಿಯದು. ತಪೋಗ್ನಿಜ್ವಾಲೆ ಯನ್ನು ನಾವು ತಡೆಯಲಾರದೆ ಇದ್ದೇವೆ. ಆತನ ಮನೋಭೀಷ್ಟವನ್ನು ಸಲ್ಲಿಸಿ ನಮ್ಮ ತಾಪವನ್ನು ಪರಿಹರಿಸಬೇಕು'' ಎಂದು ಭಕ್ತಿಯಿಂದ ಬಿನ್ನವಿಸಿದರು. ಪಾರ್ವತೀಕಾಂತನು ಅವರ ಪ್ರಾರ್ಥನೆಯನ್ನು ಲಾಲಿಸಿ, ಅವರನ್ನು ಕುರಿತು,—" ಮಹರ್ಷಿಗಳಿರಾ ! ಚಿಂತಿಸಬೇಡಿರಿ. ಅಲ್ಲಿ ತಪ ಸ್ಸುಮಾಡುತ್ತಿರುವವನು ಪಾಂಡುರಾಜನ ಮಧ್ಯಮಪುತ್ರನಾದ ಅರ್ಜು ನನು. ಅವನ ಸಂಕಲ್ಪವೂ ನನಗೆ ಚೆನ್ನಾಗಿ ತಿಳಿದಿದೆ. ಅವನಿಗೆ ಸ್ವರ್ಗಾ ದಿ ಭೋಗಗಳಾಗಲಿ, ಇಂದ್ರಾದಿ ದಿಕ್ಪಾಲರ ಪದವಿಗಳಾಗಲಿ ಬೇಕಾಗಿ ಲ್ಲವು. ನಾವು ಬಂದು ಆತನಿಗೆ ವರಗಳನ್ನು ಅನುಗ್ರಹಿಸುವೆವು. ನೀವು ಇದಕ್ಕಾಗಿ ವಿಚಾರಗೊಳ್ಳದೆ ನಿಮ್ಮ ನಿಮ್ಮ ನೆಲೆಗಳಿಗೆ ಹೋಗಿರಿ'' ಎಂದು ಹೇಳಕಳುಹಿದನು.



ಬಳಿಕ ಆ ಪರಮೇಶ್ವರನು ಒಬ್ಬ ಕಿರಾತನ ವೇಷವನ್ನು ಧರಿಸಿ, ಧನುರ್ಬಾಣಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಬೇಟೆಗಾರನಂತೆ ಹೊರಟನು. ಪಾರ್ವತೀದೇವಿಯೂ ಪತಿಯ ಇಂಗಿತದಂತೆ ಬೇಡಿತಿಯ ವೇಷದಿಂದ ಸಿಂಗರಿಸಿಕೊಂಡು ಹೊರಟಳು. ಆ ಪರಶಿವನ ಹಿಂದೆ ನಾನಾ ವಿಧ ವೇಷಗಳನ್ನು ಧರಿಸಿರುವ ಭೂತಗಣಗಳೂ ನಡೆದುಬಂದವು. ಎಲ್ಲ ರೂ ಸೇರಿ ಅರ್ಜುನನು ತಪಸ್ಸುಮಾಡುತ್ತಲಿದ್ದ ವನಕ್ಕೆ ಬರುತ್ತಿದ್ದರು. ಮಹಾಧ್ವನಿಯಿಂದ ಬರುತ್ತಿರುವ ಆ ಕಿರಾತ ಸೈನ್ಯದ ಗದ್ದಲವನ್ನು ಕೇಳಿ ಇಂದ್ರಕೀಲದ ತಪ್ಪಲ ವನದಲ್ಲಿ ವಾಸಮಾಡಿಕೊಂಡಿದ್ದ ಮೂಕನೆಂಬ ರಾಕ್ಷಸನು ಹಂದಿಯ ರೂಪವನ್ನು ಧರಿಸಿಕೊಂಡು ಹೊರಕ್ಕೆ ಬಂದನು. ಪರ ಮೇಶ್ವರನ ಕಿರಾತ ಪಡೆಯು ತಮ್ಮ ಮೊದಲ ಬೇಟೆಗೆ ದೊಡ್ಡ ವರಾಹವೇ ಸಿಕ್ಕಿತೆಂಬ ಸಂತೋಷದಿಂದ ಅದನ್ನು ಓಡಿಸಿಕೊಂಡು ಬಂದಿತು. ಶಬರ ಪತಿಯಾಗಿದ್ದ ಪರಮೇಶ್ವರನು ಇದೇ ಸಮಯವೆಂದು ಕ್ರೂರನಾರಾಚವ ನ್ನು ಬತ್ತಳಿಕೆಯಿಂದುಗಿದು ಬಿಲ್ಲಿನಲ್ಲಿ ಹೂಡಿ ಆ ಮೂಕದಾನವನ ಮೇಲೆ ಪ್ರಯೋಗಿಸಿದನು. ವೇಗವಾಗಿ ಬರುತ್ತಿರುವ ಆ ಅಂಬಿನ ರಭಸಕ್ಕೆ

ಹೆದರಿ ಆ ಹಂದಿಯು ಘೋಳಿಡುತ್ತಾ ತಪಸ್ಸಿನಲ್ಲಿ ಕುಳಿತಿದ್ದ ಅರ್ಜುನನ ಬಳಿಗೆ ಓಡಿ ಬಂದಿತು. ಧ್ಯಾನಾರೂಢನಾಗಿದ್ದ ಪಾರ್ಥನು ಕಣ್ದೆರೆದು ನೋಡಿ, ತನ್ನ ಮೇಲೆ ಬೀಳಬಂದಿರುವ ಹಂದಿಯೆಂದು ತಿಳಿದು ಆಕ್ಷಣ ದಲ್ಲಿಯೇ ಗಾಂಡಿವದಲ್ಲಿ ಬಾಣವನ್ನು ಸೇರಿಸಿ ಅದರ ಮೇಲೆ ಪ್ರಯೋಗಿಸಿ ದನು. ಶಿವನ ಬಾಣವೂ ಅಷ್ಟರಲ್ಲಿಯೇ ಬಂದು ಆ ಹಂದಿಯ ಮೈಮೇ ಲೆ ನೆಟ್ಟಿತ್ತು. ಅರ್ಜನನ ಬಾಣವೂ ಬಿದ್ದುದರಿಂದ ಆ ಹಂದಿಯು ಅಲ್ಲಿ ಯೇ ಸತ್ತುಬಿದ್ದಿತು.

ಆಗ ಶಿವನು ಅರ್ಜುನನನ್ನು ನೋಡಿ ನಗುತ್ತಾ ಇಂತೆಂದನು.

ಶಿವ:—ಎಲೋ ಮುನಿಯೇ ! ನಾನು ಕೆಡಹಿದ ಹಂದಿ ನನ್ನದು ತಪಸ್ಸಿಗೆ ಕುಳಿತಿದ್ದ ನೀನು ವ್ಯರ್ಥವಾಗಿ ಏತಕ್ಕೆ ಕೈನೋಯಿಸಿಕೊಂಡೆ. ನಿನ್ನ ಕೆಲಸಕ್ಕೆ ಹೋಗು.

ಅರ್ಜುನ:—ಎಲೈ ಕಿರಾತನೇ ನೀನು ಯಾರು ? ನನ್ನ ಬಾಣದಿಂದ ಸತ್ತ ಹಂದಿಯು ನಿನ್ನಂಬಿನಿಂದ ಮೃತವಾಯಿತೆಂದು ಶುಷ್ಕಕಲಹವನ್ನು ಮಾಡಬಂದಿರುವೆ. ನನ್ನ ಲಕ್ಷ್ಯಕ್ಕೆ ಗುರಿಯಾದ ಹಂದಿಯನ್ನು ನಾನು ಕೊಂದಿರುವಾಗ ನೀನೂ ಇದರ ಮೇಲೆ ಏತಕ್ಕೆ ಬಾಣ ವನ್ನು ಎಸೆದೆ ? ಇದು ಮೃಗಯಾ ಧರ್ಮಕ್ಕೆ ವಿರೋಧವಾದುದ ಲ್ಲವೆ ? ನಿರ್ಜನವಾದ ಈ ಅರಣ್ಯದಲ್ಲಿ ಸ್ತ್ರೀಗಣದಿಂದ ಕೂಡಿ ಸ್ವೇಚ್ಛೆಯಾಗಿ ತಿರುಗುವ ನೀನು ಬೇಕಾದಂತೆ ಕ್ರೂರಸತ್ವಗ ಳನ್ನು ಹೊಡೆದು ಹೊಟ್ಟೆ ಹೊರೆದುಕೊಳ್ಳಲು ಅವಕಾಶವಿರು ವಾಗ ಆತ್ಮರಕ್ಷಣೆಗಾಗಿ ನನ್ನ ಮೇಲೆ ಬೀಳಬಂದ ಈ ವರಾಹ ವನ್ನು ಕೊಂದ ನನ್ನೊಂದಿಗೆ ಇದೊಂದು ನೆವ ತೆಗೆದುಕೊಂಡು ಜಗಳವಾಡಬಂದೆಯಾ ? ಸಾಕು ತೊಲಗು. ನೀನು ಈಗಲೇ ಹೋಗದಿದ್ದರೆ ಇದಕ್ಕೆ ಬಂದ ಗತಿಯೇ ನಿನಗೂ ಸಂಭವಿಸುವು ದೆಂದು ತಿಳಿ.

ಹೀಗೆ ಬಂದು ಮಾಂಸಕ್ಕಾಗಿ ವಿರೋಧಿಸಿ ಕಲಹಿಸುವ ಸಿಂಹಗಳಂತೆ ಆ ವೀರರಿಬ್ಬರಿಗೂ ಕ್ರೋಧಾವೇಶಗಳು ಹೆಚ್ಚುತ್ತಾ ವಾಗ್ವಾದವು ಬಲ ವಾಯಿತು.

ಕಿರಾ:—ಎಲಾ ತಮ್ಮಡೀ! ಏತಕ್ಕೆ ಕೋಪಿಸಿಕೊಳ್ಳುತ್ತೀಯೆ! ಈ ಭೂಮಿಯು ವನಚರರಾದ ನಮಗೆ ಸೇರಿದುದು. ಬೇಟೆಯಾಡುವುದೇ ನಮ್ಮ ವೃತ್ತಿಯು. ಸುಕುಮಾರ ಶರೀರನಾಗಿಯೂ, ಸುಖಾರ್ಹನಾಗಿಯೂ ಇರುವ ನಿನಗೆ ತಪಸ್ಸೇಕೆ? ಈ ಕತ್ತಿಯೇಕೆ? ಬಿಲ್ಲಂಬುಗಳೇತಕ್ಕೆ?

ಅರ್ಜು:—ಎಲಾ ಶಬರಾ! ಈ ದಳಕ್ಕೆ ನೀನೇ ನಾಯಕನೋ ಅಥವಾ ಮತ್ತಾರಾದರೂ ಇರುವರೋ? ನಿನ್ನ ಗೊಡ್ಡುಬೆದರಿಕೆಯ ಮಾತುಗಳಿಗೆ ನಾನಂಜುವೆನೆ? ನಂಜುಗೊರಲನು ಬಂದು ನಿಂದರೂ ನನಗೆ ಅಂಜಿಕೆಯಿಲ್ಲ. ನನ್ನ ತಪಸ್ಸಿನ ವಿಚಾರವು ನಿನಗೇಕೆ? ಕಾಡಿನಲ್ಲಿ ಮೃಗಪಕ್ಷಿಗಳನ್ನು ಕೊಂದು ತಿನ್ನುವುದರಲ್ಲಿ ಚತುರನಾದ ನಿನಗೆ ತಪೋಧರ್ಮದ ವಿವರವೂ ಶಾಸ್ತ್ರಾರ್ಥವಿಚಾರವೂ ತಿಳಿಯುವುವೆ? ಸಾಕು ಸಾಕು. ಏಕಾಕಿಯಾದ ನೀನು ನನ್ನನ್ನು ಕೆಣಕಿ ಬದುಕಬಲ್ಲೆಯಾ? ನಿನ್ನಿಂದ ಇದು ಹರಿಯದು. ನೀನು ಹೋಗಿ ನಿನ್ನ ದಳಪತಿಯನ್ನು ಕರೆದುಕೊಂಡು ಬಾ.

ಕಿರಾ:—ನೀವು ಶಾಸ್ತ್ರಜ್ಞಾನವನ್ನು ಪಡೆದವರು. ನಾವು ಮೃಗಪಕ್ಷಿಗಳ ಬೇಟೆಯ ಮರ್ಮವನ್ನರಿತವರು. ಇದು ಜಾತಿಧರ್ಮವು ಬಲಿಷ್ಠರಾದ ನಿಮ್ಮೊಂದಿಗೆ ನಾವು ಸೆಣಸಬಲ್ಲೆವೆ? ನಿಮ್ಮಂತೆ ಯಾವ ಋಷಿಯು ಶಸ್ತ್ರಜ್ಞನಾಗಿರುವನೋ ಆ ಗುರುವಿನ ಬಿರುದನ್ನು ದಯಮಾಡಿ ತಿಳಿಸುವಿರಾ?

ಅರ್ಜು:—ಅಯ್ಯಾ! ಏನು ಕುಚೋದ್ಯದ ಮಾತುಗಳನ್ನಾಡುತ್ತಿರುವೆ? ನಾವು ಉದ್ದಾಮ ತಪಸ್ವಿಗಳೆಂದು ನಿನ್ನೊಡನೆ ಜಂಬಕೊಚ್ಚಿಕೊಳ್ಳಲಿಲ್ಲ. ನಿನ್ನ ಸಂಗಡ ನಮಗೆ ಚರ್ಚೆ ಏಕೆ? ಭಸ್ಮೋದ್ಧೂಳಿತವಿಗ್ರಹನಾಗಿಯೂ, ಮೃಗಾಜಿನಧರನಾಗಿಯೂ ಇರುವ ಪರಮೇಶ್ವರನೇ ನಮ್ಮ ಗುರುವು. ಆತನು ಬಿಲ್ಲಂಬುಗಳನ್ನು ಧರಿಸಿಕೊಂಡಿರುವುದರಿಂದ ಆ ದೇವನ ಶಿಷ್ಯರಾದ ನಾವೂ ಇದನ್ನೇ ಅನುಸರಿಸಿದ್ದೇವೆ.

ಕಿರಾ:—ಆಹಾ! ನೀವು ಲೋಕಶಿಕ್ಷಕರೋ! ನಿಮ್ಮ ತಪಸ್ಸಿನ ಚೆಂದ

ಯೂ ನಮಗೆ ಬೇಕಾಗಿಲ್ಲ. ಪಿನಾಕಪಾಣಿಯಾದ ಪರಶಿವನು ಅಡ್ಡ ಬಂದರೂ ನಮ್ಮ ಪಂತಗಳನ್ನು ಬಿಡತಕ್ಕವರಲ್ಲವೆಂದು ತಿಳಿ. ಇಗೋ ನನ್ನ ಬಾಣವನ್ನು ನೋಡಿದೆಯಾ? ಈ ಬಾಣದಿಂದ ಮೃತವಾದ ಹಂದಿಯು ನಿನ್ನಂಬಿನಿಂದ ಸತ್ತಿತೆಂದು ಹೇಗೆ ಹೇಳುವೆ?

ಅರ್ಜುನ:—ಎಲಾ ಬೇಡಾ, ಕಲ್ಪಿತಮಾತುಗಳನ್ನೆಲ್ಲಾ ಆಡಬೇಡ. ಸಾಕು ನಿಲ್ಲಿಸು. ಪ್ರತ್ಯಕ್ಷವಾಗಿ ನನ್ನ ಬಾಣದಿಂದ ಹಂದಿಯು ಸತ್ತುಬಿದ್ದಿರುವಾಗ ನಿನ್ನ ಬಾಣದಿಂದಲೇ ಸತ್ತಿತೆಂದು ಜಗಳವಾಡಲಿಕ್ಕೆ ಬಂದೆಯಾ?

ಕಿರಾ:—ಛೀ ಛೀ ಏತರ ಮಾತನಾಡುತ್ತಿಯೋ? ನಿನ್ನ ಬಾಣ ತಗಲುವುದಕ್ಕೆ ಮುಂಚೆಯೇ ನನ್ನ ಬಾಣದಿಂದ ಈ ಪ್ರಾಣಿಯು ಸತ್ತು ಹೋಗಿದ್ದಿತು. ಇದನ್ನು ಕೊಲ್ಲಬೇಕೆಂದು ಮೊದಲೇ ಸಂಕಲ್ಪಿಸಿಕೊಂಡು ನಾನಿಲ್ಲಿಗೆ ಬಂದೆನು. ಎಲೋ ಮೂರ್ಖನೇ! ಇಂತಹ ಅಹಂಕಾರದ ಮಾತುಗಳು ನಮ್ಮ ಮುಂದೆ ಸಾಗವು. ಮೈಕೊಬ್ಬಿನಿಂದ ಹೀಗೆ ಮಾತನಾಡಿದರೆ ನೀನು ಜೀವಸಹಿತನಾಗಿ ಹಿಂದಿರುಗಿ ಹೋಗಲಾರೆ.

ಅರ್ಜುನ:—(ಕೇಕೆ ಹಾಕಿ ನಕ್ಕು) ಹಾ ಹಾ! ಚೆನ್ನಾಗಿ ಹೇಳಿದೆ. ನೀನು ಶಕ್ತನಾಗಿಯೇ ಇರಬಹುದು. ನನ್ನ ಬಲವನ್ನೂ ಸ್ವಲ್ಪಮಟ್ಟಿಗೆ ನೋಡುವೆಯಾ! (ರೋಷದಿಂದ ಹುಬ್ಬುಗಂಟಿಟ್ಟುಕೊಂಡು) ಎಲಾ ಬೇಡ! ಸುಮ್ಮನೆ ಬಗುಳಬೇಡ. ನನ್ನನ್ನು ಕೆಣಕಿ ಕೆಡಬೇಡ ನಿನ್ನ ಹೆಂಡರು ಮಕ್ಕಳನ್ನು ದಿಕ್ಕಿಲ್ಲದವರನ್ನಾಗಿ ಮಾಡಬೇಡ. ಜೀವದ ಮೇಲೆ ಆಶೆ ಇದ್ದರೆ ಸುಮ್ಮನೆ ಹೋಗು. ಇಲ್ಲದಿದ್ದರೆ ನಿನ್ನ ಶೌರ್ಯವನ್ನು ಕಾರ್ಯದಿಂದ ತೋರಿಸು.

ಎಂದು ಹೇಳಿ ಅರ್ಜುನನು ಕೋಪದಿಂದ ಆಕರ್ಣಾಂತವಾಗಿ ಧನುಸ್ಸನ್ನು ಸೆಳೆದು ಟಂಕಾರಮಾಡಿ ಹೂಡಿದ ಬಾಣವನ್ನು ಆ ಶಬರನ ಮೇಲೆ ಬಿಟ್ಟನು. ಆ ಬಾಣವು ಮುಂದಕ್ಕೆ ಹೊರಡದೆ ಹಿಂದಿರುಗಿ ಬಂತು. ಅದರ ಹಿಂದೆ ಮತ್ತೊಂದು ಬಾಣವನ್ನೆಸೆದನು. ಅದೂ ಹಿಂದಿರುಗಿತು. ಅದರ

ಹಿಂದೆಯೇ ಮತ್ತೊಂದು, ಆಮೇಲೆ ಇನ್ನೊಂದು ಹೀಗೆ ಬಾಣಮಾಲೆ
ಯು ಪರಂಪರೆಯಾಗಿ ಹೊರಡುತ್ತಿದ್ದರೂ, ಅವುಗಳಲ್ಲಿ ಒಂದಾದರೂ ಆ
ಮಾಯಾ ಕಿರಾತನನ್ನು ಕೆಣಕಲಾರದೆ ಹೋದುವು. ಮಂಜುಮುಚ್ಚಿದರೆ
ಪರ್ವತನಂಜುತ್ತದೆಯೇ? ನೊಣವು ಹಾಲಾಹಲ ವಿಷವನ್ನು ತಿಂದು
ಜೀವಿಸಬಲ್ಲುದೆ? ಬಡಬಾಗ್ನಿಯು ಹಿಮಕಣದಿಂದ ನಂದಿಹೋಗುವು
ದುಂಟೆ? ಕಮಲದ ದಂಟಿನಿಂದ ಮದಿಸಿದ ಆನೆಯನ್ನು ಕಟ್ಟಲಾದೀತೆ?
ಅರ್ಜುನನ ಬಾಣವು ಮೃತ್ಯುಂಜಯನನ್ನು ಸೋಕಿ ನೋಯಿಸುವುದೆ?
ಅವನು ಬಾಣವರ್ಷವನ್ನು ಸುರಿಸುತ್ತಾ ಬಂದರೂ, ಪರಮೇಶ್ವರನ ಸಮೀ
ಪಕ್ಕೆ ಹೋಗಿ ಅವು ಅಲ್ಲಿಯೇ ಅಡಗುತ್ತಿದ್ದುವು. ಅದನ್ನು ಕಂಡು ಗಣ
ಪತಿಯು ಮುಳಿದನು ಕುಮಾರ ಸ್ವಾಮಿಯು ಅಬ್ಬರಿಸಿದನು. ವೀರ
ಭದ್ರನೇ ಮೊದಲಾದ ಭೂತಗಣಗಳೆಲ್ಲವೂ ಸಿಟ್ಟಿನಿಂದ ಅರ್ಜುನನನ್ನು
ಕೊಲ್ಲುವೆನೆಂದು ಶಿವನ ಆಜ್ಞೆಯನ್ನು ಬೇಡುತ್ತಿದ್ದುವು. ಆಗಲಾ ಭೂತೇ
ಶನು ಅವರನ್ನು ಸಮಾಧಾನಗೊಳಿಸಿ, ಕೈಯಲ್ಲಿ ಬಿಲ್ಲನ್ನು ಹಿಡಿದು ಬಾಣ
ವನ್ನು ತೊಡಿಸಿ ಅರ್ಜುನನ ಮೇಲೆ ಪ್ರಯೋಗಿಸಿದನು. ಅದು ತನ್ನ
ಮೇಲೆ ಬಂದು ಬೀಳುವುದಕ್ಕೆ ಮುಂಚೆಯೇ ಅವನು ಪ್ರತ್ಯಸ್ತ್ರವನ್ನು
ಬಿಟ್ಟು ಅದನ್ನು ಎರಡಾಗಿ ಕಡಿದುಹಾಕಿದನು. ಈಶ್ವರನಿಗೆ ಕೋಪ
ಬಂದು ಮತ್ತೊಂದು ಬಾಣವನ್ನು ಪ್ರಯೋಗಿಸಿದನು. ಪಾರ್ಥನು
ಅದನ್ನೂ ಕತ್ತರಿಸಿದನು. ಹೀಗೆ ಆ ವೀರರಿಬ್ಬರೂ ಪರಸ್ಪರ ಪ್ರಯೋಗಿಸು
ತ್ತಿದ್ದ ಬಾಣಗಳು ಮೇಘಮಂಡಲವನ್ನೆಲ್ಲಾ ಮುಚ್ಚಿಕೊಂಡು ಹೊಗೆ
ತುಂಬಿ ಕಣ್ಣುಗಳನ್ನು ಕುಕ್ಕುತ್ತಿದ್ದುವು. ಅರ್ಜುನನ ಪರಾಕ್ರಮಕ್ಕೆ
ಶಿವನು ಮನಸ್ಸಿನಲ್ಲಿ ಮೆಚ್ಚಿ, “ಭಲಾ! ಇವನೇ ನಿಜವಾದ ಶೂರನು.
ಗುಣಕ್ಕೆ ಮತ್ಸರವೇಕೆ? ಇನ್ನೂ ಇವನ ಸಾಹಸವನ್ನು ನೋಡೋಣ”
ಎಂದು ಬಾಣವೃಷ್ಟಿಯನ್ನವನ ಮೇಲೆ ಸುರಿಸುತ್ತಲೇ ಇದ್ದನು. ಆಗಲಾ
ಕುಂತೀಪುತ್ರನು ಮಾಯಾ ಕಿರಾತನಾದ ಈಶ್ವರನನ್ನು ನೋಡಿ “ಎಲೈ
ಬೇಡನೇ! ಕಿರಾತರಲ್ಲಿ ನೀನೇ ಬಲಶಾಲಿಯೆಂದು ತೋರುತ್ತದೆ. ದೇವ
ದಾನವರಲ್ಲಿ ಯಾವನೂ ನನ್ನೊಂದಿಗೆ ಇಷ್ಟು ಧೈರ್ಯದಿಂದ ಕಾದಿದವರಿಲ್ಲ.
ಇಂತಹ ವೀರನೊಂದಿಗೆ ಕಾಳಗ ದೊರೆತುದು ನನಗೆ ಬಲು ಸಂತೋಷವಾ

ಗಿದೆ. ಆಗಲಿ. ಈ ಬಾಣದ ಪೆಟ್ಟನ್ನು ಸೈರಿಸಬಲ್ಲೆಯಾ ? ನೋಡು ''
ಎಂದು ಹೇಳಿ ದಿವ್ಯಾಸ್ತ್ರನ್ನಭಿಮಂತ್ರಿಸಿ ಪರಮೇಶ್ವರನ ಮೇಲೆ ಪ್ರಯೋಗಿಸಿ
ದನು. ಅದು ವ್ಯರ್ಥವಾಯಿತು. ಮತ್ತೊಂದನ್ನು ಮಂತ್ರಿಸಿ ಬಿಟ್ಟನು.
ಅದೂ ಬರಿದಾಯಿತು. ಇನ್ನೊಂದು ಕ್ರೂರಬಾಣವನ್ನುಪಯೋಗಿಸಿದನು.
ಅದೂ ವಿಫಲವಾಯಿತು. ಹೀಗೆ ಹತ್ತಿರಕ್ಕೆ ಬಂದ ಬಾಣಗಳನ್ನೆಲ್ಲಾ
ಶ್ರೀಕಂಠನು ನುಂಗಿಬಿಟ್ಟನು. ಅರ್ಜುನನಿಗೆ ಕ್ಷಣಕ್ಷಣಕ್ಕೂ ಕೋಪವು
ಹೆಚ್ಚುತ್ತಾ ಬಂದಿತು. ಪೂರ್ವದಲ್ಲಿ ಖಾಂಡವವನ ದಹನ ಕಾಲದಲ್ಲಿ
ಕೊಡಲ್ಪಟ್ಟ ಅಕ್ಷಯತೂಣೀರವು ಸಮುದ್ರವು ಬತ್ತಿದಂತೆ ಬರಿದಾಗಿ
ಹೋಯಿತು. ಆಗಲವನು " ಅಯ್ಯೋ ! ಶಿವನ ಸೇವೆ ಮಾಡಲಿಕ್ಕೆ ಬಂದಿ
ರುವ ನನಗೆ ಈ ಬೇಡನೊಬ್ಬನು ಕಂಟಕನಾಗಿ ಬಂದನೆ ?'' ಎಂದು
ಆರ್ಭಟಿಸಿ, ತನ್ನ ಬಿಲ್ಲಿನಿಂದ ಒಂದು ಸಾರಿ ಶಿವನನ್ನು ಅಪ್ಪಳಿಸಿ ಹೊಡೆ
ದನು. ಅವಕ್ಕೂ ಮಾಯಾ ಕಿರಾತನು ಸಗ್ಗಲಿಲ್ಲ. ಮತ್ತೊಂದು ಸಾರಿ
ಅವನ ಮೇಲೆ ನುಗ್ಗಿ ಹೊಡೆದನು. ಆಗ ಈಶ್ವರನು ಮುಗುಳುನಗೆಯಿಂದ
ಆ ಧನುಸ್ಸನ್ನು ತನ್ನ ಕೈಗೆ ಸೆಳೆದುಕೊಂಡುಬಿಟ್ಟನು. ಅರ್ಜುನನು
ಬಿಲ್ಲನ್ನು ಕಳೆದುಕೊಂಡು, ಬಹು ರೋಷದಿಂದ ಗದೆಯನ್ನು ತೆಗೆದು
ಕೊಂಡು " ಎಲಾ ಶಬರಾ ! ಬೀಳು ನೆಲಕ್ಕೆ '' ಎಂದು ಹೊಡೆದನು.
ಅದೂ ಶಿವನನ್ನು ಸೋಕದೆ ಹೋಯಿತು. ಬಳಿಕ ಮರದ ದೊಡ್ಡ
ದೊಡ್ಡ-ರೆಂಬೆಗಳಿಂದ ಬಡಿದನು. ಆಮೇಲೆ ಕಲ್ಲುಗುಂಡುಗಳ ಮಳೆ
ಯನ್ನು ಸುರಿಸಿದನು. ಯಾವುದರಿಂದಲೂ ಪರಮೇಶ್ವರನನ್ನು ನೋ
ಯಿಸಲಾರದೆ ಹೋದನು. ಆಗಲು ಮಾಯಾಶಬರನು ಅರ್ಜುನನನ್ನು
ನೋಡಿ " ಹುಚ್ಚು ತಪಸ್ವಿಯೇ ! ನಿನ್ನಾಟವೆಲ್ಲವೂ ತೀರಿತೋ ? ಇನ್ನೇ
ನಾದರೂ ಆಯುಧಗಳಿದ್ದರೆ ತೆಗೆದುಕೊಂಡು ಬಾ '' ಎಂದನು ಅದಕ್ಕೆ
ಅರ್ಜುನನು " ಎಲಾ ಬೇಡನೇ ! ನಿನ್ನ ಮೇಲೆ ಬಿಡಲಿಕ್ಕೆ ಆಯುಧವೇ
ತಕ್ಕೆ ? ಬಾಹುಯುದ್ಧಮಾಡೋಣ ಎದ್ದು ಬಾ, ನನ್ನ ಮುಷ್ಟಿಯೇ
ಹಿರಿಯ ಆಯುಧವೆಂದು ತಿಳಿ. ಇದರ ಪೆಟ್ಟಿಗೆ ನೀನು ತಡೆದುಕೊಂಡು
ಉಳಿಯುವೆಯಾ ? '' ಎಂದು ಭುಜವನ್ನಪ್ಪಳಿಸಿ ಮಲ್ಲಯುದ್ಧಕ್ಕೆ
ನಿಂತನು.

ಆಗ ಪರಮೇಶ್ವರನು ಪಾರ್ವತಿಯನ್ನು ನೋಡಿ "ದೇವೀ! ಈ ಅರ್ಜುನನ ಪರಾಕ್ರಮವನ್ನು ಕಂಡೆಯಾ? ತರಗೆಲೆ, ವಾತಾಹಾರ ಇವುಗಳಿಂದ ನಾಲ್ಕು ತಿಂಗಳ ಕಾಲ ದೇಹವನ್ನು ದಂಡಿಸಿ ಬಹು ಕೃಶನಾಗಿದ್ದರೂ ಇವನು ನನ್ನೊಂದಿಗೆ ಸರಿಸಮಾನವಾಗಿ ಕಾದುತ್ತಿರುವನು ಬಿಲ್ಲು ಹೋಯಿತೆಂತಲಾಗಲಿ, ಆಯುಧಗಳು ವ್ಯರ್ಥವಾದುವೆಂತಲಾಗಲಿ ಸ್ವಲ್ಪವೂ ಹೆದರದೆ ವೀರರಸದ ನೊರೆಯನ್ನು ಕಾರುತ್ತಾ ಮಲ್ಲಯುದ್ಧಕ್ಕೆ ಕರೆಯುತ್ತಿರುವನು. ಇವನ ಪರಾಕ್ರಮವು ನೆಲಕ್ಕೆ ಹೊಡೆದ ಪುಟಚೆಂಡಿನಂತೆ ಹಾರಿಬರುತ್ತಿದೆ. ಈತನು ಯಾರೆಂಬುದನ್ನು ಬಲ್ಲೆಯಾ? ನಾರಾಯಣ ಋಷಿಗೆ ಕೆಳೆಯಾದ ನರನೆಂಬುವನು. ಇವರಿಬ್ಬರೂ ವಿಷ್ಣುವಿನ ಅಂಶದಿಂದ ಹುಟ್ಟಿದವರು. ನನಗೆ ಪರಮ ಭಕ್ತರು. ಇವನು ಪಾಶುಪತಾಸ್ತ್ರವನ್ನು ಪಡೆಯಬೇಕೆಂಬ ಅಪೇಕ್ಷೆಯಿಂದ ಬಂದು ಘೋರವಾದ ತಪಸ್ಸು ಮಾಡಿದನು. ಇವನಿಗೆ ರಾಗದ್ವೇಷಗಳಾವುವೂ ಇಲ್ಲ ಇವನಿಗೆ ಅಸ್ತ್ರವನ್ನು ಅನುಗ್ರಹಿಸುತ್ತೇನೆ. ಮಲ್ಲಯುದ್ಧದ ಪರಿಯನ್ನು ಸ್ವಲ್ಪ ಹೊತ್ತು ನೋಡುತ್ತಲಿರು" ಎಂದು ಹೇಳಿ ಆ ಅರ್ಜುನನಿಗೆ ಎದುರಾಗಿ ನಿಂತು ಭುಜಗಳನ್ನಪ್ಪಳಿಸಿ ಗರ್ಜಿಸಿದನು. ಇಬ್ಬರೂ ಕೈಗಳನ್ನು ಹಿಡಿದುಕೊಳ್ಳುವುದು, ಬಿಡುವುದು, ಹಾರುವುದು, ಪಟ್ಟಾಗಿ ಬಿಗಿದು ಕೆಡಹುವುದು, ಬೀಸಿ ಒಗೆಯುವುದು, ಮಂಗನ ಪಟ್ಟು, (ಕಪಿಮುಷ್ಟಿ) ಸರ್ಪಬಂಧನ, ಮುಂತಾದ ಬಗೆಬಗೆಯ ಕೌಶಲ್ಯಗಳಿಂದ ಕಾದುತ್ತಿದ್ದರು. ಅರ್ಜುನನು ಒಂದು ಸಾರಿ ಶಿವನ ಎದೆಯನ್ನು ತಿವಿದನು. ಅವನು ಅದಕ್ಕೆ ಬೆದರದೆ ಮುಷ್ಟಿಯಿಂದ ಅರ್ಜುನನನ್ನು ಗುದ್ದಿದನು. ಅರ್ಜುನನು ಆ ಪೆಟ್ಟನ್ನು ಸೈರಿಸಿಕೊಂಡು ಮತ್ತೊಂದು ಸಲ ಈಶ್ವರನ ವಕ್ಷಸ್ಥಳವನ್ನು ಬಡಿದನು. ಪಾರ್ವತೀರಮಣನು ಮರಳಿ ತಿವಿದು ಮುಯ್ಯಿ ತೀರಿಸಿದನು. ಬಳಿಕ ಪಾರ್ಥನು ಶಿವನ ತಲೆಯ ಮೇಲೆ ಹೊಡೆದನು. ಹೀಗೆ ಇಬ್ಬರೂ ಸೋಲದೆ ಅವರಿಬ್ಬರೂ ಸರಿಸಮವೆನಿಸಿ ಪರಸ್ಪರ ರೋಷಾವೇಶದಿಂದ ಕಾದುತ್ತಿರುವುದನ್ನು ಕಂಡು ದೇವತೆಗಳೆಲ್ಲಾ ಆಶ್ಚರ್ಯಪಟ್ಟು ಹೊಗಳುತ್ತಿದ್ದರು.

ಆಗ ಪರಮೇಶ್ವರನು ಅರ್ಜುನನನ್ನು ನೋಡಿ "ಎಲಾ ತಮ್ಮಡಿ! ನೀನೇ ಶೂರನು. ಜಗಜಟ್ಟಿ ಎಂದರೆ ನೀನೇ ಸೈ. ನಿನಗೆ ಸಮಾನರಾದ ವೀರರನ್ನು ಕಾಣೆನು" ಎಂದನು.

ಅರ್ಜುನ:—ಎಲಾ ವನೇಚರಾ, ನಿನ್ನ ಬಲವನ್ನು ನೋಡಿ ನನಗೆ ಆಶ್ಚರ್ಯವಾಗಿದೆ. ನೀನೂ ನನ್ನ ಪರಾಕ್ರಮಕ್ಕೆ ಮೆಚ್ಚಿದೆ ದೇವಾಸುರರಲ್ಲಿ ಯಾವನೂ ನನ್ನೆದುರಿಗೆ ನಿಂತು ಕಾದಲಾರರು. ಅವರನ್ನು ತೃಣಕ್ಕೆ ಬಗೆಯದ ನನ್ನನ್ನು ನೀನು ಹಲ್ಲಣಿಸಿದೆ. ಇದರಿಂದ ನೀನು ಸಾಮಾನ್ಯನಾದ ಬೇಡನಲ್ಲವೆಂದು ತಿಳಿಯುತ್ತೇನೆ. ನೀನು ಯಾರು? ಸೂರ್ಯನೋ, ಇಂದ್ರನೋ, ಹರಿಯೋ, ಹರನೋ ನಿಶ್ಚಯವನ್ನು ಹೇಳು.

ಹೀಗೆ ಹೇಳಿ ಕೈಗೆಡದೆ ಪುನಃ ಶಿವನ ಮೇಲೆ ಬಿದ್ದು ಹೊಡೆದನು. ಆಗ ಈಶ್ವರನು ಅರ್ಜುನನನ್ನು ಕೆಳಕ್ಕೆ ಕೆಡಹಿ ತುಳಿದನು. ಅವನ ಮೂಗುಬಾಯಿಗಳಿಂದ ರಕ್ತವು ಸುರಿಯುತ್ತಿದ್ದಿತು. ಅದನ್ನು ಕಂಡು ಪರಮೇಶ್ವರನ ಮನಸ್ಸು ಕರಗಿತು. ಆತನು "ಅಯ್ಯೋ! ಇವನಿಗೆ ಅಪಾಯವಾಯಿತೋ! ಪಾಪ! ಎಷ್ಟು ನೋವಾಯಿತೊ ಈ ಭಕ್ತನಿಗೆ?" ಎಂದು ಮರುಗಿದನು. ಅರ್ಜುನನ ಗರ್ವವು ಮುರಿಯಿತು; ಶಕ್ತಿಯು ಕುಗ್ಗಿತು; ಇಂದ್ರಿಯಪಟುತ್ವವು ತಗ್ಗಿತು; ಧ್ಯಾನವು ನೆಗ್ಗಿತು; ಮೈಯಿಂದ ಧಾರಾಳವಾಗಿ ಬೆವರು ನೀರು ಸುರಿದು ಕಾಲುಹೊಳೆಯಾಗಿ ಹರಿಯುತ್ತಿದ್ದಿತು. ಅವನ ಮನಸ್ಸು ಬೆರಗಿನಿಂದ ಬೆಂಡಾಗಿ ಮುಂದಿನ ಕರ್ತವ್ಯವೇ ತೋರದೆ ಹೋಯಿತು. ಆಗ ಅವನು ತನ್ನ ಮನಸ್ಸಿನಲ್ಲಿ "ಅಯ್ಯೋ! ಏಕೆ ಹೀಗಾಯಿತು? ನನ್ನ ನಿಯಮಕ್ಕೆ ಏನಾದರೂ ಭಂಗ ಉಂಟಾಯಿತೊ? ಪರಮೇಶ್ವರನಿಗೆ ಅಪರಾಧ ಮಾಡಿ ದೈವದ್ರೋಹಕ್ಕೆ ಗುರಿಯಾದೆನೋ? ಪೂರ್ವಜನ್ಮದಲ್ಲಿ ಗುರುಹಿರಿಯರನ್ನು ನಿಂದಿಸಿದ್ದೆನೊ? ಅಥವಾ ಇತರರು ಮಾಡುತ್ತಿದ್ದ ಧರ್ಮವನ್ನು ಕೆಡಿಸಿದ್ದೆನೊ ಇಂತಹ ಪರಾಭವ ಉಂಟಾಗಲು ಏನು ಕಾರಣವಿರಬಹುದು? ನಿದಾನಿಸಿ ನೋಡಿದರೆ ಈತನು ಜಾತಿಯಲ್ಲಿ ಕಿರಾತನಾಗಿ ತೋರುವುದಿಲ್ಲ ಶಿವನೋ ವಿಷ್ಣುವೋ ನನ್ನ ಮನವನ್ನು ಪರೀಕ್ಷಿಸಲು ಈ ಮಾಯಾವೇಷದಿಂದ ಬಂದಿರಬ

ಹುದೆ? ಹಂದಿಯೊಂದು ಇಲ್ಲಿಗೆ ಏತಕ್ಕೆ ಬಂದಿತು? ಈ ಬೇಡರವನು ಅದನ್ನು ಹಿಂಬಾಲಿಸಿಕೊಂಡು ಬಂದುದೇಕೆ? ಇವನಿಗೂ ನನಗೂ ವಾಗ್ವಾದನೇತಕ್ಕೆ ಹುಟ್ಟಿತು? ನಿರರ್ಥವಾಗಿ ಯುದ್ಧಪ್ರಸಕ್ತಿಯಲ್ಲಿ ಬಿದ್ದು ತಪ್ರೋವೃತ್ತಿಯನ್ನೇಕೆ ಬಿಟ್ಟೆನು? ಶಿವಭಕ್ತಿ ತಗ್ಗಿದ್ದರಿಂದಲೇ ನಿರ್ಭಾಗ್ಯನಾದ ನನಗೆ ಈ ಸೋಲು ಉಂಟಾಗಿರಬಹುದೆ?" ಎಂದು ಹಲವು ಬಗೆಯಿಂದ ಚಿಂತಿಸುತ್ತಿದ್ದನು.

ಬಳಿಕ ಆ ಪಾಂಡವ ಮಧ್ಯಮನು ಅನ್ನ ಅವಜ್ಞತೆಗೆ ನೊಂದುಕೊಂಡು, "ಆದುದಾಯಿತು. ಇದಕ್ಕೆ ಏಕೆ ಚಿಂತಿಸಬೇಕು? ನಮ್ಮ ಬುದ್ಧಿ ಸೊಟ್ಟೆ ಹೋಗಿದ್ದರೆ ಶಿವನು ತಾನೇ ಏನುಮಾಡಬಲ್ಲನು? ಆ ಪರಮೇಶ್ವರನಿಗೇನೇ ಶರಣಾಗತನಾಗುವೆನು. ಆ ಮಹಾದೇವನು ಅನುಗ್ರಹಿಸಿದರೆ ಈ ಬೇಡನನ್ನು ಗೆಲ್ಲುವುದು ನನಗೊಂದು ಕಷ್ಟವೇ?" ಎಂದು ಯೋಚಿಸಿ, ಕೂಡಲೇ ಮರಳಿನಿಂದ ಲಿಂಗವನ್ನು ಮಾಡಿಟ್ಟು, ಸಗುಣಾರಾಧನೆಯ ಕ್ರಮದಿಂದ ಆ ದೇವನಿಗೆ ಆವಾಹನಾದಿ ಷೋಡಶೋಪಚಾರ ಪೂಜೆಗಳನ್ನು ಭಕ್ತಿಯಿಂದ ಮಾಡಿ, ಬಗೆ ಬಗೆಯ ಪತ್ರಪುಷ್ಪಫಲಗಳನ್ನು ತಂದು ಅರ್ಪಿಸಿದನು. ತರುವಾಯ ಶಿವಸ್ತುತಿಯನ್ನು ಮಾಡಿ, ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ "ಎಲೈ ಪರಮೇಶ್ವರನೆ! ನಾನು ಯಾವ ಅಪರಾಧ ಮಾಡಿದೆನೋ, ವಿಜಯನೆಂಬ ಹೆಸರನ್ನು ಈ ಬೇಡನ ಯುದ್ಧದಲ್ಲಿ ಕಳೆದುಕೊಳ್ಳುವಂತೆ ಆಯಿತು. ನನ್ನನ್ನಿವನು ಗೆದ್ದನು. ಇವನ ಸಾಮರ್ಥ್ಯವನ್ನು ಭಂಗಿಸಿ, ನನ್ನ ಹೆಸರನ್ನು ಸಾರ್ಥಕಪಡಿಸಿಕೊಳ್ಳುವ ಶಕ್ತಿಯನ್ನು ಅನುಗ್ರಹಿಸು" ಎಂದು ಪ್ರಾರ್ಥನೆ ಮಾಡಿ, ಕೂಡಲೆ ಯುದ್ಧಕ್ಕೆ ಸಿದ್ಧನಾಗಿ ಬಾಹುವನ್ನಪ್ಪಳಿಸುತ್ತಾ ನಿಂತುಕೊಂಡನು. ಆಗ ಪರಮೇಶ್ವರನು ನಗುತ್ತಾ "ಬಾರಯ್ಯಾ! ಬಂದು ಸಾರಿ ಗೆದ್ದದ್ದು ಸಾಲದೊ? ಆಗಲಿ" ಎಂದು ನಿಂತನು. ಅರ್ಜುನನು ನಿದಾನಿಸಿ ನೋಡಲು ತಾನು ಲಿಂಗಕ್ಕೆ ಸಮರ್ಪಿಸಿದ ಹೂವುಗಳೆಲ್ಲವೂ ಶಬರನ ತಲೆಯ ಮೇಲೆ ಹೊಳೆಯುತ್ತಿದ್ದುವು. ಅವುಗಳನ್ನು ಕಂಡು ಆತನು ಆಶ್ಚರ್ಯಗೊಂಡು, ಮತ್ತೊಂದು ಸಾರಿ ನಿರ್ಮಾಲ್ಯ ಕುಸುಮಗಳನ್ನು ತೆಗೆದೊಗೆದು, ಪರಮೇಶ್ವರನನ್ನು ಪೂಜಿಸಿ, ಹೊಸ ಪುಷ್ಪಗಳಿಂದ ಅಲಂಕರಿಸಿ, ಮಲ್ಲಯುದ್ಧಕ್ಕೆ

ನಿಲ್ಲಲು ತಾನು ಲಿಂಗಕ್ಕೆ ಪೂಜಿಸಿದ ಪುಷ್ಪಗಳೆಲ್ಲವೂ ಮಾಯಾಕಿರಾತನ ತಲೆಯ ಮೇಲೆ ಪ್ರಕಾಶಿಸುತ್ತಿದ್ದವು ಅದನ್ನು ಕಂಡು ಅರ್ಜುನನು ಬೆರಗಾಗಿ "ಓಹೋ! ಮೋಸಹೋದೆನು? ನನಗೆ ಪಿತ್ತವು ನೆತ್ತಿಗೆ ಹತ್ತಿ ಭ್ರಾಂತಿಯುಂಟಾಯಿತು. ಇಂತಹ ಹುಚ್ಚು ಕೆಲಸ ಮಾಡಿದೆನು!" ಎಂದು ಪಶ್ಚಾತ್ತಾಪಗೊಂಡನು. ಮುಖವು ವಿವರ್ಣವಾಯಿತು. ಶರೀರವೆಲ್ಲಾ ರೋಮಾಂಚದಿಂದ ತುಂಬಿತು. ಮನಸ್ಸಿನ ಧೈರ್ಯವು ಕುಂದಿತು. ಭಯದಿಂದ ಕಣ್ಣೀರು ಸುರಿಯುತ್ತಿದ್ದವು. ಅವನಿಗೆ ಒಂದು ಕಡೆ ಸಂತೋಷ ಮತ್ತೊಂದು ಕಡೆ ದುಃಖ, ಗಾಯದ ಬಾಧೆಯೊಂದು, ಆಯಾಸವೊಂದು, ಮನಸ್ಸಿನ ಕಳವಳದಲ್ಲಿ ಒಂದು ಬಗೆಯ ಧೈರ್ಯ. ಈ ರೀತಿಯಲ್ಲಿ ಮನಸ್ಸು ವಿವಿಧ ಭಾವಗಳಿಂದ ಚಂಚಲಗೊಳ್ಳುತ್ತಿತ್ತು. ಅವನು ಬೆವರಿನ ನೀರಿನಲ್ಲಿ ಮಿಂದು ಪಶ್ಚಾತ್ತಾಪವೆಂಬ ಕೆಸರಿನಲ್ಲಿ ಮುಳುಗಿ, ವ್ಯಸನವೆಂಬ ಧೂಳಿಯಲ್ಲಿ ಹೊರಲಾಡಿ, ಭಯರಸವೆಂಬ ನದಿಯಲ್ಲಿ ಈಜಿಕೊಂಡು ತನ್ನ ವಿಚಾರಬಲದಿಂದ ಒಂದೊಂದನ್ನೇ ಚಿಂತಿಸುತ್ತಾ ಕೊನೆಗೆ ಈ ಕಿರಾತನೇ ಮಾಯಾರೂಪಿಯಾದ ಪರಮೇಶ್ವರನೆಂದು ನಿಶ್ಚಯಿಸಿ, ಅವನಿಗೆ ಸಾಷ್ಟಾಂಗದಂಡಪ್ರಣಾಮ ಮಾಡಿ, "ಎಲೈ ಜಗದೀಶ್ವರನೇ! ಲೋಕಾರಾಧ್ಯನಾದ ನಿನ್ನೊಂದಿಗೆ ಸೆಣಸಿ ಪರಮದ್ರೋಹಿಯಾದ ನನ್ನ ಅಪರಾಧವನ್ನು ಕ್ಷಮಿಸಿ ರಕ್ಷಿಸು" ಎಂದು ಪ್ರಾರ್ಥಿಸಿದನು.

ಬಳಿಕಲಾ ಚಂದ್ರಶೇಖರನು ಅರ್ಜುನನ ಪಶ್ಚಾತ್ತಾಪವನ್ನು ಕಂಡು ಕನಿಕರಗೊಂಡು ಕಿರಾತರೂಪವನ್ನು ಬಿಟ್ಟು ನಿಜಸ್ವರೂಪದಿಂದ ಪ್ರಸನ್ನನಾದನು. ಸದ್ಯೋಜಾತ, ವಾಮದೇವ, ಅಘೋರ, ಈಶಾನ, ತತ್ಪುರುಷಗಳೆಂಬ ಪಂಚಮುಖಗಳಿಂದಲೂ, ದಶಬಾಹುಗಳಿಂದಲೂ ಒಪ್ಪುವ ಸುಂದರಾಂಗದಲ್ಲಿ ಸಮಸ್ತ ದಿವ್ಯಾಯುಧಗಳೂ ಮೆರೆಯುತ್ತಿದ್ದವು. ಎಡತೊಡೆಯ ಮೇಲೆ ಹಸನ್ಮುಖಿಯಾದ ಪಾರ್ವತಿಯೂ, ಜಡೆಮುಡಿಯಲ್ಲಿ ಗಂಗೆಯೂ, ಚಂದ್ರಕಲೆಯೂ ಒಪ್ಪುತ್ತಿದ್ದವು. ಸನಕನಾರದಾದಿ ಮಹರ್ಷಿಗಳೆಲ್ಲರೂ ಅಲ್ಲಿಗೆ ಬಂದು ಪರಮೇಶ್ವರನ ಪಾದಗಳಿಗೆ ನಮಸ್ಕರಿಸಿ ವೇದರುಕ್ಕುಗಳಿಂದ ಸ್ತುತಿಸುತ್ತಲಿದ್ದರು. "ಆಹಾ! ಅರ್ಜುನನೇ

ಕೃತಾರ್ಥನು ! ಇವನು ಎಷ್ಟರ ಪುಣ್ಯವಮಾಡಿದ್ದನೋ, ಈಶ್ವರನ ಅನು
ಗ್ರಹಕ್ಕೆ ಪಾತ್ರನಾದನು " ಎಂದು ದೇವತೆಗಳು ಪುಷ್ಪವೃಷ್ಟಿಯನ್ನು
ಸುರಿಸಿ ದೇವದುಂದುಭಿಯನ್ನು ಮೊಳಹಿಸಿದರು ಆ ದಿವ್ಯರೂಪವನ್ನು
ಕಂಡು ಅರ್ಜುನನು ಬೆರಗಾಗಿ ಭಕ್ತಿಯಿಂದ ಕೈಮುಗಿದು, " ಸರ್ವೇಶ್ವ
ರನೇ ! ನನ್ನ ಅಪರಾಧವನ್ನು ಕ್ಷಮಿಸು. ನಿನ್ನನ್ನು ಹೊಗಳಲು ನಾನೆಷ್ಟರ
ವನು ! ನಿನ್ನನ್ನೇ ನಂಬಿ ಬಂದಿರುವ ನನ್ನನ್ನು ಉದ್ಧರಿಸಿ ಕಾಪಾಡು "
ಎಂದು ಪಾದಗಳ ಮೇಲೆ ಬಿದ್ದನು. ಆಗಲಾ ಪರಮೇಶ್ವರನು ಪ್ರೀತಿಯಿಂದ
ಅವನ ತಲೆಯನ್ನು ಹಿಡಿದು ಮೇಲಕ್ಕೆತ್ತಿ " ಮಗನೇ ಬಹಳ ಬಳಲಿದೆ !
ತಪಸ್ಸಿನಿಂದ ಮೊದಲೇ ಕೃಶನಾಗಿದ್ದ ನೀನು ನನ್ನೊಂದಿಗೆ ಕಾದಿ ಮತ್ತ
ಷ್ಟು ಗಾಸಿಪಟ್ಟೆ, ಮನಸ್ಸಿನಲ್ಲಿ ನೋಯಬೇಡ. ನಿನ್ನ ಭಕ್ತಿಗೆ ಮೆಚ್ಚಿ
ದೆನು. ನಿನ್ನ ಇಷ್ಟಾರ್ಥಗಳನ್ನು ಸಲ್ಲಿಸುವೆನು. ನೀನು ಪೂರ್ವದಲ್ಲಿ
ನರನೆಂಬ ಮಹರ್ಷಿಯು, ನಾರಾಯಣನ ಅಂಶದಿಂದ ಹುಟ್ಟಿದವನು ನನ್ನ
ಭಕ್ತನಾದ ನಿನಗೆ ಇಗೋ! ಈ ಶಸ್ತ್ರಾಸ್ತ್ರಗಳನ್ನು ಕೊಡುವೆನು" ಎಂದು
ಹೇಳಿ ಪ್ರೀತಿಪೂರ್ವಕವಾಗಿ ಬಿಲ್ಲಂಬುಗಳನ್ನೂ, ಖಡ್ಗವನ್ನೂ ಕೊಟ್ಟು
ಇನ್ನೂ ನಿನಗೆ ಏನೇನು ಬೇಕೋ ಸಂಕೋಚಪಡದೆ ಬೇಡು. ನೀಡುವೆ
ನೆಂದು ಹೇಳಲು ಅರ್ಜುನನು ಆ ದೇವದೇವನಿಗೆ ಕೈಮುಗಿದು ನಮಸ್ಕ
ರಿಸಿ " ಎಲೈ ಭಕ್ತಬಂಧುವೇ ! ನನ್ನಲ್ಲಿ ಕೃಪೆಮಾಡಿದರೆ ಪಾಶುಪತಾಸ್ತ್ರ
ವನ್ನೂ, ಬ್ರಹ್ಮಶಿರೋಸ್ತ್ರವನ್ನೂ ಅನುಗ್ರಹಿಸು. ಇದಕ್ಕೋಸ್ಕರವೇ
ನಾನು ಇಲ್ಲಿಗೆ ಬಂದು ತಪಸ್ಸುಮಾಡಿದೆನು" ಎಂದು ಪ್ರಾರ್ಥಿಸಿದನು.
ಆಗ ಪರಮೇಶ್ವರನು " ಮಗೂ ! ಚಿಂತಿಸಬೇಡ. ನಿನ್ನ ಇಷ್ಟದಂತೆ
ಅಸ್ತ್ರಗಳನ್ನು ಕೊಡುವೆನು. ಆ ಸರಸ್ಸಿನಲ್ಲಿ ಸ್ನಾನಮಾಡಿಕೊಂಡು ಬಾ "
ಎಂದು ಹೇಳಲು ಅರ್ಜುನನು ಕೂಡಲೇ ಹೋಗಿ ಮಿಂದು ಮಡಿಯುಟ್ಟು
ಶುದ್ಧಾಚಮನವನ್ನು ಮಾಡಿಕೊಂಡು ಬಂದು ಈಶ್ವರನ ಪಾದಗಳಿಗೆ
ನಮಸ್ಕರಿಸಿ ನಿಂತನು. ಆಗಲಾ ಮಹಾದೇವನು ಅವನಿಗೆ ಪಾಶುಪತಾಸ್ತ್ರ
ವನ್ನು ಅನುಗ್ರಹಿಸಿ, ಸಾಂಗೋಪಾಂಗವಾಗಿ ಮಂತ್ರೋಚ್ಚಾರಣ, ಉಪ
ಸಂಹಾರ, ಮೋಕ್ಷಕ್ರಮಗಳನ್ನು ಉಪದೇಶಿಸಿ, ಅವರಂತೆಯೇ ಬ್ರಹ್ಮಶಿ
ರೋಸ್ತ್ರವನ್ನೂ ಕೊಟ್ಟು ಇವಕ್ಕೆ ಆಹುತಿ ಬಲವಾಗಿ ಬೇಕಾಗಿದೆ. ಮುಂ

ದಿನ ಘೋರಯುದ್ಧದಲ್ಲಿ ಇದರ ಹಸಿವನ್ನು ಅಡಗಿಸೆಂದು ಹೇಳಿ ಅವನ ಮೈಯನ್ನು ಸವರಿ, "ಅರ್ಜುನಾ! ನೀನು ಚಿಂತಿಸಬೇಡ. ನೀನು ಪುರುಷಾರ್ಥ ಚತುಷ್ಟಯವನ್ನೂ ಪಡೆಯುವೆ ಯುದ್ಧದಲ್ಲಿ ಶತ್ರುಗಳನ್ನು ನಿಗ್ರಹಿಸುವ ಶಕ್ತಿಯನ್ನು ನಿನಗೆ ಕೊಟ್ಟಿರುವೆನು. ನಿಮ್ಮ ಕಷ್ಟಗಳು ಜಾಗ್ರತೆಯಲ್ಲಿ ಪರಿಹರವಾಗುವುವು" ಎಂದು ಹರಸಿ, ಪಾರ್ವತಿಯನ್ನು ನೋಡಿ "ದೇವೀ! ಭಕ್ತನಾದ ಇವನನ್ನು ಕಟಾಕ್ಷಿಸಿ ನೋಡು" ಎಂದನು

ಬಳಿಕ ಅರ್ಜುನನು ಗೌರಿದೇವಿಯನ್ನು ನೋಡಿ ನಮಸ್ಕರಿಸಿ "ತಾಯೀ ತ್ರಿಲೋಕವಮಾತೆ! ನೀನು ಲಕ್ಷ್ಮಿ, ಸರಸ್ವತಿ, ಚಂಡಿ, ದುರ್ಗೆ, ಅಂಬಿಕೆ ಎಂಬ ಹಲವು ಹೆಸರುಗಳಿಂದ ಪ್ರಸಿದ್ಧಳಾಗಿರುವೆ. ನಿನ್ನ ಶಕ್ತಿಯಿಂದಲೇ ಈ ಲೋಕದ ಸೃಷ್ಟಿಸ್ಥಿತಿಲಯಗಳು ನಡೆಯುತ್ತಿರುವುವು. ದೀನನಾದ ನನ್ನನ್ನು ರಕ್ಷಿಸಬೇಕು" ಎಂದು ಪಾದಗಳ ಮೇಲೆ ಬಿದ್ದನು. ಆಗ ಪಾರ್ವತಿಯು "ಪುತ್ರಾ! ಅಂಜಬೇಡ. ನಿನಗೆ ಎದುರಾದ ಶತ್ರುಗಳನ್ನು ಭಂಗಿಸಲಿಕ್ಕೆ ತಕ್ಕ ಅಂಜನಾಸ್ತ್ರವನ್ನು ನಿನಗೆ ಕೊಡುವೆನು. ಒಂದರಿಂದ ಶತಕೋಟಿಯ ತನಕ ಎಷ್ಟು ಮಂದಿ ಶತ್ರುಗಳು ಬಂದರೂ ಅಂತಹ ಶೂರರನ್ನೆಲ್ಲಾ ತಿಂದು ತೇಗುವ ಅಸ್ತ್ರವಿದು. ನಿನ್ನ ಅಪ್ಪಣೆಯನ್ನೇ ನಿರೀಕ್ಷಿಸುತ್ತಿರುವುದು. ಸಮಯವರಿತು ಇದನ್ನು ಉಪಯೋಗಿಸಿಕೋ" ಎಂದು ಅನುಗ್ರಹಿಸಿ ಕೊಟ್ಟಳು. ಬಳಿಕ ಗಣಪತಿಯು ಜಯವೆಂಬ ಅಸ್ತ್ರವನ್ನೂ, ಕುಮಾರ ಸ್ವಾಮಿಯು ಜಯವೆಂಬ ಅಸ್ತ್ರವನ್ನೂ ಕೊಟ್ಟರು. ತರುವಾಯ ಪರಮೇಶ್ವರನು ಅರ್ಜುನನನ್ನು ನೋಡಿ "ಎಲೈ ಧನಂಜಯನೇ ನಿನ್ನ ಇಷ್ಟಸಿದ್ಧಿಯಾಯಿತು. ಇನ್ನು ನೀನು ಅಮರಾವತಿಗೆ ಹೊರಡು. ಅಲ್ಲಿ ಇಂದ್ರಾದಿ ದಿಕ್ಪಾಲಕರು ತಮ್ಮ ತಮ್ಮ ದಿವ್ಯಾಸ್ತ್ರಗಳನ್ನು ನಿನಗೆ ಅನುಗ್ರಹಿಸುವರು. ಮುಂದೆ ನಿನ್ನಿಂದ ಬಹು ಕಾರ್ಯಗಳು ನಡೆಯಬೇಕಾಗಿರುವುವು. ದೇವತೆಗಳಿಗೆ ಶತ್ರುಗಳಾದ ಹಲವು ರಾಕ್ಷಸರು ಅವರನ್ನು ಬಾಧಿಸುತ್ತಿರುವರು. ಅವರನ್ನು ಸಂಹರಿಸಿ ನಿಷ್ಕಂಟಕವಾಗಿ ಮಾಡು. ನಿಮ್ಮ ವನವಾಸದ ಅವಧಿಯು ತೀರಿದ ಬಳಿಕ ಶತ್ರುಗಳನ್ನು ಕೊಂದು ಸುಖಪಡುವಿರಿ" ಎಂದು ಹರಸಿ, ಭೂತಗಣಸಹಿತವಾಗಿ ಅಂತ

ರ್ಧಾನನಾದನು. ಬಳಿಕ ಅರ್ಜುನನು ಪರಮೇಶ್ವರನು ಪ್ರಸನ್ನನಾಗಿ ಬಂದಾಗ ಆಮುಷ್ಮಿಕ ಸುಖವನ್ನು ಕೋರದೆ ತುಚ್ಛಭೋಗಗಳಿಗೋಸ್ಕರ ಶಸ್ತ್ರಗಳನ್ನು ಬಯಸಿ ಮರುಳಾದೆನಲ್ಲಾ! ನನ್ನಂತಹ ಹೆಡ್ಡರಿರುವರೆ? ನನ್ನ ಪೂರ್ವಾರ್ಜಿತ ಕರ್ಮದಂತೆ ಬುದ್ಧಿಯುಂಟಾಯಿತು. ಮಾಡತಕ್ಕುದೇನು? ಅಣ್ಣಯ್ಯನ ಆಜ್ಞೆಯಂತೆ ನಡೆಸಿದೆನು. ಭಗವಂತನ ಸಂಕಲ್ಪದಂತೆ ಆಗಲಿ. ಆತನನ್ನೇ ಶರಣು ಹೊಕ್ಕಿರುವ ನಾನು ಏಕೆ ಚಿಂತಿಸಬೇಕು ಎಂದು ಮನಸ್ಸಿನಲ್ಲಿ ಸಮಾಧಾನ ತಂದುಕೊಂಡನು.

---

## ಆರನೆಯ ಸಂಧಿ.

---

ಸೂಚನೆ:—ಅರ್ಜುನನು ಪಾಶುಪತಾದ್ಯಸ್ತ್ರಗಳನ್ನು ಪಡೆದ ಮೇಲೆ ಇಂದ್ರನ ಅಮರಾವತಿಗೆ ಬಂದು ಕೆಲವು ಕಾಲವಿದ್ದನು. ಆ ವೇಳೆಯಲ್ಲಿ ಊರ್ವಶಿಯು ಆತನನ್ನು ಮೋಹಿಸಿ ಬಂದು ತಿರಸ್ಕೃತಳಾಗಿ, ನೀನು ಶಿಖಂಡಿಯಾಗೆಂದು ಶಪಿಸಲು, ಅಜ್ಞಾತವಾಸ ಕಾಲದಲ್ಲಿ ಅದನ್ನು ಧರಿಸಬಹುದೆಂದು ಇಂದ್ರನು ಅನುಗ್ರಹಿಸಿದನು.

ಶಂಕರನು ಅದೃಶ್ಯನಾದ ಮೇಲೆ ಅರ್ಜುನನು ತನಗೆ ಮುಂದಿನ ಕರ್ತವ್ಯವೇನೆಂದು ಯೋಚಿಸುತ್ತಾ ಕುಳಿತಿದ್ದನು. ಆ ವೇಳೆಯಲ್ಲಿ ಜಲಾಧಿಪತಿಯಾದ ವರುಣನು ಪಶ್ಚಿಮ ದಿಗ್ಭಾಗದಿಂದ ಸಪರಿವಾರನಾಗಿ ಬಂದನು. ಅವನಂತೆಯೇ ಯಕ್ಷರಾಕ್ಷಸಗಣಸಮೇತನಾಗಿ ಧನಾಧ್ಯಕ್ಷನಾದ ಕುಬೇರನೂ, ಪಿತೃಗಣದಿಂದಲೂ, ಧರ್ಮಾಧ್ಯಕ್ಷರಿಂದಲೂ ಕೂಡಿ ಯಮನೂ, ಅಗ್ನಿಯೂ, ನಿರುರುತಿಯೂ, ವಾಯುವೂ, ಇಂದ್ರಾತ್ಮಜನಾದ ಅರ್ಜುನನನ್ನು ನೋಡಬೇಕೆಂದು ಬಂದರು. ಬಳಿಕ ತ್ರಿಲೋಕಾಧಿಪತಿಯಾದ ಇಂದ್ರನು ದೇವಗಣ ಸಹಿತನಾಗಿ ಸಮಸ್ತ ಬಿರುದುಗಳೊಂದಿಗೆ ಆಕಾಶಮಾರ್ಗದಿಂದಿಳಿದು ಇಂದ್ರಕೀಲ ಪರ್ವತದಲ್ಲಿ ಅರ್ಜುನನು ತಪಸ್ಸಿಗೆ ಕುಳಿತಿದ್ದ ಸ್ಥಳಕ್ಕೆ ಬಂದನು. ಕುಂತೀಪುತ್ರನು ತನ್ನನ್ನು ನೋಡಲಿಕ್ಕೆ ಬಂದ ದಿಕ್ಪಾಲಕರನ್ನು ಎದುರುಗೊಂಡು ಸತ್ಕರಿಸಿ, ತಮ್ಮ ಕರುಣಾಕಟಾಕ್ಷದಿಂದ ಪರಮೇಶ್ವರನ ಅನುಗ್ರಹವುಂಟಾಯಿತೆಂದು, ಪಾಶುಪತಾದ್ಯಸ್ತ್ರಲಾಭದ ವಿಷಯವನ್ನು ವಿವರಿಸಿ ಹೇಳಿದನು. ಅದನ್ನು ಕೇಳಿ ಅವರು

" ಎಲೈ ವೀರಾಗ್ರೇಸರನೇ ! ಅಪ್ರತಿಮಬಲನಾದ ನಿನಗೆ ಈಶ್ವರನು ಕರು ಣಿಸಿದುದು ಏನು ಅತಿಶಯ ? ನೀನು ಮಾಡಿದ ಘೋರ ತಪಸ್ಸು ವ್ಯರ್ಥ ವಾಗಲಿಲ್ಲ. ನಿನ್ನ ಶ್ರಮವು ಸಫಲವಾದುದು ನಮಗೆಲ್ಲಾ ಸಂತೋಷಕರ ವಾಗಿದೆ. ಆ ಮಹಾಪಾಶುಪತಾಸ್ತ್ರಕ್ಕೆ ಬಳುವಳಿಯಾಗಿ ನಮ್ಮ ಅಸ್ತ್ರಗ ಳನ್ನು ಪ್ರೀತಿಯಿಂದ ಕೊಡುವೆವು ಇವುಗಳನ್ನೂ ಪರಿಗ್ರಹಿಸು " ಎಂದು ಹೇಳಿ ದಿವ್ಯಾಸ್ತ್ರಗಳನ್ನು ಕೊಟ್ಟರು. ಇಂದ್ರನು ಐಂದ್ರಾಸ್ತ್ರ ವನ್ನೂ, ಯಮನು ಯಾಮ್ಯವೆಂಬ ಅಸ್ತ್ರವನ್ನೂ, ಅಗ್ನಿಯು ಆಗ್ನೇಯಾ ಸ್ತ್ರವನ್ನೂ, ವರುಣನು ವಾರುಣಾಸ್ತ್ರವನ್ನೂ, ಮಾರುತನು ವಾಯುವ್ಯಾ ಸ್ತ್ರವನ್ನೂ, ನಿರುರುತಿಯು ನೈರುತ್ಯಾಸ್ತ್ರವನ್ನೂ, ಕುಬೇರನು ಕೌಬೇ ರಾಸ್ತ್ರವನ್ನೂ ಕೊಟ್ಟರು.

ಬಳಿಕ ದೇವೇಂದ್ರನು ಅರ್ಜುನನನ್ನು ನೋಡಿ " ಮಗುವೇ, ಉಗ್ರತಪಸ್ಸಿನಿಂದ ಮೃತ್ಯುಂಜಯನನ್ನು ಮೆಚ್ಚಿಸಿದ ನಿನಗೆ ಆ ಮಹಾದೇ ವನೇ ಪ್ರಸನ್ನನಾಗಿರುವಾಗ ಇಂತಹ ಅಸ್ತ್ರಲಾಭಗಳು ಏನು ಹೆಚ್ಚಿನವೆ! ಅದಂತಿರಲಿ. ನೀನು ಬಹು ಕ್ಲೇಶವನ್ನು ಸಹಿಸಿ ತಪಸ್ಸು ಮಾಡಿ ಬಹು ಬಳಲಿರುವೆ. ನಮ್ಮ ಅಮರಾವತಿಗೆ ಬಂದು ಕೆಲವು ದಿನಗಳಿದ್ದು ದೇಹ ಪೋಷಣೆ ಮಾಡಿಕೋ. ಮಾತಲಿಯೊಂದಿಗೆ ರಥವನ್ನು ಕಳುಹುವೆನು. ನಮ್ಮ ಸ್ವರ್ಗದ ಭೋಗಗಳನ್ನೂ, ಅಲ್ಲಿ ನಡೆಯುವ ವಿಚಿತ್ರಗಳನ್ನೂ ನೋಡಬಹುದು " ಎಂದನು. ಅದಕ್ಕೆ ಅರ್ಜುನನು " ದೇವಾ ! ತಮ್ಮ ಅಪ್ಪಣೆಯಂತೆ ನಡೆಯಲು ಸಿದ್ಧನಾಗಿರುವೆನು. ನೂರಾರು ಯಜ್ಞ ಮಾ ಡಿದ ಹೊರತು ಪ್ರವೇಶಿಸಲಿಕ್ಕೆ ಸಾಧ್ಯವಲ್ಲದ ಸ್ವರ್ಗಲೋಕಕ್ಕೆ ಸುಮ್ಮನೆ ಬಾರೆಂದು ಕರೆದರೆ ಎಂತಹ ಹೆಡ್ಡನಾದರೂ ಒಲ್ಲೆನೆಂದು ತಿರಸ್ಕರಿಸುವನೆ? ಇಹಲೋಕದ ಸುಖದೊಂದಿಗೆ ಆಮುಷ್ಮಿಕ ಸುಖವೂ ಸಿಕ್ಕುವುದು ನನ್ನ ಪುಣ್ಯವಲ್ಲವೇ ? ನಾನೇ ಧನ್ಯನು " ಎಂದು ಇಂದ್ರನ ಪಾದಗಳಿಗೆ ವಂದಿ ಸಿದನು. ಬಳಿಕ ಇಂದ್ರಾದಿ ದಿಕ್ಪಾಲಕರು ಅರ್ಜುನನನ್ನು ಹರಸಿ ತಿರೋಹಿತರಾದರು.

ಸ್ವಲ್ಪ ಹೊತ್ತಿನ ಮೇಲೆ ರತ್ನಕಾಂತಿಯಿಂದ ಬೆಳಗುತ್ತಾ ಉನ್ನತ ವಾದ ಧ್ವಜದಿಂದೊಪ್ಪುವ ಇಂದ್ರನ ಸುವರ್ಣ ರಥವನ್ನು ತೆಗೆದುಕೊಂಡು

ಮಾತಲಿಯು ಅಲ್ಲಿಗೆ ಬಂದು ಅರ್ಜುನನಿಗೆ ನಮಸ್ಕರಿಸಿ “ಜೀಯಾ! ನೀನೇ ವಿಜಯನೋ! ನಮ್ಮೊಡೆಯನು ನಿನ್ನನ್ನು ಕರೆದುತರುವುದೆಂದು ತನ್ನ ರಥವನ್ನು ಕಳುಹಿರುವನು. ದಯಮಾಡಿ ಬರಬೇಕು. ನೀನೇ ಪುಣ್ಯವಂತನು” ಎಂದು ಹೊಗಳಿದನು. ಅರ್ಜುನನು ಬಹು ಸಂತೋಷದಿಂದ ದೇವೇಂದ್ರನ ಉಪಕಾರವನ್ನು ಸ್ಮರಿಸಿ, ಆ ರಥವನ್ನೇರಿ ಮಾತಲಿಯ ಸಂಗಡ ಹೊರಟನು. ಅವರು ಹೊರಟು ಬರುತ್ತಿದ್ದಾಗ ಮಾರ್ಗದಲ್ಲಿ ಅರ್ಜುನನು ಚತುರ್ದಶಲೋಕಗಳ ವಿಸ್ತಾರ ವಿವರಣೆಯನ್ನು ಮಾತಲಿಯಿಂದ ತಿಳಿದುಕೊಂಡು, ಬ್ರಹ್ಮಲೋಕ, ವಿಷ್ಣುಲೋಕ, ಅಷ್ಟದಿಕ್ಪಾಲರ ಪಟ್ಟಣಗಳು, ಸೂರ್ಯಾದಿ ನವಗ್ರಹಗಳ ಸ್ಥಾನಗಳು, ಪುಣ್ಯಮಾಡಿದವರು ಸ್ವರ್ಗಲೋಕಕ್ಕೆ ಹೋಗುವ ಕ್ರಮಗಳು ಮುಂತಾದುವುಗಳನ್ನೆಲ್ಲಾ ತಿಳಿದುಕೊಂಡು ಬಂದನು ಆ ಸಾರಥಿಯು ಅರ್ಜುನನಿಗೆ ಸ್ವರ್ಗಲೋಕದಲ್ಲಿರುವ ಭರತ, ಹರಿಶ್ಚಂದ್ರ, ನಳ, ಪುರುಕುತ್ಸ, ಪುರೂರವ, ಮರುತ್ತ, ಹೈಹಯ, ದುಂದುಮಾರ, ನಹುಷ, ದಿಲೀಪ, ದಶರಥ, ರಘು, ಶಂತನು ಮುಂತಾದ ರಾಜರುಗಳನ್ನು ತೋರಿಸಿ, “ಎಲೈ ರಾಜನೇ! ಇವರೆಲ್ಲರೂ ಹಲವು ಯಾಗಗಳನ್ನು ಮಾಡಿ ಅವುಗಳ ಫಲದಿಂದ ಪುಣ್ಯಲೋಕಗಳನ್ನು ಪಡೆದಿರುವರು. ಅಗೋ ನೋಡು. ಅಮರಾವತಿಯು ಕಾಣುತ್ತಿದೆ. ಅದೇ ಚತುರ್ದಂತಗಳುಳ್ಳ ಐರಾವತವೆಂಬ ಇಂದ್ರನ ಪಟ್ಟದಾನೆಯು ಅದು ಉಚ್ಚೈಃಶ್ರವಸ್ಸೆಂಬ ಕುದುರೆಯು. ಅಲ್ಲಿ ಕಾಣಬರುತ್ತಿರುವುದೇ ನಂದನವೆಂಬ ಉದ್ಯಾನವನವು. ಅದೋ! ದೂರದಲ್ಲಿ ಕಾಮಧೇನುವಿದೆ ಅದರ ಹತ್ತಿರ ಕಲ್ಪವೃಕ್ಷವೂ ಚಿಂತಾಮಣಿಯೂ ಕಾಣುತ್ತಲಿವೆ” ಎಂದು ಒಂದೊಂದನ್ನಾಗಿ ತೋರಿಸಿ ಹೇಳುತ್ತಾ ಬಂದನು. ಬಳಿಕ ಅವರು ಸ್ವರ್ಗಾಧಿಪತಿಯ ವೈಜಯಂತವೆಂಬ ಉಪ್ಪರಿಗೆಯ ಬಳಿಗೆ ಬಂದು ಅಲ್ಲಿ ರಥದಿಂದಿಳಿದರು. ಅರ್ಜುನನು ಅರಮನೆಯೊಳಕ್ಕೆ ಪ್ರವೇಶಿಸಲು, ಇಂದ್ರನು ಆದರಪೂರ್ವಕವಾಗಿ ಆ ಮಹಾವೀರನನ್ನು ಬರಮಾಡಿಕೊಂಡು, ಆಲಂಗಿಸಿ, ಕರದೊಯ್ದು ತನ್ನ ಸಿಂಹಪೀಠದ ಅರ್ಧಾಸನದಲ್ಲಿ ಕುಳ್ಳಿರಿಸಿಕೊಂಡನು ಆಹಾ! ನೂರು ಪಶುಗಳನ್ನು ಕೊಂದು ಯಾಗಮಾಡಿದ ಮಹಾತ್ಮನಿಗೆ ಇಂದ್ರನು ತನ್ನ ಗದ್ದುಗೆಯನ್ನು ಮಾರಿರು

ವನು. ಈ ಅರ್ಜುನನು ಒಂದು ಪಶುವನ್ನೂ ಕೊಲ್ಲದೆ ಸುಮ್ಮನೆ ಇಂದ್ರ ನ ಸಿಂಹಾಸನವನ್ನೇರಿದನಲ್ಲಾ! ಏನು ಆಶ್ಚರ್ಯ! ಲೋಕತ್ರಯದಲ್ಲಿಯೂ ಈ ಪಾರ್ಥನಿಗೆ ಎಣೆಯಾದ ಪುಣ್ಯವಂತರಿಲ್ಲವೆಂದು ದೇವತೆಗಳು ಹೊಗಳಿದರು ಇಂದ್ರಪುತ್ರನು ಅಪೂರ್ವವಾಗಿ ಭೂಲೋಕದಿಂದ ಬಂದಿರುವನೆಂದು ಕೇಳಿ, ಆತನನ್ನು ನೋಡುವುದಕ್ಕಾಗಿ ದೇವತೆಗಳ ಹಿಂಡು ತಂಡ ತಂಡವಾಗಿ ಬರುತ್ತಲಿದ್ದಿತು. ಊರ್ವಶಿ, ಮೇನಕೆ, ರಂಭೆ, ತಿಲೋತ್ತಮೆ ಮೊದಲಾದ ಅಪ್ಸರ ಸ್ತ್ರೀಯರೆಲ್ಲರೂ ಆ ಮಹಾಪುರುಷನನ್ನು ನೋಡಬೇಕೆಂದು ಕುತೂಹಲದಿಂದ ಸರ್ವಾಭರಣಾಲಂಕೃತರಾಗಿ ಹೊರಟು ಬಂದರು. ತುಂಬುರು ನಾರದಾದಿ ಋಷಿಗಳೂ, ಚಿತ್ರರಥಾದಿ ಗಂಧರ್ವರೂ, ಆಶ್ವಿನೇಯಾದಿ ದೇವವೈದ್ಯರೂ, ಆದಿತ್ಯಾದಿ ದೇವಗಣಗಳೂ ಬಂದು ನೆರೆದುವು. ಅಂದಿನ ಒಡ್ಡೋಲಗವು ಹಿಂದೆ ಎಂದೂ ಕಾಣದೆ ಇದ್ದಷ್ಟು ಸಂಭ್ರಮದಿಂದ ತುಂಬಿತ್ತು. ನರ್ತನ, ಗಾನ, ವಾದ್ಯ ಮುಂತಾದ ವಿನೋದಗಳು ಸ್ವಲ್ಪ ಹೊತ್ತು ನಡೆದುವು. ಇಂತಹ ಮಹಾಸಭೆಯಲ್ಲಿ ಅರ್ಜುನನು ವಿಷಯಭ್ರಾಂತಿಯಿಲ್ಲದೆ ಧೀರನಾಗಿ ಕುಳಿತಿದ್ದರೂ, ಅಲ್ಲಿ ಕುಳಿತಿದ್ದ ತಮ್ಮ ವಂಶಕ್ಕೆ ಮೂಲಕಾರಣಳಾದ ಊರ್ವಶಿಯನ್ನು ಎವೆಯಿಕ್ಕದೆ ನೋಡುತ್ತಿದ್ದನು ಬಳಿಕ ಸಭೆಯನ್ನು ತೀರಿಸಿ, ಅವರವರ ನೆಲೆಗಳಿಗೆ ಹೊರಡಲು ಇಂದ್ರನ ಅನುಜ್ಞೆಯಾಯಿತು. ದೇವತೆಗಳೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋಗಿ ಸೇರಿದರು.

ತರುವಾಯ ಇಂದ್ರನು ಅರ್ಜುನನೊಂದಿಗೆ ಕುಳಿತು ಭೋಜನ ಮಾಡಿದ ಮೇಲೆ ಪ್ರತ್ಯೇಕವಾದ ಒಂದು ಅರಮನೆಯಲ್ಲಿ ಅವನು ಮಲಗಲಿಕ್ಕೆ ಸ್ಥಳವನ್ನು ಏರ್ಪಡಿಸಿಕೊಟ್ಟು, ಚಿತ್ರಸೇನನೆಂಬ ಗಂಧರ್ವನನ್ನು ಕರೆದು, ಸಭೆಯಲ್ಲಿ ನನ್ನ ಮಗ ಪಾರ್ಥನು ಊರ್ವಶಿಯನ್ನು ಮೋಹಿಸಿದಂತೆ ಕಾಣುವುದು. ಅವಳನ್ನಾತನ ಬಳಿಗೆ ಕಳುಹೆಂದು ನಿಯಮಿಸಿದನು ಅವನು ದೇವರಾಜನ ಆಜ್ಞೆಯಂತೆ ಊರ್ವಶಿಯು ಅಂತಃಪುರಕ್ಕೆ ಹೋಗಿ "ಎಲೌ ದೇವವೇಶ್ಯೆಯೇ, ನಿನ್ನನ್ನು ನನ್ನ ಮಗನಾದ ಅರ್ಜುನನು ಕಾಮಿಸಿರುವುದರಿಂದ ನೀನು ಅವನ ಮನೋಭಿಪ್ರಾಯದಂತೆ ನಡೆದುಕೊ'' ಎಂದು ಅಪ್ಪಣೆ ಕೊಟ್ಟಿರುವನು. ಉತ್ತಮನಾಯಕನಾದ ಆತನ ಇಷ್ಟವನ್ನು

ಸಲ್ಲಿಸಿ ಬಾರೆಂದು ಹೇಳಲು, ಅವಳು ಬಹುಸಂತೋಷದಿಂದ ಶೃಂಗರಿಸಿ ಕೊಂಡು ತನ್ನ ಸಂಗಡ ಹಲವರು ಸಖಿಯರನ್ನು ಕರೆದುಕೊಂಡು ಅರ್ಜು ನನು ಇಳದಿದ್ದ ಅರಮನೆಗೆ ಬಂದಳು. ಆಕೆಯನ್ನು ನೋಡಿದ ಕೂಡಲೇ ಅರ್ಜುನನು ದಿಗ್ಗನೆ ಎದ್ದು ಬಂದು ವಂದಿಸಿ, ಒಳಕ್ಕೆ ಕರೆದುಕೊಂಡು ಹೋಗಿ, " ತಾಯಿಾ ! ಇಲ್ಲಿ ದಯಮಾಡಿ ಕುಳ್ಳಿರಬೇಕು. ನಿಮ್ಮ ಬರು ವಿಕೆಯಿಂದ ಧನ್ಯನಾದೆನು. ಬಂದ ಕಾರ್ಯವೇನೋ ಅಪ್ಪಣೆ ಕೊಡಿಸ ಬೇಕು. ನಿಮಗೆ ನಾನು ಮಗನು, ಸಂಕೋಚ ಪಡದೆ ಹೇಳರಿ " ಎಂದು ವಿನಯದಿಂದ ಕೇಳಕೊಂಡನು. ಅದನ್ನು ಕಂಡು ಊರ್ವಶಿಯು ಬೆರಗಾಗಿ " ಏನಿದು ! ಇಂದ್ರನು ಹೇಳಕಳುಹಿದ ವಿಷಯವೇನು ? ಈತನ ಮ ನೋಭಾವವೇನು ? ಪರಸ್ಪರ ವಿರೋಧವಾಗಿ ಕಾಣಬರುತ್ತಿವೆಯಲ್ಲಾ ! ಹಾಳಾದ ಬ್ರಹ್ಮನು ಇವನಿಗೆ ಇಷ್ಟು ಲೋಕೋತ್ತರವಾದ ಸೌಂದರ್ಯ ವನ್ನು ಕಲ್ಪಿಸಿ, ಇವನ ಮನಸ್ಸಿನಲ್ಲಿ ವಿರಕ್ತಿಯನ್ನೇತಕ್ಕೆ ತುಂಬಿದನೋ ಕಾಣೆನು. ಇವನೇನು ಹುಚ್ಚನೋ, ಅಥವಾ ನಪುಂಸಕನೋ, ಜಡನೋ, ನೀಚನೋ, ಮನೋವಿಕಾರದಿಂದ ಹೀಗಾಗಿರುವನೋ ತಿಳಿಯದು. ಇ ದನ್ನು ವಿಚಾರಿಸದೆ ಇಲ್ಲಿಗೆ ಬಂದುದು ಹೆಡ್ಡತನವಾಯಿತು. ಆಗಲಿ. ಇವನ ಅಭಿಪ್ರಾಯವು ಮಾತಿನಿಂದ ಗೊತ್ತಾಗುವುದು " ಎಂದು ಯೋಚಿಸಿ, ಅವನನ್ನು ಕುರಿತು ಇಂತೆಂದಳು.

ಊರ್ವ:—ಅರ್ಜುನಾ ! ದೇವನಾಯಕನಾದ ಇಂದ್ರನು ಚಿತ್ರಸೇನನ ಮೂಲಕ ನನ್ನನ್ನು ಇಲ್ಲಿಗೆ ಹೋಗಹೇಳ ಅಪ್ಪಣೆ ಕೊಟ್ಟು ಕಳು ಹಿದ ಕಾರಣ ಬಂದೆನು. ನನ್ನ ಮನಸ್ಸು ನಿನ್ನಲ್ಲಿ ಮೋಹಗೊಂಡು ದರಿಂದ ರಾಜಾಜ್ಞೆಯ ಜತೆಗೆ ನನ್ನ ಬಲವೂ ಸೇರಿತು. ಅಪ್ಸರ ಸ್ತ್ರೀಯರ ಧರ್ಮವನ್ನು ನೀನರಿಯೆಯಾ ? ನಾನು ಯಾವುಳೆಂಬು ದನ್ನು ಚಿಂತಿಸಿ ನೋಡು.

ಅರ್ಜು:—(ಕಿವಿ ಮುಚ್ಚಿಕೊಂಡು, ಶಿವಶಿವಾ) ಒಳ್ಳೆಯ ಮಾತನ್ನಾಡಿ ದಿರಿ! ತಪಸ್ವಿಯಾದ ನನಗೆ ಕಾಮಬಾಧೆಗಳೆತ್ತಣಿಂದ ಬಂದುವು ? ದೇವೇಂದ್ರನ ಆಜ್ಞೆಯೂ, ಚಿತ್ರಸೇನನ ನುಡಿಗಳೂ ಹಾಗಿರಲಿ. ನನ್ನ ವಂಶಾಭಿವೃದ್ಧಿಯನ್ನು ನಾನು ಚಿಂತಿಸಬೇಡವೆ ? ನೀವು

ನಮ್ಮ ವಂಶೋದ್ಭವಕ್ಕೆ ಕಾರಣರಾದ ಮೂಲಕರ್ತೃಯುಗಲ್ಲವೆ? (ನಮಸ್ಕಾರ ಮಾಡಿ) ಅಮ್ಮಾ! ನೀನು ಪೂರ್ವದಲ್ಲಿ ನಮ್ಮ ವಂಶ ಕರ್ತನಾದ ಪುರೂರವನಿಗೆ ಪತ್ನಿಯಾಗಿದ್ದೆ ನಿನ್ನ ಬಸಿರಿನಲ್ಲಿ ಆಯುವೆಂಬ ಪುತ್ರನುದಿಸಿದನು. ಆತನಿಂದ ನಹುಷನು ಹುಟ್ಟಿದನು ಈ ರಾಜಪರಂಪರೆಯಲ್ಲಿಯೇ ಪಾಂಡವರಾದ ನಾವೂ ಜನಿಸಿದೆವು. ನಮ್ಮ ಕುಲಕ್ಕೇನೆ ತಾಯಿಯಾದ ನೀವು ವಂದ್ಯರಾಗಿ ಇಂತಹ ಮಾತನಾಡಬಹುದೆ?

ಊರ್ವ:—ಎಲೈ ಪಾರ್ಥನೇ! ಸೂಳೆಯರ ಮನೆಯಲ್ಲಿ ವೇದಾರ್ಥ ವಿಚಾರವೆ? ಬಲು ಚೆನ್ನಾಯಿತು ಬಣ ಭರತವರುಷದವರ ಬದರಿಕೆಗಳು ನಮ್ಮ ಈ ದೇವಲೋಕದ ನಾಗರಿಕತೆಗೆ ಸರಿಹೋಗುವುವೆ? ಕುಬೇರನ ಚೈತ್ರರಥೋದ್ಯಾನದೊಂದಿಗೆ ಸಣಬಿನ ಹೊಲವನ್ನು ಹೋಲಿಸುವೆಯಾ? ನಿಮ್ಮಪ್ಪನೂ, ಅವರಜ್ಜನೂ, ಅವನ ತಾತ ಮುತ್ತಾತಂದಿರೂ, ಅವನ ಭಾವನೂ, ಮೈದುನನೂ, ಯಾರೇ ಇಲ್ಲಿಗೆ ಬರಲಿ, ಇವರು ಜ್ಞಾತಿಗಳು, ಇವರು ಬಂಧುಗಳು, ಇದು ವಾವೆ, ಇದು ವರಸೆ ಎಂಬ ಭೇದವೇ ನಮ್ಮ ಅಪ್ಸರ ಸ್ತ್ರೀಯರಿಗೆ ಸಲ್ಲದು. ಕೈಯಿಂದ ಶತ್ರುಗಳನ್ನು ಕಡಿದು ವೀರಸ್ವರ್ಗವನ್ನು ಪಡೆದವರಿಗೂ, ಯಜ್ಞಾದಿಗಳನ್ನು ಮಾಡಿ ಪುಣ್ಯಸಂಪಾದಿಸಿದವರಿಗೂ ನಾನೊಬ್ಬಳೇ ರಾಣಿಯೆಂದು ತಿಳಿ. ಮುಚ್ಚುಮರೆಯ ಮಾತುಗಳಿರಲಿ. ಅಂತವುಗಳನ್ನು ನನ್ನಲ್ಲಿ ಆಡಬೇಡ, ಕಟ್ಟಿಡು. ಸ್ತ್ರೀಯರ ಮನೋಭಿಪ್ರಾಯವನ್ನರಿಯದವನು ಇಂದ್ರನಾಗಲಿ, ಚಂದ್ರನಾಗಲಿ ಕುರಿಯೇ ಸರಿ. ಛೀ ಖೂಳಾ! ನಿನಗೆ ಬುದ್ಧಿಯು ಸ್ವಲ್ಪವಾದರೂ ಇಲ್ಲವೋ! (ಎಂದು ಬಿರುಗಣ್ಣಿನಿಂದ ನೋಡಿದಳು)

ಅರ್ಜು:—(ಗಡಗಡನೆ ನಡುಗುತ್ತಾ ಪುನಃ ನಮಸ್ಕರಿಸಿ) ತಾಯಿ! ಕೋಪಿಸಬೇಡಿರಿ. ನಮ್ಮದು ಮನುಷ್ಯ ಶರೀರವು ಜೀವವಿರುವ ಪರ್ಯಂತವೂ ಸದ್ಧರ್ಮವನ್ನು ಕಾಪಾಡಿಕೊಂಡು ಬರಬೇಕು ವ್ಯಭಿಚಾರವು ಗೃಹಸ್ಥನಿಗೆ ಸಲ್ಲದು. ಮನುಷ್ಯ ಲೋಕದಲ್ಲಿ ಧರ್ಮ ಸಂಪಾದನೆ ಮಾಡಿ ಸ್ವರ್ಗಕ್ಕೆ ಬಂದ ಮೇಲೆ ದೇವಲೋಕದ ಧ

ರ್ಮವನ್ನಾಚರಿಸತಕ್ಕುದು. ದೇವತಾ ದೇಹಕ್ಕೂ ಮಾನವ ದೇಹ ಕ್ಕೂ ಬಹು ವ್ಯತ್ಯಾಸವಿರುವುದು

ಊರ್ವ:—(ಗಹಗಹಿಸಿ ನಕ್ಕು) ಅಹುದಹುದು. ನೀವು ಶಾಸ್ತ್ರಮರ್ಯಾದೆ ಯನ್ನು ಚೆನ್ನಾಗಿ ಬಲ್ಲಿರಿ. ಲೋಕದಲ್ಲಿ ವಿಧ್ಯುಕ್ತರೀತಿಯಲ್ಲಿ ನಡೆಯುತಕ್ಕವರು ನೀವು ಮಾತ್ರವೇ. ನಿಮ್ಮ ನಡತೆ ಮೂರು ಲೋ ಕಗಳಿಗೂ ತಿಳಿದುದಾಗಿಯೇ ಇರುವುದು. ಒಬ್ಬ ಹೆಂಗಸನ್ನು ಐವರು ಗಂಡಸರು ಕೂಡಿ ಆಳುತ್ತಿರುವ ನಿಸ್ಪೃಹಾಚಾರ್ಯರು ನೀವೇ ಅಲ್ಲವೆ? ಭಲಾ! ಒಳ್ಳೇ ಸಂಪನ್ನರು!

ಅರ್ಜು:—(ವಿನಯದಿಂದ) ತಾಯಿಯು ಅಪ್ಪಣೆಯುಂತೆ ನಾವು ಐದು ಜನ ರೂ ದ್ರೌಪದಿಯನ್ನು ಮದುವೆಯಾದುದು ನಿಜ. ಇದರಲ್ಲಿ ಏನು ತಪ್ಪು! ಮಾತೃವಾಕ್ಯವನ್ನುಲ್ಲಂಘಿಸಬಾರದಷ್ಟೆ! ದೇಹಸುಖ ಕ್ಕೋಸ್ಕರ ಧರ್ಮಭ್ರಷ್ಟನಾಗಿ ನರಕಕ್ಕೆ ಇಳಿಯತಕ್ಕವನ ಲ್ಲವೆಂದು ತಿಳಿ.

ಊರ್ವ:—(ಹಾಸ್ಯದಿಂದ) ಒಹೋ! ತಾಯಿಯು ಅಪ್ಪಣೆಯಿಂದ ಅಯ್ವ ರೂ ಒಬ್ಬ ಹೆಂಗಸನ್ನು ಕೂಡಿದಿರಾ! ಸುರಪತಿಯಾದ ಇಂದ್ರನು ನಿಮ್ಮ ತಂದೆಯಲ್ಲವೆ? ಅಂತಹ ತಂದೆಯು ಆಜ್ಞೆಯನ್ನು ನೀನು ಉಲ್ಲಂಘಿಸಬಹುದೊ? ಚೆನ್ನಾಯಿತು! ನಿಮ್ಮಪ್ಪನು ಹೇಳಿಕಳು ಹಿದ ಕಾರಣ ನಾನು ಬಂದೆನು. ಕಾಮಬಾಧಾಪೀಡಿತಳಾದ ನನ್ನ ವ್ಯಥೆಯನ್ನು ಪರಿಹರಿಸುವುದು ನಿನ್ನ ಧರ್ಮವೆಂದು ತಿಳಿ. ಹೆಚ್ಚಾ ಗಿ ಮಾತನಾಡಿದರೆ ದೇವತಾ ಸ್ತ್ರೀಯರು ಹರಟೆಗಾತಿಯರೆಂಬೆ ಯೇನೋ! ನಾನು ನಿನ್ನಲ್ಲಿ ಒಲಿದು ಬಂದೆನು. ಕೈಬಿಡಬೇಡ. ತ್ರಿಲೋಕಾಧಿಪತಿಯ ಆಜ್ಞೆಯೂ ನೆರವೇರಲಿ. ನನ್ನ ಬಾಧೆಯೂ ನಿವಾರಣೆಯಾಗಲಿ ತಿರಸ್ಕರಿಸಬೇಡ.

ಅರ್ಜು:—ತಾಯಿ? ಸುಮ್ಮನೆ ನನ್ನನ್ನು ಕಾಡಬೇಡಿರಿ. ನಿಮ್ಮ ಸಂಗಡ ಎದುರುವಾದಿಸಲಾರೆನು. ಮನಸ್ಸಿಗೆ ಧೈರ್ಯವೆಂಬ ಕವಚವನ್ನು ಧರಿಸಿ ನಿಂತರೆ ಮದನನ ಪುಷ್ಪಬಾಣಗಳು ನೆಡುವುದುಂಟೆ? ಅಜ್ಞೆ

ಯು ಮಕ್ಕಳನ್ನು ನೋಡಲಿಕ್ಕೆ ಬಂದರೆ ಜನರು ಪ್ರಕಾರಾಂತರ ವಾಗಿ ಭಾವಿಸುವರೆ? ನೀವು ಮನೆಗೆ ದಯಮಾಡಿಸಿರಿ.

ಅರ್ಜುನನು ಈ ರೀತಿಯಲ್ಲಿ ನುಡಿದ ಮಾತುಗಳನ್ನು ಕೇಳಿ ಊರ್ವಶಿಗೆ ರೋಷವು ಇಮ್ಮಡಿಸಿತು. ಲಜ್ಜೆಯು ತೊಲಗಿತು. ಮನಸ್ಸಿನಲ್ಲಿ ಬಗೆಬಗೆಯ ಯೋಚನೆಗಳು ಹುಟ್ಟಿದುವು. ನೆನೆದ ಬಯಕೆಗಳೆಲ್ಲ ವ್ಯರ್ಥವಾದುವು. ಮೈಯಲ್ಲಿ ಜ್ವರದಂತೆ ಬಹಳ ತಾಪವು ಕಾಣಿಸಿಕೊಂಡಿತು. ಕಣ್ಣುಗಳು ಕೆಂಪಡರಿದುವು. ಮುಖದ ಕಾಂತಿ ಕುಗ್ಗಿತು. ಮೈನಡುಕ ತೋರಿತು. ಬೆವರು ನೀರು ಸುರಿಯುತ್ತಿತ್ತು. ಆಕೆಯು ರೋಷಪರವಶಳಾಗಿ ತುಟಿಗಳನ್ನು ಕಚ್ಚುತ್ತಾ ತಲೆದೂಗಿ, ತನ್ನ ಕೋಪವೆಂಬ ಆಯುಧವನ್ನು ಕಣ್ಣಿನ ಧಾರೆಯಲ್ಲಿ ಮಸೆದಳು. ಆಗ ಅರ್ಜುನನನ್ನು ನೋಡಿ "ಛೀ ಭಂಡರ ಭಾವ! ನೀನೆಂತಹ ನೀಚನು! ನೀನು ಪಂಚಕನೋ? ಹಳ್ಳಿಯ ಹೆಡ್ಡನೋ? ಹುಚ್ಚನೋ? ನಾನು ಯಾರೆಂಬುದು ನಿನಗೆ ತಿಳಿಯದೊ? ನಾನಾಗಿ ನಿನ್ನಲ್ಲಿ ಒಲಿದು ಬಂದೆನು. ಪುರುಷರು ತಮ್ಮ ಸೌಂದರ್ಯದಿಂದ ಸ್ತ್ರೀಯರನ್ನು ಒಲಿಸುವರು. ನಾನು ಬಹು ಸುಲಭಳೆಂತಲೂ, ಇಂದ್ರನ ಬಳಗದಲ್ಲಿ ನೀನು ದುರ್ಲಭನೆಂತಲೂ ತಿಳಿದಿರುವೆಯಾ? ಛೀ ನಪುಂಸಕನೇ! ತೊಲತೊಲಗು. ನಿನಗೇಕೆ ಈ ಬರಿಯ ಗಂಡುವೇಷ? ಭ್ರಷ್ಟಾ! ಇಗೋ ನಿನಗೆ ಶಾಪವನ್ನು ಕೊಡುವೆನು, ಹಿಡಿ" ಎಂದು ಗದರಿಸಿ ನುಡಿದಳು. ಆ ಊರ್ವಶಿಯು ಅಧಿಕ ರೋಷದ ನಿಟ್ಟುಸಿರಿನ ಝಳದಿಂದ ಮೂಗುತಿಗೆ ಹಾಕಿದ್ದ ಮುತ್ತಿನ ಕಾಂತಿಯು ಕಂದಿತು ಮುಖಕಮಲದ ಕಾಂತಿಯು ಬಾಡಿತು. ಆ ವೇಳೆಯಲ್ಲಿ ಆಕೆಯ ಸಿಟ್ಟಿನ ರೂಪವು ರಾಹುಗ್ರಸ್ತವಾದ ಚಂದ್ರಮಂಡಲದಂತೆಯೂ, ವಿಷದ ಕಜ್ಜಾಯದ ಹಾಗೆಯೂ, ಲೋಹಧಾರೆಗೆ ಲೇಪಿಸಿದ ಮಧುವಿನೋಪಾದಿಯಲ್ಲಿಯೂ ಭಯಂಕರವಾಗಿದ್ದಿತು. ಆಗ ಆ ಅಪ್ಸರಸೆಯು ರೋಷಾರುಣನೇತ್ರದಿಂದ ಅವನನ್ನು ನೋಡಿ "ಎಲಾ ನರಮೃಗವೇ! ನೀನು ಭರತಖಂಡದಲ್ಲಿ ಒಂದು ವರುಷ ಕಾಲ ನಪುಂಸಕನಾಗಿ ಚರಿಸುತ್ತಿರು. ಎಲ್ಲರೂ ನೋಡಿ ನಿನ್ನ ಸ್ವರೂಪವರಿಯಲಿ. ನೀನು ವಿಷ್ಣುವಿನ ಮರೆಹೊಕ್ಕರೂ, ಈಶ್ವರನ ಅನುಗ್ರಹ ಪಡೆದರೂ, ನಿಮ್ಮ ತಂದೆಗೆ ದೂರು ಹೇಳಿದರೂ

ನಾನು ಕೊಟ್ಟ ಶಾಪವು ಎಂದಿಗೂ ತಪ್ಪಲಾರದು. ನಿಶ್ಚಯವೆಂದು ತಿಳಿ ”
ಎಂದು ಮುಖವನ್ನು ತಿರುಗಿಸಿಕೊಂಡು ಹೊರಟು ಹೋದಳು.

ಆಗ ಅರ್ಜುನನು ಧೈರ್ಯಹೀನನಾಗಿ ಮೂಗನಂತೆ ಮೌನದಿಂದ ಏನೂ ತೋರದೆ ಸುಮ್ಮನಾದನು. ಮೂಗಿನ ಮೇಲೆ ಬೆರಳಿಟ್ಟುಕೊಂಡನು. ತಲೆದೂಗಿ, ಸ್ವಲ್ಪ ಹೊತ್ತು ಚಿಂತಿಸಿದನು. ಬಳಿಕ ಮನಸ್ಸಿನಲ್ಲಿ ವಿಚಾರ ಮಾಡಿ, ದೇವಲೋಕದ ಅಪ್ಸರಸ್ತ್ರೀಯರೆಲ್ಲಿ? ಭೂಲೋಕದ ಅನಾಗರಿಕರಾದ ನಾನೆಲ್ಲಿ? ಇದೆಲ್ಲಿಯ ಗ್ರಹಚಾರವು ನನಗೆ ಬಂದು ಸುತ್ತಿಕೊಂಡಿತು? ನಾನು ಇವಳನ್ನು ಕಳುಹೆಂದು ಇಂದ್ರನಲ್ಲಿ ಹೇಳಿಕೊಂಡೆನೆ? ಇವಳನ್ನು ಈ ಅರಮನೆಗೆ ಬಾರೆಂದು ಕರೆಯಿಸಿದೆನೆ? ಮತ್ತೇನಾದರೂ ಕಠಿನವಾದ ಮಾತುಗಳನ್ನಾಡಿ ಇವಳಿಗೆ ರೋಷವೆಬ್ಬಿಸಿದೆನೆ? ನಾನು ಮಾಡಿದ ಅಪರಾಧವೇನು? ಒಂದು ವರುಷ ಪರ್ಯಂತ ನಪುಂಸಕತ್ವವನ್ನು ನಾಚಿಕೆಯಿಲ್ಲದೆ ಹೇಗೆ ಧರಿಸಿಕೊಂಡಿರಲಿ! ಅದಕ್ಕಿಂತಲೂ ಪ್ರಾಣಬಿಡುವುದು ವಾಸಿಯಲ್ಲವೇ? ನನ್ನ ಜನ್ಮವನ್ನು ಸುಡಲಿ! ಎಲೈ ಬ್ರಹ್ಮನೆ! ಅಪರಾಧ ಮಾಡಿದವರಿಗೆ ದಂಡನೆಯನ್ನು ವಿಧಿಸಬೇಕೇ ಹೊರತು ನಿರಪರಾಧಿಗಳಿಗೆ ಶಿಕ್ಷೆ ಕೊಡಿಸಬಹುದೆ? ವೇದಸಮ್ಮತವಾಗಿಯೂ, ಮನ್ವಾದಿ ಸ್ಮೃತಿಕರ್ತರ ವಿಧಿಯಂತೆಯೂ ಧರ್ಮವಲ್ಲದ ಕಾರ್ಯವು ಸಲ್ಲದೆಂದು ತಿಳಿಸಿದುದೇ ನನ್ನ ದೋಷವೋ? ಛೀ ಛೀ! ನಾನು ಪೌರುಷಹೀನನಾಗಿ ಷಂಡತನದಿಂದ ಬದುಕಿರಲಾರೆನು. ನಾನು ಉಗ್ರತಪಸ್ಸು ಮಾಡಿದುದರಿಂದ ನನಗೆ ಪಾಶುಪತಾಸ್ತ್ರವು ಲಭ್ಯವಾಯಿತು. ಸತ್ಯವೇ ತಪಸ್ಸೆಂದು ಧರ್ಮಮಾರ್ಗವನ್ನು ಬಿಡದೆ ನಡೆದುದರಿಂದ ಷಂಡತ್ವಪ್ರಾಪ್ತಿಯಾಯಿತು. ಎರಡು ತಪಸ್ಸುಗಳೂ ಸರಿಯಾದ ಫಲಗಳನ್ನೇ ಕೊಟ್ಟುವು. ಈ ವಿಪರೀತ ಫಲಕ್ಕೆ ನನ್ನ ಕರ್ಮಗತಿಯೇ ಕಾರಣವಲ್ಲವೇ? (ಚಿಂತೆಯಿಂದ) ನಾನು ಭೂಲೋಕಕ್ಕೆ ಹೋಗಿ, ದ್ರೌಪದಿಯ ಸಂಗಡ “ನನಗೆ ಪಾಶುಪತಾಸ್ತ್ರವು ಲಭಿಸಿತು. ಕೌರವರ ರಕ್ತವನ್ನು ತೆಗೆದು ಸುರಿಯುವೆನು. ಮುಡಿಯನ್ನು ಕಟ್ಟು” ಎಂದು ಹೇಳಲೇ? ಇವಳು ನಪುಂಸಕನಾಗೆಂದು ನನಗೆ ಶಾಪವನ್ನು ಕೊಟ್ಟ ಸುದ್ದಿಯನ್ನು

ಹೇಳಲೇ? ಒಳ್ಳೆಯ ಬಿಕ್ಕಟ್ಟಿನ ಪ್ರಸಂಗವು ಬಂತಲ್ಲಾ! ಎಂದು ವಿಚಾರಗ್ರಸ್ತನಾಗಿ ಕುಳಿತಿದ್ದನು.

ರೋಷದಿಂದ ಶಾಪವನ್ನು ಕೊಟ್ಟ ಊರ್ವಶಿಯು ತನ್ನ ಮನೆಗೆ ಹೋಗಿ, ಚಿತ್ರಸೇನನನ್ನು ಕರಿಸಿ, ಅರ್ಜುನನು ತನಗೆ ಆಶಾಭಂಗ ಮಾಡಿ ಅವಮಾನಗೊಳಿಸಿದುದನ್ನೂ, ತಾನು ಅವನಿಗೆ ಶಾಪಕೊಟ್ಟುದುದನ್ನೂ ಹೇಳಿದಳು. ಅವನು ದೇವೇಂದ್ರನ ಬಳಿಗೆ ಹೋಗಿ ಇವರಿಬ್ಬರ ವಾಗ್ವಾದವನ್ನೂ, ಅರ್ಜುನನಿಗೆ ನಿಷ್ಕಾರಣವಾಗಿ ಶಾಪಬಂದುದನ್ನೂ ತಿಳಿಸಲು ಆ ದೇವಪತಿಯು ಮನಸ್ಸಿನಲ್ಲಿ ನೊಂದುಕೊಂಡು ಅರ್ಜುನನನ್ನು ಸಮಾಧಾನಗೊಳಿಸಲು ಅವನು ಇಳಿದುಕೊಂಡಿದ್ದ ಅರಮನೆಗೆ ಬಂದನು ಅರ್ಜುನನು ದುಗುಡದಿಂದ ಮುಖಕ್ಕೆ ಮುಸುಕು ಹಾಕಿಕೊಂಡಿದ್ದುದನ್ನು ಕಂಡು ಇಂದ್ರನು "ಮಗುವೇ! ಮನಸ್ಸಿನ ಚಿಂತೆಗೆ ಕಾರಣವೇನಪ್ಪಾ! ನಿನ್ನ ಕಣ್ಣುಗಳಿಂದ ನೀರು ಹರಿದುಬರುತ್ತಿದೆ. ನಿನ್ನ ಮನೋವೃತ್ತಿಯು ವ್ಯತ್ಯಸ್ತವಾಯಿತೆ? ನಡೆದ ಸಮಾಚಾರವೇನು?" ಎಂದು ಕೇಳಿದನು. ಅದಕ್ಕೆ ಅರ್ಜುನನು ಲಜ್ಜೆಯಿಂದ ತಲೆಬಾಗಿಸಿಕೊಂಡು, ಮಾತನಾಡದೆ ಮೌನದಿಂದ ಇದ್ದನು. ಇಂದ್ರನು ಅವನನ್ನು ಪುನಃ ಅಪ್ಪಿಕೊಂಡು ಮುದ್ದಿಸಿ "ತಮ್ಮಾ ಅರ್ಜುನಾ! ನಿನ್ನ ಮನೋವ್ಯಥೆಯನ್ನು ಬಿಟ್ಟುಬಿಡು. ಊರ್ವಶಿಯು ತಿರಸ್ಕರಿಸಿ ಆಡಿದ ಮಾತುಗಳನ್ನೆಲ್ಲಾ ನನಗೆ ಆಡಿದುವುಗಳೆಂದು ತಿಳಿದು ಸೈರಿಸು. ಹೆಂಗಸರ ಮನಸ್ಸು ಬಲ್ಲವರಿಲ್ಲ. ನಿನಗೆ ಈಗ ಮನೋವ್ಯಥೆಯಾಗಿದೆ. ಅವಳ ಶಾಪದಿಂದ ನೀನು ಹೆದರಿರುವೆ ಆ ಸ್ತ್ರೀಯ ಕೋಪವು ನಿನಗೆ ಉಪಕಾರವನ್ನೇ ಮಾಡಿತೆಂದು ತಿಳಿದುಕೋ. ನಿಮ್ಮ ವನವಾಸದ ಅವಧಿಯು ಹನ್ನೆರಡು ವರುಷಗಳು ಕಳೆದ ಬಳಿಕ ನೀವು ಒಂದು ವರುಷ ಕಾಲ ಅಜ್ಞಾತವಾಸ ಮಾಡಬೇಕಾಗಿದೆಯಲ್ಲವೇ? ಆ ಕಾಲದಲ್ಲಿ ಈ ಶಿಖಂಡಿತನವು ಪ್ರಾಪ್ತವಾಗಿ ನಿನಗೆ ಉಪಕಾರವೇ ಆಗುವುದು, ಚಿಂತಿಸಬೇಡ. ಶತ್ರುಜನರ ದೃಷ್ಟಿಗೆ ಗೋಚರಿಸದೆ ನಪುಂಸಕ ವೇಷದಿಂದ ಇದ್ದರೆ ನಿನ್ನ ಪ್ರತಿಜ್ಞೆಯೂ ಸಫಲವಾಗುವುದು. ಅವಳ ಶಾಪವೂ ನೆರವೇರುವುದು. ನಿನ್ನ ಮನಸ್ಸಿನ ವಿಷಾದವನ್ನು ಬಿಡು" ಎಂದು ಸಂತೈಸಿ, ತನ್ನ ಅರಮನೆಗೆ ಹೋದನು. ಅಗ್ನಿ ಯಮ ವರುಣಾದಿ

ಇತರ ದಿಕ್ಪಾಲಕರೂ ಅರ್ಜುನನ ಬಳಿಗೆ ಬಂದು ಸಮಾಧಾನೋಕ್ತಿಗಳನ್ನು ಹೇಳಿ ದೇವತಾಸ್ತ್ರಗಳನ್ನು ಕೊಟ್ಟು ಅನುಗ್ರಹಿಸಿದರು. ದೇವತಾಸ್ತ್ರೀಯರು ಜಯಜಯ ಧ್ವನಿ ಮಾಡಿ ಪುಷ್ಪವರ್ಷವನ್ನು ಸುರಿಸಿದರು. ಇಂದ್ರನು ಮರಳಿ ಅನೇಕ ಶಸ್ತ್ರಾಸ್ತ್ರಗಳನ್ನು ಕೊಟ್ಟು ಕಳುಹಿದನು. ಅವನಿಗೆ ಮುಂದೆ ಅನುಕೂಲಿಸಲೆಂದು ದೇವಲೋಕದ ಭರತವಿದ್ಯೆಯನ್ನು ಶಾಸ್ತ್ರೋಕ್ತ ಕ್ರಮದಿಂದ ಕಲಿಸುವುದಕ್ಕೆ ಏರ್ಪಡಿಸಿದನು. ಅರ್ಜುನನು ಅಲ್ಲಿ ಗಾಂಧರ್ವ ವಿದ್ಯೆಯನ್ನು ಜಾಗ್ರತೆಯಲ್ಲಿ ಗ್ರಹಿಸಿದನು. ಬಳಿಕ ಅರ್ಜುನನು ಇಂದ್ರನ ಅನುಮತಿಯಂತೆ ದೇವತೆಗಳಿಗೆ ಶತ್ರುಗಳಾದ ಕಾಲಕೇಯ ನಿವಾತಕವಚರೆಂಬ ರಾಕ್ಷಸರ ತಂಡವನ್ನು ಸಂಹರಿಸಿ, ಸುರರ ಭಯವನ್ನು ಪರಿಹರಿಸಿದನು. ಈ ರೀತಿಯಾಗಿ ಅರ್ಜುನನು ಅಮರಾವತಿಯಲ್ಲಿ ಐದು ವರುಷಗಳ ಕಾಲ ಸುಖದಿಂದ ಕಾಲಹರಣ ಮಾಡಿಕೊಂಡು ಇದ್ದನು. ವನದಲ್ಲಿ ಯುಧಿಷ್ಠಿರನು ಅರ್ಜುನನ ಸುದ್ದಿ ತಿಳಿಯದೆ ಚಿಂತಿಸುತ್ತಾ "ಬಹು ದಿನಗಳಾದುವಲ್ಲಾ! ತಮ್ಮನ ಸ್ಥಿತಿಗತಿಗಳು ಏನಾಗಿವೆಯೊ? ಅವನು ನಮ್ಮನ್ನು ಮರೆತುಬಿಟ್ಟನೋ ಏನೊ? ಯಾರು ಅವನ ವರ್ತಮಾನವನ್ನು ತಿಳಿಸುವರು" ಎಂದು ಹಗಲಿರುಳೂ ಯೋಚನೆಯಲ್ಲಿ ಕೊರಗುತ್ತಿದ್ದನು.

---

## ಏಳನೆಯ ಸಂಧಿ.

---

ಸೂಚನೆ:—ಪಾಂಡವರು ಋಷಿಗಳೊಂದಿಗೆ ತೀರ್ಥಯಾತ್ರೆ ಮಾಡಿಕೊಂಡು ಬಂದರು. ಬಳಿಕ ದ್ರೌಪದಿಯ ಬಯಕೆಯಂತೆ ಭೀಮಸೇನನು ಸೌಗಂಧಿಕ ಕುಸುಮಗಳನ್ನು ತಂದುಕೊಟ್ಟನು. ಅರ್ಜುನನು ಸ್ವರ್ಗದಿಂದ ಹಿಂದಿರುಗಿ ಬಂದು ಸಹೋದರರನ್ನು ಸಂತೋಷಗೊಳಿಸಿದನು.

ಯುಧಿಷ್ಠಿರನು ಅರ್ಜುನನ ವಿಯೋಗ ದುಃಖದಿಂದ ಕೊರಗುತ್ತಿರುವಾಗ ಆತನ ಸಹೋದರರೂ, ಪಾಂಚಾಲಿಯೂ, ಧೌಮ್ಯಾದಿ ಮಹರ್ಷಿಗಳೂ ಅವನಿಗೆ ಸಮಾಧಾನದ ಮಾತುಗಳನ್ನು ಹೇಳಿ ಸಂತೈಸುತ್ತಿದ್ದರು. ಭೀಮಸೇನನಿಗೆ ಮಾತ್ರ ಕೌರವರ ಮೇಲೆ ಕ್ರೋಧಾಗ್ನಿಯು ಹೆಚ್ಚ

ತ್ತಲೇ ಇತ್ತು. ಅವನು ಯುಧಿಷ್ಠಿರನನ್ನು ನೋಡಿ "ಅಣ್ಣಾ! ನಮ್ಮ ಪ್ರಾಣಗಳಿಗಿಂತಲೂ ಹೆಚ್ಚು ಪ್ರೀತಿಪಾತ್ರನಾದ ಅರ್ಜುನನು ನಿನ್ನ ಅಪ್ಪಣೆ ಪಡೆದು ತಪಸ್ಸಿಗೆ ಹೋಗಿ ಬಹು ದಿನಗಳು ಕಳೆದುಹೋದುವು. ಆತನು ಎಲ್ಲಿರುವನೋ? ಏನಾಗಿರುವನೋ, ಆ ಸುದ್ದಿಯೇ ಇದುವರೆಗೂ ತಿಳಿದುಬಂದಿಲ್ಲ. ಇದರಿಂದ ನಮ್ಮೆಲ್ಲರ ಮನಸ್ಸಿಗೂ ಬಹಳ ಚಿಂತೆಯುಂಟಾಗಿದೆ. ಹನ್ನೆರಡು ವರುಷಗಳ ಅವಧಿಯು ಎಂದಿಗೆ ಮುಗಿಯುವುದು? ಕೌರವನನ್ನೂ ಶಕುನಿ ಕರ್ಣಾದಿಗಳನ್ನೂ ಎಂದಿಗೆ ಯುದ್ಧದಲ್ಲಿ ಕೊಂದು ನಮ್ಮ ಪ್ರತಿಜ್ಞಾಪರಿಪಾಲನೆ ಮಾಡುವೆವು? ಎಂಬ ಚಿಂತೆಯಿಂದ ಇರುವ ನಮಗೆ ಅರ್ಜುನನ ವಿಯೋಗ ದುಃಖವೊಂದು ಸೇರಿ ಮತ್ತಷ್ಟು ಕಳವಳವನ್ನು ಹುಟ್ಟಿಸುತ್ತಿದೆ. ನಿನಗೆ ಆಪ್ತರು ಬೇಡವೆಂದು ತಡೆದರೂ ಕೂಡ ಮನಸ್ಸು ನಿಲ್ಲದೆ ಜೂಜಾಡಲಿಕ್ಕೆ ಕುಳಿತು ಇಷ್ಟರ ಅನರ್ಥಕ್ಕೆ ಗುರಿಮಾಡಿದೆ. ನಡೆದುಹೋದುದನ್ನು ಚಿಂತಿಸಿ ಫಲವಿಲ್ಲ. ಈಗಲಾದರೂ ದಯಮಾಡಿ ನನಗೆ ಅನುಜ್ಞೆ ಕೊಡು. ದುರಾತ್ಮರಾದ ಆ ಕೌರವರನ್ನು ಸುಟ್ಟು ಬೂದಿಮಾಡಿ ಬರುವೆನು" ಎಂದು ಕ್ರೋಧದಿಂದ ಎದ್ದುನಿಂತನು. ಆಗ ಯುಧಿಷ್ಠಿರನು ತಮ್ಮನನ್ನು ನೋಡಿ "ಭೀಮಣ್ಣಾ! ದುಡುಕಬೇಡ, ಸೈರಣೆಯನ್ನು ತಂದುಕೊ. ಹದಿಮೂರು ವರ್ಷಗಳಲ್ಲಿ ಬಹು ಭಾಗವು ಕಳೆದುಹೋಯಿತು. ಈ ಅವಧಿಯು ಮುಗಿದ ಮೇಲೆ ನಮ್ಮ ಸಮಯದಂತೆ ಅರ್ಜುನನೊಂದಿಗೆ ಸೇರಿ ಯುದ್ಧದಲ್ಲಿ ಶತ್ರುಗಳನ್ನು ನಿರ್ನಾಮಮಾಡಬಹುದು. ಆತುರದಿಂದ ಕಾರ್ಯವು ಕೆಟ್ಟುಹೋಗುವುದು." ಎಂದು ಸಮಾಧಾನಮಾಡುತ್ತಿದ್ದನು. ಆ ವೇಳೆಗೆ ಸರಿಯಾಗಿ ಬೃಹದಶ್ವನು ಹರ್ಷಿಯು ಅಲ್ಲಿಗೆ ಬಂದನು. ಕೂಡಲೆ ಧರ್ಮರಾಯನು ಆ ಮುನೀಂದ್ರನಿಗೆ ಪ್ರತ್ಯುತ್ಥಾನಾಭಿ ವಂದನೆಗಳನ್ನು ಮಾಡಿ, ಕುಶಲಪ್ರಶ್ನೆಗಳನ್ನು ಕೇಳಿದ ಬಳಿಕ ಆತನನ್ನು ಕುರಿತು ಇಂತೆಂದನು.

ಯುಧಿ:—ಎಲೈ ತಪಸ್ವಿಯೇ! ನಿಮ್ಮ ಗೌರವಕ್ಕೆ ತಕ್ಕಂತೆ ಉಪಚರಿಸುವಷ್ಟು ಪುಣ್ಯವನ್ನು ನಾನು ಪಡೆಯಲಿಲ್ಲ. ನಮ್ಮ ದೇಶಕೋಶಾದಿ ಸರ್ವಸ್ವವನ್ನೂ ದಾಯಾದ್ಯರಾದ ಕೌರವರು ಜೂಜಿನ ನೆವದಿಂದ ಅಪಹರಿಸಿದರು. ಮನೆಗೆ ಬಂದ ಅತಿಥಿ, ಅಭ್ಯಾಗತರನ್ನು ಸತ್ಕರಿಸು

ವುದಕ್ಕೆ ತಕ್ಕ ಅನುಕೂಲವಿಲ್ಲದೆ ಚಿಂತೆಯಿಂದ ಕಾಲಹರಣ ಮಾ
ಡುತ್ತಿದ್ದೇನೆ ನನ್ನ ತಮ್ಮನಾದ ಅರ್ಜುನನು ತಪಸ್ಸು ಮಾಡಿ ಈ
ಶ್ವರಾನುಗ್ರಹವನ್ನು ಪಡೆದು ಬರುವೆನೆಂದು ಹೋಗಿ ಬಹುದಿನಗಳಾ
ದವು. ಇದುವರೆಗೂ ಆವನ ಸಮಾಚಾರವೇ ತಿಳಿಯಲಿಲ್ಲವಲ್ಲ!
ಅದೂ ಇರಲಿ. ಮಹಾತ್ಮರೇ, ಪೂರ್ವದಲ್ಲಿ ನನ್ನಂತೆ ಕಷ್ಟಪಟ್ಟು,
ಕ್ಲೇಶಕ್ಕೆ ಗುರಿಯಾದ ದುರ್ದೈವಿಗಳು ಯಾರಾದರೂ ಇದ್ದರೆ?
ದಯಮಾಡಿ ಹೇಳಿರಿ.

ಬೃಹದಶ್ವ:—ಎಲೈ ಧರ್ಮರಾಯನೇ! ನಿನಗಿಂತ ಹೆಚ್ಚು ಕಷ್ಟಗಳಿಗೆ
ಸಿಕ್ಕಿದ ಮಹಾತ್ಮರು ಪೂರ್ವದಲ್ಲಿ ಎಷ್ಟೋ ಮಂದಿ ಇದ್ದರು.
ನಿನ್ನ ಸ್ಥಿತಿಯು ಅವರ ಸ್ಥಿತಿಗಿಂತ ಬಹಳ ಮೇಲಾಗಿರುವುದೆಂದು
ಹೇಳಬಹುದು. ತಮ್ಮಂದಿರು, ಧರ್ಮಪತ್ನಿ, ಇಷ್ಟಮಿತ್ರರು,
ಮುನಿಜನರು, ಇವರಿಂದ ಕೂಡಿ ನೀನು ಸೌಖ್ಯವಾಗಿಯೇ ಇದ್ದೀ
ಯೆ. ಸೂರ್ಯನು ಕರುಣಿಸಿಕೊಟ್ಟಿರುವ ಅಕ್ಷಯಪಾತ್ರೆಯಿಂದ
ಎಷ್ಟುಮಂದಿಗೆ ಬೇಕಾದರೂ ಮೃಷ್ಟಾನ್ನ ಭೋಜನ ಮಾಡಿಸತಕ್ಕ
ಅನುಕೂಲತೆ ನಿನಗೆ ಇದೆ ರಾಜ್ಯಪದವಿಯನ್ನು ಕಳೆದುಕೊಂಡು
ವನವಾಸಮಾಡುವ ಕಷ್ಟ ಒಂದು ಹೊರತು ಮತ್ತಾವ ಕೊರತೆ
ಯೂ ನಿನಗೆ ಇಲ್ಲ. ಪೂರ್ವಕಾಲದಲ್ಲಿ ನಿಷಧದೇಶಾಧಿಪತಿಯಾದ
ನಳರಾಜನು ನಿನ್ನಂತೆಯೇ ದಾಯಾದನಾದ ಪುಷ್ಕರನ ಸಂಗಡ ಜೂ
ಜನಾಡಿ ಸರ್ವಸ್ವವನ್ನೂ ಕಳೆದುಕೊಂಡನು. ಆ ರಾಜನು ಒಪ್ಪೊ
ತ್ತು ರಾಜಧಾನಿಯಲ್ಲಿ ನಿಲ್ಲಲಿಕ್ಕೆ ಸುದಾ ಆ ದುರುಳನು ಅವಕಾಶ
ಕೊಡಲಿಲ್ಲ. ಉಟ್ಟಿದ್ದ ಬಟ್ಟೆಗಳನ್ನು ಕಳೆದುಕೊಂಡು ಹೆಂಡತಿ
ಯಾದ ದಮಯಂತಿಯು ಉಟ್ಟಿದ್ದ ಸೀರೆಯಲ್ಲಿ ಅರ್ಧವನ್ನು ಹರಿ
ದು ತಾನು ಧರಿಸಿಕೊಂಡು, ಅವಳು ತನ್ನ ಜತೆಯಲ್ಲಿದ್ದರೆ ಕಷ್ಟಪ
ಡಬೇಕಾಗುವುದೆಂದು ಯೋಚಿಸಿ, ನಿದ್ರಿಸುತ್ತಿರುವಾಗ ಅವಳಿಗೆ
ತಿಳಿಯದಂತೆ ವಂಚಿಸಿ, ಒಬ್ಬನೇ ಹೊರಟು ಹೋಗಿ ವೇಷಾಂತರದಿಂ
ದ ಅಯೋಧ್ಯೆಗೆ ಹೋಗಿ ಅಲ್ಲಿಯ ರಾಜನಲ್ಲಿ ಕುದುರೆಯ ಚಾಕರಿ
ಮಾಡಿಕೊಂಡಿದ್ದನು. ಪತಿವ್ರತೆಯಾದ ದಮಯಂತಿಯು ಗಂಡನ

ಸುದ್ದಿ ತಿಳಿಯದೆ, ಅವನಿಗಿಂತ ಹೆಚ್ಚಾದ ಕ್ಲೇಶಗಳನ್ನು ಅನುಭವಿಸಿ, ತಂದೆಯ ಮನೆಗೆ ಹೋಗಿ ಸೇರಿದಳು. ಕೊನೆಗೆ ಸುದೈವದಿಂದ ಕಷ್ಟಗಳು ಪರಿಹರವಾಗಲು ಆ ದಂಪತಿಗಳು ಸುಖವಾಗಿದ್ದರು.

ಎಂದು ಹೇಳಿದ ಕಥೆಯನ್ನು ಕೇಳಿ, ಯುಧಿಷ್ಠಿರನು ಸ್ವಲ್ಪ ಸಮಾಧಾನ ತಂದುಕೊಂಡು ಆ ಮಹರ್ಷಿಯನ್ನು ನೋಡಿ ಮುನಿವರ್ಯರೇ ! ತಮ್ಮ ಮಾತು ಸತ್ಯವು. ನನಗೆ ಪಗಡೆಯಾಟದ ರಹಸ್ಯಗಳು ಚೆನ್ನಾಗಿ ಗೊತ್ತಿಲ್ಲವಾದುದರಿಂದ ಇಷ್ಟು ಕಷ್ಟಗಳಿಗೆ ಸಿಕ್ಕಬೇಕಾಯಿತು. ಅಕ್ಷಹೃದಯವನ್ನು ದಯಮಾಡಿ ನನಗೆ ಉಪದೇಶಿಸಬೇಕೆಂದು ಕೇಳಿಕೊಂಡನು. ಬೃಹದಶ್ವನು ಆತನ ಪ್ರಾರ್ಥನೆಯಂತೆ ಪಗಡೆಯಾಟದ ಮರ್ಮಗಳನ್ನೆಲ್ಲಾ ಬೋಧಿಸಿ, ನಿನ್ನ ತಮ್ಮನಾದ ಅರ್ಜುನನು ಜಾಗ್ರತೆಯಲ್ಲಿಯೇ ಬಂದು ಸೇರುವನು: ಚಿಂತಿಸಬೇಡವೆಂದು ಹೇಳಿ ಹೊರಟುಹೋದನು.

ಮತ್ತೊಂದು ದಿನ ನಾರದ ಮಹರ್ಷಿಯು ಪಾಂಡವರನ್ನು ನೋಡುವುದಕ್ಕೋಸ್ಕರ ಕಾಮ್ಯಕವನಕ್ಕೆ ಬಂದನು ಯುಧಿಷ್ಠಿರನು ಆ ದೇವಮುನಿಯನ್ನು ಅರ್ಘ್ಯಪಾದ್ಯಾದ್ಯುಪಚಾರಗಳಿಂದ ಸತ್ಕರಿಸಿ “ ಮಹನೀಯರೇ ! ಪ್ರಿಯಸಹೋದರನಾದ ಅರ್ಜುನನ ಕ್ಷೇಮಸಮಾಚಾರ ತಿಳಿಯದೆ ತುಂಬ ಪೇಚಾಟವಾಗಿದೆ. ನಮ್ಮ ಮನಸ್ಸಿನ ಸಂಶಯವನ್ನು ಪರಿಹರಿಸಬೇಕು ” ಎಂದು ಪ್ರಾರ್ಥಿಸಿದನು ಅದಕ್ಕೆ ನಾರದನು “ ಅಯ್ಯಾ ಅಜಾತಶತ್ರುವೇ ? ಅರ್ಜುನನು ಶಿವನಿಂದ ವರಗಳನ್ನು ಪಡೆದು ಸ್ವರ್ಗಕ್ಕೆ ಹೋಗಿ ದೇವೇಂದ್ರನ ಆತಿಥ್ಯದಲ್ಲಿ ಸುಖದಿಂದ ಇರುವನು ಲೋಮಶ ಮಹರ್ಷಿಯು ಇಷ್ಟರಲ್ಲಿಯೇ ಇಂದ್ರನ ಸಂದೇಶವನ್ನು ತಿಳಿಸಲು ಇಲ್ಲಿಗೆ ಬರುವನು. ನೀನು ಚಿಂತಿಸಬೇಡ ತೀರ್ಥಯಾತ್ರೆಗಳ ವ್ಯಾಜದಿಂದ ಭೂಪ್ರದಕ್ಷಿಣ ಮಾಡಿದರೆ ನಿನಗೆ ಶ್ರೇಯಸ್ಸು ಉಂಟಾಗುವುದು ” ಎಂದು ಹೇಳಿ, ಕಾಶಿ, ಮಧುರೆ ಮುಂತಾದ ಪುಣ್ಯಕ್ಷೇತ್ರಗಳ ಮಹಿಮೆಯನ್ನು ವಿಸ್ತರಿಸಿ ತಿಳಿಸಿ, ಅವನ ಅನುಮತಿ ಪಡೆದು ಹೊರಟುಹೋದನು.

ಅರ್ಜುನನು ಸುರಪತಿಯಾದ ಇಂದ್ರನ ಭವನದಲ್ಲಿ ಐದು ವರುಷಗಳ ಕಾಲ ಸುಖವಾಗಿ ವಾಸಮಾಡಿಕೊಂಡಿದ್ದನು. ಅವನ ಒಡಹುಟ್ಟಿದ

ವರು ಅರ್ಜುನನ ಸುದ್ದಿ ತಿಳಿಯದೆ ಚಿಂತಿಸುತ್ತಿರುವರೆಂದು ದೇವೇಂದ್ರ
ನು ಯೋಚಿಸಿ ಲೋಮಶಮಹರ್ಷಿಯ ಮೂಲಕ ಯುಧಿಷ್ಠಿರನಿಗೆ ಅ
ರ್ಜುನನ ಕುಶಲವಾರ್ತೆಯನ್ನು ಹೇಳಿ ಕಳುಹಿಸಿದನು. ಆ ಮುನಿಯು
ಆಕಾಶದಿಂದ ಇಳಿದು ಕಾಮ್ಯಕವನಕ್ಕೆ ಬಂದು ಪರ್ಣಶಾಲೆಯಲ್ಲಿದ್ದ
ಯುಧಿಷ್ಠಿರನನ್ನು ಕಂಡನು ಧರ್ಮರಾಯನು ಆ ಮಹರ್ಷಿಯನ್ನು
ನೋಡಿದ ಕೂಡಲೇ ಎದುರಾಗಿ ಎದ್ದು ಹೋಗಿ ಕರೆದು ತಂದು ಆತನಿಗೆ
ಅರ್ಘ್ಯಪಾದ್ಯಾಚಮನೀಯಗಳನ್ನು ಕೊಟ್ಟು ಸತ್ಕರಿಸಿ, ಕುಶಲಪ್ರಶ್ನೆಗ
ಳಾದ ನಂತರ ತನ್ನ ತಮ್ಮನ ಕ್ಷೇಮಸಮಾಚಾರವೇನೆಂದು ಕೇಳಿದನು.
ಅದಕ್ಕಾಲೋಮಶನು "ಎಲೈ ಯುಧಿಷ್ಠಿರನೇ! ಅರ್ಜುನನು ಇಂದ್ರನ
ಅರಮನೆಯಲ್ಲಿ ಸೌಖ್ಯದಿಂದ ಇರುವನು. ಅವನಿಗೆ ದೇವತಾಸ್ತ್ರಗಳೆಲ್ಲವೂ
ಕೈವಶವಾದವು. ಇಷ್ಟರಲ್ಲಿಯೇ ಹೊರಟು ಬರುವನೆಂದು ಇಂದ್ರನು ನಿನ
ಗೆ ಹೇಳಿಕಳುಹಿರುವನು ಚಿಂತಿಸಬೇಡ" ಎಂದು ಹೇಳಿದನು. ಆಗ
ರಾಯನೂ, ಅವನ ತಮ್ಮಂದಿರೂ, ದ್ರೌಪದಿ ಮುಂತಾದವರೂ ಬಹು ಸಂ
ತೋಷಪಟ್ಟು, ಆತನ ಆಗಮನವನ್ನೇ ನಿರೀಕ್ಷಿಸಿಕೊಂಡಿದ್ದರು.

ಒಂದೆರಡು ದಿನಗಳಾದ ಮೇಲೆ ಯುಧಿಷ್ಠಿರನು ತೀರ್ಥಯಾತ್ರೆ ಹೊ
ರಡಬೇಕೆಂದು ಯೋಚಿಸಿ, ಆ ಲೋಮಶ ಮುನಿಯನ್ನೂ, ಇತರ ಮುನಿ
ಜನರನ್ನೂ ಸಂಗಡ ಕರೆದುಕೊಂಡು ಸಪರಿವಾರನಾಗಿ ಪ್ರಯಾಣ ಮಾಡಿ
ದನು.

ಅವರು ಭೀಷ್ಮತೀರ್ಥವನ್ನು ನೋಡಿಕೊಂಡು, ಅಲ್ಲಿಂದ ಅಗಸ್ತ್ಯ
ಮುನಿಯ ಆಶ್ರಮಕ್ಕೆ ಬಂದರು. ಲೋಮಶನು ಆ ಮಹರ್ಷಿಯ ಮಹಿ
ಮೆಯನ್ನು ವಿವರಿಸಿ, ವೃತ್ರಾಸುರನ ವಧೆಗಾಗಿ ದಧೀಚಿ ಮುನಿಯು ತನ್ನ
ಎಲಬುಗಳನ್ನು ಕೊಟ್ಟ ಸಮಾಚಾರವನ್ನು ತಿಳಿಸಿದನು. ಅಲ್ಲಿಂದ
ಮುಂದೆ ಋಷ್ಯಶೃಂಗರ ಆಶ್ರಮಕ್ಕೆ ಬಂದು, ಅಲ್ಲಿ ಒಂದೆರಡು ದಿನಗ
ಳಿದ್ದು, ಗಂಗಾಸಂಗಮಕ್ಷೇತ್ರಕ್ಕೆ ಅವರು ಬಂದರು. ತರುವಾಯ ಪರಶು
ರಾಮನ ಆಶ್ರಮಕ್ಕೆ ಬಂದು, ಆ ಮಹರ್ಷಿಯು ಕಾರ್ತವೀರ್ಯಾದಿ ಕ್ಷತ್ರಿ
ಯ ಕುಲವನ್ನು ಇಪ್ಪತ್ತೊಂದು ಸಾರಿ ಹುಡುಕಿ ಹುಡುಕಿ ಕೊಂದ ಕಥೆ
ಯನ್ನು ಕೇಳಿ ಯುಧಿಷ್ಠಿರನು ಆಶ್ಚರ್ಯಪಟ್ಟನು. ಅಲ್ಲಿಂದ ಮುಂದೆ

ಪ್ರಭಾಸತೀರ್ಥಕ್ಕೆ ಬರಲು ಯಾದವರೆಲ್ಲರೂ ಅಲ್ಲಿಗೆ ಬಂದಿದ್ದರು. ಅವರನ್ನು ನೋಡಿ ಕ್ಷೇಮಸಮಾಚಾರಗಳನ್ನು ತಿಳಿದು, ಅಲ್ಲಿಂದ ಚ್ಯವನ ಮುನೀಂದ್ರನ ಆಶ್ರಮಕ್ಕೆ ಬಂದರು. ಆ ಋಷಿಯು ಶರ್ಯಾತಿರಾಯನ ಮಗಳಾದ ಸುಕನ್ಯೆಯನ್ನು ಮದುವೆಯಾದುದನ್ನೂ, ಕಣ್ಕುರುಡನಾಗಿದ್ದ ಚ್ಯವನನು ಅಶ್ವಿನೀದೇವತೆಗಳ ಅನುಗ್ರಹದಿಂದ ಕಣ್ಣುಗಳನ್ನು ಪಡೆದು, ಅವರಿಗೆ ಯಜ್ಞಗಳಲ್ಲಿ ತಪ್ಪಿಹೋಗಿದ್ದ ಹವಿರ್ಭಾಗಗಳನ್ನು ಕೊಡಿಸಿದ ಸಂಗತಿಯನ್ನೂ ಲೋಮಶಮುನಿಯಿಂದ ತಿಳಿದುಕೊಂಡು, ಅಲಲ್ಲಿ ಶಿಬಿ, ಮಾಂಧಾತ, ಯಯಾತಿ ಮುಂತಾದ ಮಹಾತ್ಮರ ಕಥೆಗಳನ್ನು ಕೇಳುತ್ತಾ, ಅಲ್ಲಿಂದ ಮುಂದೆ ಗಂಧಮಾದನ ಪರ್ವತಕ್ಕೆ ಅವರೆಲ್ಲರೂ ಬಂದು ಸೇರಿದರು.

ಅಲ್ಲಿ ಅಗ್ನಿಹೋತ್ರಗಳನ್ನು ಇಟ್ಟುಕೊಂಡಿದ್ದ ಋಷಿಗಳು ಪತ್ನೀಸಹಿತರಾಗಿ ಬಂದು ಯುಧಿಷ್ಠಿರಾದಿಗಳನ್ನು ಕಂಡು ಅವರನ್ನು ಸತ್ಕರಿಸಿದರು. ಮರುದಿವಸ ಅವರು ಬೆಟ್ಟದ ನೋಟವನ್ನು ನೋಡಬೇಕೆಂದು ಹೊರಟುಬರುತ್ತಿರುವಾಗ ಬಲವಾದ ಬಿರುಮಳೆ ಬಂತು. ಮಿಂಚು, ಗುಡುಗು, ಸಿಡಿಲು, ಇವು ಪರ್ವತ ಬಿರಿಯುವಂತೆ ಧ್ವನಿಗೊಟ್ಟುವು. ಗಾಢಾಂಧಕಾರವು ಕವಿದು ಜನರ ಕಣ್ಣುಗಳನ್ನು ಮುಚ್ಚಿದುವು. ತಮ್ಮ ತಮ್ಮ ಜೀವಗಳನ್ನು ಉಳಿಸಿಕೊಂಡರೆ ಸಾಕೆಂದು, ಅಲ್ಲಲ್ಲಿ ಮರೆಯಾದ ಸ್ಥಳಗಳಲ್ಲಿ ನಿಂತುಬಿಟ್ಟರು. ಆ ವೇಳೆಯಲ್ಲಿ ದ್ರೌಪದಿಯನ್ನು ವಿಚಾರಿಸಿದವರೇ ಇಲ್ಲ. ಬಲವಾದ ಮಳೆ ಸುರಿಯುತ್ತಿದೆ. ಕಣ್ಣುಗಳು ಕಾಣಿಸವು. ಸಿಡಿಲಿನ ಅಬ್ಬರ ಬಾದು ಕಡೆ. ಯಾರನ್ನು ಕರೆದು ಕೂಗಿದರೂ ಮಾತನಾಡಿದವರೇ ಇಲ್ಲ. ಆ ಸಾಧ್ವಿಯು ಭಯದಿಂದಲೂ, ಶೈತ್ಯದಿಂದಲೂ ನಡುಗಿ ಅಲ್ಲಿಯೇ ಮೈಮರೆತುಬಿದ್ದಳು. ರಾತ್ರಿಯೆಲ್ಲಾ ಕಳೆಯಿತು. ಬಿರುಮಳೆ ನಿಂತಿತು. ಮರುದಿನ ಬೆಳಗ್ಗೆ ಭೀಮಾದಿಗಳು ದ್ರೌಪದಿ ಎಲ್ಲಿ ಸಿಕ್ಕಿಬಿಟ್ಟಳೋ ಎಂದು ಕಂಡಕಂಡವರನ್ನು ವಿಚಾರಿಸುತ್ತಾ ಹೊರಟರು. ಆ ದಾರಿಯಲ್ಲಿ ಮೂರ್ಛಾಕ್ರಾಂತೆಯಾಗಿ ಬಿದ್ದಿರುವ ದ್ರೌಪದಿಯನ್ನು ಕಂಡು ಧರ್ಮರಾಯನು ಅವಳನ್ನೆತ್ತಿ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಶೈತ್ಯೋಪಚಾರಗಳನ್ನು ಮಾಡಿದ ಮೇಲೆ ಅವಳಿಗೆ ಸ್ಮರಣೆ ಬಂದು

ಎಚ್ಚತ್ತು ಕುಳಿತಳು. ಆಕೆಯ ಅವಸ್ಥೆಯನ್ನು ನೋಡಿ ಪಾಂಡವರು ಬಹಳವಾಗಿ ಮರುಗಿ ಮುಂದೆ ತಮ್ಮ ನೆಲೆಗೆ ಸೇರುವ ಮಾರ್ಗವಾವುದೆಂದು ಚಿಂತಿಸುತ್ತಾ ಕುಳಿತಿರುವಾಗ ನೆನಪಿಗೆ ಬಂದು ಘಟೋತ್ಕಚನನ್ನು ಸ್ಮರಿಸಲು ಆ ನಿಮಿಷದಲ್ಲಿಯೇ ಅವನು ತನ್ನ ಅನಂತ ದೈತ್ಯಸಮೂಹದೊಂದಿಗೆ ಅಂತರಿಕ್ಷಮಾರ್ಗದಿಂದ ಅಲ್ಲಿಗೆ ಬಂದಿಳಿದನು. ಅವನನ್ನು ಕಂಡು ಯುಧಿಷ್ಠಿರನು ಕ್ಷೇಮಸಮಾಚಾರವನ್ನು ವಿಚಾರಿಸಿದ ಮೇಲೆ “ಮಗನೇ! ಈ ದ್ರೌಪದಿಯು ಬಹಳ ಬಳಲಿರುವಳು. ಈ ಮುನಿಜನರೂ ಮಳೆಯಲ್ಲಿ ನೆನೆದು ಶ್ರಾಂತರಾಗಿರುವರು. ಆಶ್ರಮವು ಬಹುದೂರದಲ್ಲಿರುವುದು. ಇವರೆಲ್ಲರನ್ನೂ ನೆಲೆಗೆ ಸೇರಿಸುವ ಭಾರವು ನಿನಗೆ ಸೇರಿರುವುದು” ಎಂದು ಹೇಳಿದನು. ಆಗ ಘಟೋತ್ಕಚನು ಎಲ್ಲರನ್ನೂ ಎತ್ತಿಕೊಂಡು ಹೊರಡಿರೆಂದು ತನ್ನ ಪರಿವಾರಕ್ಕೆ ಆಜ್ಞಾಪಿಸಿ ಯುಧಿಷ್ಠಿರನನ್ನು ತಾನು ಎತ್ತಿಕೊಂಡು ಕ್ಷಣಕಾಲದಲ್ಲಿ ಎಲ್ಲರನ್ನೂ ಬದರಿಕಾಶ್ರಮದಲ್ಲಿ ತಂದಿಳುಹಿದನು ಯುಧಿಷ್ಠಿರನು ಆತನ ಸಾಹಸಕ್ಕೆ ಮೆಚ್ಚಿ “ಮಗುವೇ ನಮ್ಮನ್ನೆಲ್ಲಾ ಸ್ಥಳಕ್ಕೆ ಸೇರಿಸಿದೆ. ಇನ್ನು ನೀನು ನಿನ್ನ ನೆಲೆಗೆ ಹೋಗಬಹುದು” ಎಂದು ಅವನಿಗೆ ಅಪ್ಪಣೆ ಕೊಟ್ಟು ಕಳುಹಿದನು.

ಬದರಿಕಾಶ್ರಮದಲ್ಲಿ ಪಾಂಡವರು ಕೆಲವು ಕಾಲವಿದ್ದರು. ಒಂದು ದಿನ ಈಶಾನ್ಯದಿಕ್ಕಿನಿಂದ ಪರಿಮಳ ಭರಿತವಾದ ಗಾಳಿ ಬೀಸಿ ಅಲ್ಲಿದ್ದವರ ಮನಸ್ಸಿಗೆ ಅತ್ಯಾನಂದವನ್ನುಂಟುಮಾಡಿತು. ದ್ರೌಪದಿಯು ಆ ಸುಗಂಧ ವಾಸನೆಯನ್ನು ನೋಡಿ, “ಆಹಾ! ಇದೇನು ಇಂತಹ ಪರಿಮಳವನ್ನು ನಾನಿದುವರೆಗೂ ಕಂಡುದೇ ಇಲ್ಲ” ಎಂದು ಅತ್ಯಾಶ್ಚರ್ಯಗೊಂಡು ಅಲ್ಲಿಯ ಜನರನ್ನು ವಿಚಾರಿಸಲು ಇದು ಸೌಗಂಧಿಕವೆಂಬ ಕಮಲ ಪುಷ್ಪಗಳ ಸೌರಭವು. ಕುಬೇರನ ತೋಟದಲ್ಲಿ ಈ ಪುಷ್ಪಗಳಿರುವುವೆಂದು ಹೇಳಿದರು. ಆಗಲಾ ಪಾಂಚಾಲಿಗೆ ಆ ಕುಸುಮಗಳನ್ನು ಮುಡಿಯಬೇಕೆಂಬ ಬಯಕೆಯುಂಟಾಯಿತು. ತನ್ನ ಇಷ್ಟಾರ್ಥವನ್ನು ಸಲ್ಲಿಸತಕ್ಕವರಾರು? ಧರ್ಮರಾಯನು ವೈರಾಗ್ಯಚಕ್ರವರ್ತಿಯು. ಅರ್ಜುನನು ಬಂದಿಲ್ಲ. ನಕುಲಸಹದೇವರಿಂದ ಈ ಕಾರ್ಯವು ಸಾಧ್ಯವಲ್ಲ. ಭೀಮನನ್ನೇ ಪ್ರಾರ್ಥಿಸಿದರೆ ಸಾಹಸಿಯಾದ ಆತನು ತನ್ನ ಕೋರಿಕೆಯನ್ನೀಡೇರಿಸುವನೆಂದು

ತಿಳಿದು ಆತನ ಬಳಿಗೆ ಹೋಗಿ ತನ್ನ ಮನೋರಥವನ್ನು ತಿಳಿಸಿದಳು. ಆ ವೀರನು ಇದಕ್ಕಾಗಿ ಯೋಚಿಸಬೇಡ, ಕೂಡಲೇ ಹೋಗಿ ತಂದುಕೊಡುವೆನೆಂದು ಹೇಳಿ, ಕೈಯಲ್ಲಿ ಗದೆಯನ್ನು ಧರಿಸಿ ವೇಗದಿಂದ ಹೊರಟುಬರುತ್ತಿದ್ದನು. ಅವನ ಗಮನವೇಗಕ್ಕೆ ಬೆಟ್ಟಗಳೆಲ್ಲಾ ನಡುಗುತ್ತಿದ್ದುವು. ಮಹಾವೃಕ್ಷಗಳೆಲ್ಲಾ ಮುರಿದುಬೀಳುತ್ತಿದ್ದುವು. ಮೃಗಪಕ್ಷಿಗಳು ಹೆದರಿ ಓಡುತ್ತಿದ್ದುವು. ಸಮೀಪದ ಪರ್ವತ ಗುಹೆಯಲ್ಲಿ ಶ್ರೀರಾಮನ ಸೇವಕನಾದ ಆಂಜನೇಯನು ರಾಮಧ್ಯಾನ ಮಾಡಿಕೊಂಡು ಸುಖವಾಗಿ ಕುಳಿತಿದ್ದನು. ಆತನು ಭೀಮಸೇನನ ಸಿಂಹನಾದವನ್ನು ಕೇಳಿ ಕಣ್ತೆರದು ನೋಡಿ ಇವನಾವವೀರನೋ ಈ ಕಡೆಗೇ ಬರುತ್ತಿರುವನು. ಇವನ ಸಾಹಸವನ್ನು ನೋಡೋಣವೆಂದು ತನ್ನ ಬಾಲವನ್ನು ಬೆಳಸಿ ಮಾರ್ಗಕ್ಕೆ ಅಡ್ಡವಾಗಿರಿಸಿಕೊಂಡು ಕುಳಿತಿದ್ದನು. ವೇಗವಾಗಿ ಬರುತ್ತಿದ್ದ ಭೀಮನು ಅವನನ್ನು ನೋಡಿ, ದಾರಿಗೆ ಅಡ್ಡವಾಗಿದ್ದ ಬಾಲವನ್ನು ದಾಟಲಾರದೆ ಸುಮ್ಮನೆ ನಿಂತಿರಲು ಹನುಮಂತನು ಇಂತೆಂದನು.

ಹನು:—ಅಯ್ಯಾ! ನೀನು ಯಾರು? ಎಲ್ಲಿಗೆ ಹೋಗುವೆ?

ಭೀಮ:—ಎಲೈ ವೀರನೇ, ನಾವು ಮನುಷ್ಯರು. ನಮ್ಮ ಪತ್ನಿಯು ದೂರದಿಂದ ಬರುತ್ತಿರುವ ಸೌಗಂಧಿಕ ಕುಸುಮದ ಪರಿಮಳವನ್ನು ಬಯಸಿ, ಆ ಹೂವನ್ನು ತಂದುಕೊಡಬೇಕೆಂದು ಅಪೇಕ್ಷಿಸಿದಳು. ಅದನ್ನು ತಂದುಕೊಡಲಿಕ್ಕೆ ಹೊರಟಿರುವೆನು ದಾರಿಗೆ ಅಡ್ಡವಾಗಿರುವ ಈ ಬಾಲವನ್ನು ಮುದುರಿಕೋ.

ಹನು:—ಅಯ್ಯಾ! ನಾನು ಮುದುಕನು. ಕುಳಿತಿದ್ದ ಸ್ಥಳ ಬಿಟ್ಟು ಏಳುವುದು ನನಗೆ ಕಷ್ಟವಾಗಿದೆ. ನೀನೇ ಅದನ್ನು ತಳ್ಳಿಕೊಂಡು ಮುಂದಕ್ಕೆ ಹೋಗಬಹುದು.

ಈ ಮಾತನ್ನು ಕೇಳಿ ಭೀಮನು ತನ್ನ ಗದೆಯಿಂದ ಆ ಬಾಲವನ್ನು ನೂಕಿದನು. ಅದರ ಒಂದು ಕೂದಲು ಕೂಡ ಕದಲಲಿಲ್ಲ. ರೋಷವು ಹೆಚ್ಚಿತು. ತನ್ನ ಬಲವೆಲ್ಲಾ ಬಿಟ್ಟು ಜಗ್ಗಿಸಿ ನೋಡಿದನು. ಸಾಧ್ಯವಾಗಲಿಲ್ಲ. ಆಗ ಭೀಮನು ಆಶ್ಚರ್ಯಚಕಿತನಾಗಿ ಆತನನ್ನು ಕುರಿತು ಇಂತೆಂದನು.

ಭೀಮ:—ಎಲೈ ಮಹಾತ್ಮನೇ, ಕಪಿರೂಪದಿಂದಿರುವ ನೀನು ಯಾರು? ನಿನ್ನ ಬಾಲವನ್ನು ಕದಲಿಸಲು ಭೀಮಬಲನಾಗಿರುವ ನನ್ನಿಂದ ಸಾಗದೆ ಇರುವುದಲ್ಲಾ! ಎಲ್ಲಿಯೂ ನಾನು ಇಂತಹ ಅಪಜಯ ವನ್ನು ಪಡೆದವನಲ್ಲ. ಅಸಮಸಾಹಸಿಯಾದ ನಿನ್ನ ಪೂರ್ವೋತ್ತ ರವನ್ನು ದಯಮಾಡಿ ಹೇಳು.

ಹನು:—ಅಯ್ಯಾ ಭೀಮನೇ, ನಾವು ವನವಾಸಿಗಳಾದ ವಾನರರು. ಹಣ್ಣು ಹಂಪಲು ತಿಂದುಕೊಂಡು ದುರ್ಬಲರಾಗಿರುವ ನಾವು ಕುಳಿತ ಸ್ಥಳವನ್ನು ಬಿಟ್ಟು ಕದಲಲಾರದೆ ಕುಳಿತಿದ್ದೇವೆ. ಮುದುಕರಾದ ನಮಗೂ ಯೌವನಸ್ಥರಾದ ನಿಮಗೂ ಸರಿಯೆ? ನೀವು ಯಾವ ಕುಲದವರು? ನಿಮ್ಮ ಸಮಾಚಾರವನ್ನು ಹೇಳಿ.

ಭೀಮ:—ಕಪಿವೀರನೇ, ನಾವು ಚಂದ್ರವಂಶದಲ್ಲಿ ಹುಟ್ಟಿದ ಕ್ಷತ್ರಿಯರು. ಪಾಂಡುರಾಯನ ಮಕ್ಕಳು. ನಮ್ಮಣ್ಣನಾದ ಯುಧಿಷ್ಠಿರನೂ ನಾನೂ ಅಲ್ಲದೆ ಮೂವರು ತಮ್ಮಂದಿರಿರುವರು. ಸುಖದಿಂದ ರಾಜ್ಯವಾಳಿಕೊಂಡಿದ್ದ ನಮ್ಮನ್ನು ದಾಯಾದ್ಯರಾದ ಕೌರವರು ಜೂಜಾಟಕ್ಕೆ ಬಲಾತ್ಕರಿಸಿ, ಆಡಿ ಸೋಲಿಸಿ, ಸರ್ವಸ್ವವನ್ನೂ ಅಪ ಹರಿಸಿದರು. ನಮಗೆ ಅರಣ್ಯವಾಸವು ಸಂಭವಿಸಿತು. ಸಹಸ್ರ ದಳದಿಂದ ಕೂಡಿದ ತಾವರೇಹೂವನ್ನು ತಂದುಕೊಡಬೇಕೆಂದು ದ್ರೌಪದಿಯು ಬಯಸಿದುದರಿಂದ ಅದನ್ನು ತರಲು ಹೊರಟುಬಂದೆ ನು. ಮಹಾಶೂರರಾದ ನಿಮ್ಮ ವೃತ್ತಾಂತ ತಿಳಿಯಬೇಕೆಂದು ಅಪೇಕ್ಷೆಯಿದೆ. ದಯಮಾಡಿ ಹೇಳಿರಿ.

ಹನ:—ಭೀಮಾ ನಾವು ತ್ರೇತಾಯುಗದವರು. ಶ್ರೀರಾಮನ ಓಲೆಯ ಕಾರರು. ಸುಗ್ರೀವನ ಮಿತ್ರರು. ನಮ್ಮ ತಾಯಿ ಅಂಜನಾ ದೇವಿ. ತಂದೆ ವಾಯುವು. ನೀನೂ ನಾನೂ ಸಹೋದರರು. ಬಹುದಿನಗಳಿಂದ ನಿನ್ನನ್ನು ನೋಡಬೇಕೆಂಬ ಆಶೆ ಇದ್ದಿತು. ಅದು ಇಂದಿಗೆ ನೆರವೇರಿತು.

ಈ ಮಾತು ಕೇಳಿ ಭೀಮಸೇನನಿಗೆ ಬಹು ಸಂತೋಷವಾಯಿತು. ಕೂಡಲೇ ಅವನು ಆಂಜನೇಯನಿಗೆ ನಮಸ್ಕರಿಸಿ, "ಅಣ್ಣಾ! ನೀನೂ

ನನಗೆ ತಂದೆಯೆಂದು ತಿಳಿದಿರುವೆನು. ಹಲವು ಬಗೆಯ ಕಷ್ಟಗಳಿಗೆ ಸಿಕ್ಕಿ ತೊಳಲುತ್ತಿರುವ ನಮಗೆ ನಿಮ್ಮ ದರುಶನವಾದುದು ಪರಮ ಲಾಭವೆಂದು ತಿಳಿಯುತ್ತೇನೆ. ಈಗ ನಾನು ಬಂದಿರುವ ಕಾರ್ಯವು ನೆರವೇರುವುದಕ್ಕೆ ತಕ್ಕ ಮಾರ್ಗವನ್ನು ತಿಳಿಸಬೇಕು.

ಇದನ್ನು ಕೇಳಿ ಹನುಮಂತನು ಸಂತೋಷದಿಂದ ದಾರಿಯನ್ನು ತೋರಿಸಿ "ತಮ್ಮಾ! ಇದೇ ಮಾರ್ಗವಾಗಿ ಉತ್ತರ ದಿಕ್ಕಿಗೆ ಹೋಗು. ಅಲ್ಲಿ ಕುಬೇರನ ಚೈತ್ರರಥವೆಂಬ ಉದ್ಯಾನವನವಿರುವುದು. ಆ ತೋಟದ ಸರೋವರದಲ್ಲಿ ಸೌಗಂಧಿಕ ಕುಸುಮಗಳು ಬೇಕಾದಷ್ಟಿರುವುವು. ಕುಬೇರ ಭಟರಾದ ಯಕ್ಷರು ಲಕ್ಷ ಮಂದಿ ಅದಕ್ಕೆ ಕಾವಲಾಗಿರುವರು. ವಿವಿಧಾಯುಧಪಾಣಿಗಳಾದ ಅವರಲ್ಲಿ ನಿನ್ನ ಸಾಮರ್ಥ್ಯವನ್ನು ತೋರಿಸಿ, ಜಯಿಸಿದ ಹೊರತು ಪುಷ್ಪಗಳು ನಿನಗೆ ಸಿಕ್ಕಲಾರವು. ನಿನ್ನ ಕಾರ್ಯವು ಕೈಗೂಡಲಿ. ಹೋಗಿ ಬಾ" ಎಂದು ಹರಸಿ ಕಳುಹಿದನು.

ಬಳಿಕ ಭೀಮನು ಅಲ್ಲಿಂದ ಹೊರಟು ಕುಬೇರನ ಉದ್ಯಾನವನಕ್ಕೆ ಹೋಗಿ ಸೇರಿದನು. ಕಾವಲಿದ್ದ ಯಕ್ಷರು ಒಳಕ್ಕೆ ಹೋಗಗೊಡದೆ ಆತನನ್ನು ತಡೆದರು. ಭೀಮಸೇನನು ಅವರೊಂದಿಗೆ ಬಹು ಸಾಹಸದಿಂದ ಕಾದಿ ಅವರನ್ನೆಲ್ಲಾ ಓಡಿಸಿಬಿಟ್ಟನು. ಆಮೇಲೆ ಸರೋವರದಲ್ಲಿಳಿದು ತನಗೆ ಬೇಕಾದಷ್ಟು ಹೂವುಗಳನ್ನು ಕೊಯ್ದುಕೊಂಡು ಬಂದು ಕಾವಲಿನವರನ್ನು ನೋಡಿ "ಇಗೋ, ನಿಮ್ಮ ಕೊಳವು ನಿಮ್ಮದಾಗಿಯೇ ಇದೆ. ನೋಡಿಕೊಳ್ಳಿರಿ. ನಮ್ಮನ್ನು ದೂರಬೇಡಿರಿ" ಎಂದು ಹೇಳಿ ಹಿಂದಿರುಗಿದನು.

ಇತ್ತ ಯುಧಿಷ್ಠಿರನು ಸಭೆಯಲ್ಲಿ ಧೌಮ್ಯಾದಿ ಮುನಿಜನರೊಂದಿಗೆ ಪುಣ್ಯಕಥಾಲಾಪದಿಂದ ಕಾಲಹರಣ ಮಾಡುತ್ತಾ ಕುಳಿತಿರುವಾಗ ಹಲವು ಉತ್ಪಾತಗಳು ತೋರಿದುವು. ಅದನ್ನು ಕಂಡು ಆತನು ವಿಚಾರಗ್ರಸ್ತನಾಗಿ ಈ ದುರ್ನಿಮಿತ್ತಗಳಿಗೆ ಕಾರಣವೇನೆಂದು ಅಲ್ಲಿದ್ದ ಮಹರ್ಷಿಗಳನ್ನು ಕೇಳಲು ಅವರು ವಿಚಾರ ಮಾಡಿ ಭೀಮಸೇನನು ಸೌಗಂಧಿಕ ಕುಸುಮವನ್ನು ತರಲಿಕ್ಕೆ ಹೋಗಿರುವನು. ಅಲ್ಲಿ ಕುಬೇರ ಭಟರೊಂದಿಗೆ ಯುದ್ಧವು ಸಂಭವಿಸಿರುವುದೆಂದು ಹೇಳಿದರು. ಅದನ್ನು ಕೇಳಿ ಧರ್ಮ

ರಾಯನು ದುಗುಡದಿಂದ "ಇದೇನು ಕಷ್ಟಸಂಭವಿಸಿತು? ಭೀಮನು ಏನಾಗಿರುವನೋ? ಅರ್ಜುನನ ಸುದ್ದಿಯೂ ತಿಳಿಯಲಿಲ್ಲ. ನಮಗೆ ಕಷ್ಟದ ಮೇಲೆ ಕಷ್ಟವು ಬಂದೊದಗುತ್ತಿದೆ. ಭಗವಂತನ ಇಷ್ಟವು ಹೇಗಿರುವುದೋ" ಎಂದು ಚಿಂತಾಕ್ರಾಂತನಾಗಿ ಒಡಹುಟ್ಟಿದವರನ್ನು ನೋಡಬೇಕೆಂಬ ಆತುರದಿಂದ ಇದ್ದನು. ಬಳಿಕ ಭೀಮನನ್ನು ಹುಡುಕಿಕೊಂಡು ಬರಬೇಕೆಂದು ಆ ರಾಯನು ಮಾದ್ರೇಯರೊಂದಿಗೆ ಹೊರಟು ಬರುತ್ತಿರಲು ಭೀಮಸೇನನು ಹೂವುಗಳನ್ನು ತೆಗೆದುಕೊಂಡು ಎದುರಿಗೆ ಬಂದನು. ಯುಧಿಷ್ಠಿರನು ಬಹು ಸಂತೋಷದಿಂದ ಅವನನ್ನಪ್ಪಿಕೊಂಡು ಕ್ಷೇಮಸಮಾಚಾರಗಳನ್ನು ವಿಚಾರಿಸಲು ಭೀಮನು ದ್ರೌಪದಿಯ ಇಷ್ಟದಂತೆ ಸೌಗಂಧಿಕಕುಸುಮವನ್ನು ತರಲಿಕ್ಕೆ ಹೋದುದನ್ನೂ, ಮಾರ್ಗದಲ್ಲಿ ಆಂಜನೇಯನ ದರ್ಶನಲಾಭವಾದುದನ್ನೂ, ಕುಬೇರನ ಚೈತ್ರರಥಕ್ಕೆ ಹೋಗಿ ಯಕ್ಷರೊಂದಿಗೆ ಕಾದಿ ಜಯಿಸಿದುದನ್ನೂ ವಿವರಿಸಿ ಹೇಳಿ, ಹೂವುಗಳನ್ನು ತೋರಿಸಿ, ದ್ರೌಪದಿಯ ಕೈಗೆ ಅವುಗಳನ್ನು ಕೊಡಲು ಆ ಸಾಧ್ವಿಯು ಬಹು ಸಂತೋಷದಿಂದ ಅವುಗಳನ್ನು ಪರಿಗ್ರಹಿಸಿ ಭೀಮನ ಪರಾಕ್ರಮವನ್ನು ಬಹಳವಾಗಿ ಕೊಂಡಾಡಿ ಆ ಪುಷ್ಪಗಳನ್ನು ಮುಡಿದುಕೊಂಡಳು. ಅಲ್ಲಿಂದ ಅವರು ಹಿಂದಿರುಗಿ ಬದರಿಕಾಶ್ರಮಕ್ಕೆ ಹೋಗಿ ಅಲ್ಲಿ ಸುಖದಿಂದ ಇದ್ದರು.

ಮತ್ತೊಂದು ದಿನ ಭೀಮಸೇನನು ಬೇಟೆಗಾಗಿ ಘೋರಾರಣ್ಯಕ್ಕೆ ಹೋಗಿ ಮೃಗಯಾವಿಹಾರದಲ್ಲಿದ್ದನು. ಇತ್ತ ಜಟಾಸುರನೆಂಬ ದಾನವವೀರನೊಬ್ಬನು ಬದರಿಕಾಶ್ರಮಕ್ಕೆ ನುಗ್ಗಿ ಅಲ್ಲಿದ್ದ ಬ್ರಾಹ್ಮಣರನ್ನೆಲ್ಲಾ ಹೆದರಿಸಿ ಓಡಿಸಿಬಿಟ್ಟು, ನಕುಲಸಹದೇವರೊಂದಿಗೆ ಬಹಳವಾಗಿ ಕಾದಿ ಸೋಲಿಸಿ, ದ್ರೌಪದಿಯನ್ನೂ, ಯುಧಿಷ್ಠಿರನನ್ನೂ ಎತ್ತಿಕೊಂಡು ಓಡಿಹೋಗುತ್ತಿದ್ದನು. ಅಲ್ಲಿದ್ದವರು ಅವನ ಬೆನ್ನುಹತ್ತಿಹೋಗಿ, ಅವನು ಕೈಗೆ ಸಿಕ್ಕದ ಕಾರಣ ಕಳವಳದಿಂದ ಕರ್ತವ್ಯವರಿಯದೆ ಚಿಂತಿಸುತ್ತಿದ್ದರು. ಕೆಲವರು ಭೀಮಸೇನನನ್ನು ಹುಡುಕಿಕೊಂಡು ಹೋಗಿ, ಅವನನ್ನು ನೋಡಿ "ಎಲೈ ವೀರನೇ, ದುರುಳ ದಾನವನೊಬ್ಬನು ಬಂದು ದ್ರೌಪದಿಯನ್ನು ಎತ್ತಿಕೊಂಡು ಓಡಿದನು, ರಾಜನಾದ ಯುಧಿಷ್ಠಿರನೂ

ಅವನಿಗೆ ಕೈಸೆರೆ ಸಿಕ್ಕಿದನು. ನಕುಲಸಹದೇವರೂ ಸೋತುಬಿಟ್ಟರು ಬ್ರಾಹ್ಮಣರೆಲ್ಲರೂ ಓಡಿಹೋದರು. ನಮ್ಮ ಪರಿವಾರವೆಲ್ಲಾ ಬಹಳ ಕಳ ವಳಗೊಂಡಿದೆ. ರಾಕ್ಷಸರ ಹಾವಳಿ ತಡೆಯುಲು ಸಾಧ್ಯವಿಲ್ಲ ” ಎಂದು ತಿಳಿ ಸಿದರು. ಅದನ್ನು ಕೇಳಿ ಭೀಮನು ಬಹು ರೋಷಗೊಂಡು ಆಗಲೇ ಹೊರಟು ಬಂದು ಆ ಜಟಾಸುರನನ್ನು ತಡೆದು ನಿಲ್ಲಿಸಿ ಅವನೊಂದಿಗೆ ಬಲ ವಾಗಿ ಕಾದಿದನು. ಅವನನ್ನೂ ಆ ರಾಕ್ಷಸನ ಪರಿವಾರವನ್ನೂ ಹೊಡೆದೋ ಡಿಸಿ ತನ್ನವರ ಸೆರೆಯನ್ನು ಬಿಡಿಸಿದನು. ಬಳಿಕಲಾ ರಾಕ್ಷಸನಿಗೂ ಭೀಮ ನಿಗೂ ಘೋರವಾದ ಯುದ್ಧವು ನಡೆಯಿತು. ಭೀಮನು ಆ ಜಟಾಸುರ ನನ್ನು ಕದನದಲ್ಲಿ ಕೊಂದುಬಿಟ್ಟನು. ತರುವಾಯ ಆ ವೀರನು ಅಲ್ಲಿಂದ ಹೊರಟು, ಬರುವಾಗ ಮಾರ್ಗದಲ್ಲಿ ಒಂದು ಬೆಟ್ಟದ ಮೇಲೆ ಮಣಿಮಂತ ನೆಂಬ ದೈತ್ಯನೊಬ್ಬನು ಭೀಮನನ್ನು ಎದುರಿಸಿ ತಡೆದನು. ಅವರಿಬ್ಬ ರಿಗೂ ಬಲವಾದ ಯುದ್ಧವು ನಡೆಯಲು ಭೀಮನು ಆ ರಾಕ್ಷಸನನ್ನು ಕೊಂದನು. ಅವನು ಅಗಸ್ತ್ಯ ಶಾಪದಿಂದ ರಾಕ್ಷಸ ಜನ್ಮವನ್ನು ಪಡೆ ದಿದ್ದ ಯಕ್ಷನು. ತನ್ನ ಶಾಪವು ಪರಿಹರವಾಯಿತೆಂದು ಭೀಮನನ್ನು ಹೊಗ ಳಿ, ಆತನ ಅಪ್ಪಣೆ ಪಡೆದು ಹೊರಟು ಹೋದನು. ಬಳಿಕ ಭೀಮನು ಬದರಿಕಾಶ್ರಮಕ್ಕೆ ಬಂದು ಅಣ್ಣತಮ್ಮಂದಿರ ಮನಸ್ಸಂತೋಷ ಪಡಿಸಿ, ನಡೆದ ವೃತ್ತಾಂತವನ್ನೆಲ್ಲಾ ವಿವರಿಸಲು ಯುಧಿಷ್ಠಿರನು ಆತನನ್ನು ಮನ್ನಿ ಸಿದನು.

ಒಂದೆರಡು ದಿನಗಳು ಕಳೆದ ಮೇಲೆ ದೇವೇಂದ್ರನ ರಥದ ಮೇಲೆ ಕುಳಿತು ಅರ್ಜುನನು ಬಂದಿಳಿದನು. ಬಹು ದಿನಗಳಿಂದ ತಮ್ಮನ್ನಗಲಿದ್ದ ಆ ವೀರನನ್ನು ನೋಡಿ ಸಹೋದರರಿಗೆ ಅತ್ಯಾನಂದವಾಯಿತು. ದ್ರೌಪ ದಿಯ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವರೆಲ್ಲರೂ ಪಾರ್ಥನ ಕ್ಷೇಮ ವನ್ನು ವಿಚಾರಿಸಿದ ಮೇಲೆ ಇಂದ್ರನ ಯೋಗಕ್ಷೇಮವನ್ನು ಕೇಳಿ ತಿಳಿದು ಕೊಂಡು, ಆತನ ಸಾರಥಿಯಾದ ಮಾತಲಿಯನ್ನು ಮನ್ನಿಸಿ ಕಳುಹಿದರು. ಬಳಿಕ ಅರ್ಜುನನು ತಾನು ಹೊರಟಂದಿನಿಂದ ಅದುವರೆಗೆ ನಡೆದ ಯಾವ ದ್ವೃತ್ತಾಂತವನ್ನೂ ವಿವರಿಸಿ ಹೇಳಲು ಯುಧಿಷ್ಠಿರಾದಿಗಳು ಆತನ ಸಾಹ ಸವನ್ನು ಬಹಳವಾಗಿ ಹೊಗಳಿ, ದೇವತಾಸ್ತ್ರಗಳು ಲಭ್ಯವಾದುದಕ್ಕೆ ಬಹು

ಸಂತೋಷಪಟ್ಟರು. ಅರ್ಜುನನು ಯುಧಿಷ್ಠಿರನಿಗೆ ವಂದಿಸಿ, “ಅಣ್ಣಯ್ಯಾ! ಇವೆಲ್ಲವೂ ತಮ್ಮ ಅನುಗ್ರಹ ಪ್ರಭಾವವು. ಮತ್ತು ನಮ್ಮ ಹಿತಚಿಂತಕನಾದ ಶ್ರೀ ಕೃಷ್ಣ ಪರಮಾತ್ಮನ ಕರುಣಾಬಲವು. ನಮ್ಮ ಕಷ್ಟಕಾಲವು ಕಳೆಯುತ್ತಾ ಬಂದಿದೆ. ಇಷ್ಟು ದಿನಗಳ ತನಕ ಸೈರಿಸಿಕೊಂಡಿದ್ದವರು ಇನ್ನು ಕೆಲವು ದಿನಗಳು ತಡೆಯಲಾರೆವೆ? ಭಗವತ್ಕೃಪೆಯಿಂದ ನಮಗೆ ಶುಭವುಂಟಾಗುವುದು. ಚಿಂತಿಸಬೇಡಿರಿ”, ಎಂದು ಅವರನ್ನು ಸಮಾಧಾನ ಪಡಿಸಿದನು. ಆ ವೀರರು ಭಗವದ್ಧ್ಯಾನ ಮಾಡಿಕೊಂಡು ಆ ವನದಲ್ಲಿ ಸುಖವಾಗಿದ್ದರು.

---

## ಎಂಟನೆಯ ಸಂಧಿ.

---

ಸೂಚನೆ:—ವನದಲ್ಲಿ ಬೇಟೆಗೆ ಹೋಗಿದ್ದ ಭೀಮಸೇನನು ಶಾಪಗ್ರಸ್ತನಾಗಿ ಸರ್ಪರೂಪದಿಂದಿದ್ದ ನಹುಷನಿಂದ ಬದ್ಧನಾಗಿ ನರಳುತ್ತಿರಲು ಯುಧಿಷ್ಠಿರನು ಅಲ್ಲಿಗೆ ಹೋಗಿ ಅವನ ಪ್ರಶ್ನೆಗಳಿಗೆ ಉತ್ತರ ಕೊಟ್ಟು ಧರ್ಮಸೂಕ್ಷ್ಮಗಳನ್ನು ವಿವರಿಸಿ ಹೇಳಲು ಅವನು ಕಟ್ಟನ್ನು ಕಳಚಿ, ಭೀಮನನ್ನು ಬಿಟ್ಟು ಶಾಪವಿಮೋಚನೆ ಹೊಂದಿದನು.

ಅರ್ಜುನನು ಒಂದು ದಿನ ಪಾಶುಪತಾದ್ಯಸ್ತ್ರಗಳ ಮಹಿಮೆಯನ್ನು ತನ್ನ ಸಹೋದರರಿಗೆ ತೋರಿಸಬೇಕೆಂದು, ಪ್ರಾತಃಕಾಲದಲ್ಲಿಯೇ ಎದ್ದು ಯುಧಿಷ್ಠಿರನಿಗೆ ತಿಳಿಸಲು ಆತನು ಸಂತೋಷದಿಂದ ಒಪ್ಪಿ, ಮುನಿಜನರನ್ನು, ವನವಾಸಿಗಳಾದ ಇತರರನ್ನೂ ಕರೆಯಿಸಿಕೊಂಡನು. ಭೀಮಾದಿ ಸೋದರರರೂ ನೋಡಲಿಕ್ಕೆ ಸಿದ್ಧರಾಗಿ ಬಂದು ಕುಳಿತರು. ಆಗ ಅರ್ಜುನನು ಹಿರಿಯಣ್ಣನಿಗೆ ನಮಸ್ಕಾರಮಾಡಿ, ಮಹರ್ಷಿಗಳ ಆಶೀರ್ವಾದ ಪಡೆದು, ತನ್ನ ಮನಸ್ಸಿನಲ್ಲಿ ಪರಮೇಶ್ವರನನ್ನು ಧ್ಯಾನಿಸಿ, ಗಾಂಡಿವದ ಗೌಸಣಿಗೆಯನ್ನು ತೆಗೆದು, ಕೊಪ್ಪಿನಲ್ಲಿ ಸಿಂಜಿನಿಯನ್ನು ಸಿಕ್ಕಿಸಿ, ಹಿಡಿದೆಳೆಯಲು ದಿಗಂತವು ಒಡೆದುಹೋಗುವಂತೆ ಮಹಾಧ್ವನಿಯಾಯಿತು. ಆ ಧನುಷ್ಟಂಕಾರವನ್ನು ಕೇಳಿ ಜನರೆಲ್ಲಾ ಬೆದರಿ “ಇದೇನು? ಪ್ರಳಯ ಕಾಲವು ಬಂದಂತೆ ಇದೆ. ಲಯಭೈರವನ ಹುಂಕಾರವೋ, ಪ್ರಪಂಚವನ್ನು

ಸಂಹರಿಸತಕ್ಕ ಮೃತ್ಯುವಿನ ಆರ್ಭಟವೋ, ತ್ರಿವಿಕ್ರಮನ ಪಾದಕ್ಕೆ ಸಿಕ್ಕಿ ಒಡೆದುಹೋದ ಬ್ರಹ್ಮಾಂಡದ ಗರ್ಜನೆಯೋ, ಮುಂದೇನು ಗತಿ" ಎಂದು ಹೆದರುತ್ತಿದ್ದರು. ದೇವತೆಗಳೆಲ್ಲರೂ ನಡುಗಿದರು. ಇಂದ್ರನು ಅರ್ಜುನನ ಸಾಹಸವನ್ನು ನೋಡಬೇಕೆಂದು ಯಮಾದಿ ಲೋಕಪಾಲಕರನ್ನು ಕರೆದುಕೊಂಡು ವಿಮಾನದಲ್ಲಿ ಕುಳಿತು ಬಂದು ಆಕಾಶಮಾರ್ಗದಲ್ಲಿ ನೋಡುತ್ತಿದ್ದನು.

ನೋಟಕ್ಕೆ ಬಹು ಮಂದಿ ಬಂದು ಸೇರಿದರು. ಅರ್ಜುನನು ಮೊದಲು ಐಂದ್ರಾಸ್ತ್ರವನ್ನು ಬಿಲ್ಲಿಗೆ ಹೂಡಿ ಪ್ರಯೋಗಿಸಿದನು. ಮಹತ್ತಾದ ಹೊಗೆ ಹೊರಟು ದಿಕ್ಕುಗಳನ್ನೆಲ್ಲಾ ಕವಿಯಿತು. ಸೂರ್ಯನ ರಥವು ಮುಂದಕ್ಕೆ ಹೊರಡದೆ ನಿಂತುಹೋಯಿತು. ಸಮುದ್ರವು ಅಲ್ಲೋಲ ಕಲ್ಲೋಲವಾಯಿತು. ಊರ್ಧ್ವಲೋಕಗಳೂ ಅಧೋಲೋಕಗಳೂ ಪಲ್ಲಟವಾಗಿ ಎಲ್ಲಿ ಉರುಳುವುವೋ ಎಂದು ಎಲ್ಲರೂ ಬೆದರಿದರು. ಇದೇನು ಆಶ್ಚರ್ಯವೆಂದು ನಾರದ ಮಹರ್ಷಿಯು ಅಲ್ಲಿಗೆ ಬಂದನು. ಆತನು ಅರ್ಜುನನನ್ನು ನೋಡಿ "ಅಯ್ಯಾ! ಇದೇನು? ಇಂತಹ ಉಪದ್ರವವನ್ನೇಕೆ ಮಾಡುವೆ? ಲೋಕವು ಬೆಂದುಹೋಗುವುದಲ್ಲಾ! ಸಾಕು, ಉಪಸಂಹರಿಸು. ಇದು ಬ್ರಹ್ಮಾಸ್ತ್ರವು. ಸಮಸ್ತ ಲೋಕಗಳನ್ನೂ ಬಲಿಕೊಟ್ಟರೂ ಇದಕ್ಕೆ ತೃಪ್ತಿ ಇಲ್ಲ. ದೇವತಾಸ್ತ್ರಗಳ ಮಹಿಮೆಯೂ ಸಾಮಾನ್ಯವಾದುದಲ್ಲ. ಪಾಶುಪತಾಸ್ತ್ರಕ್ಕೆ ತಕ್ಕ ಆಹಾರವನ್ನು ಈಗ ಎಲ್ಲಿಂದ ತಂದೊಪ್ಪಿಸುವೆ? ಜಗತ್ಸಂಹಾರ ಕಾಲದಲ್ಲಿ ಉಪಯೋಗಿಸತಕ್ಕ ಬಾಣಗಳನ್ನು ಈಗಲೇ ಪ್ರಯೋಗಿಸಿ ಕೆಡಿಸಬೇಡ. ಲಕ್ಷ್ಯವಿಲ್ಲದೆ ವಿನೋದಕ್ಕಾಗಿ ಅಲಕ್ಷ್ಯದಿಂದ ದಿವ್ಯಾಸ್ತ್ರಗಳ ಶಕ್ತಿಯನ್ನು ಕೆಡಿಸಿಕೊಂಡರೆ ನೀನು ಇವುಗಳನ್ನು ಸಂಪಾದಿಸಿ ಫಲವೇನು? ನಿಮ್ಮಣ್ಣನು ಪಾಶುಪತಾಸ್ತ್ರದ ಬಲವನ್ನು ನೋಡಲಪೇಕ್ಷಿಸಿದರೆ ಸ್ವಲ್ಪ ಕಾಲ ಸೈರಿಸಿಕೊಂಡಿರಹೇಳು. ಇಷ್ಟರಲ್ಲಿಯೇ ಜಗತ್ಸಂಹಾರಹೇತುವಾದ ಮಹಾಯುದ್ಧವು ಸಂಭವಿಸುವುದು. ಆ ವೇಳೆಯಲ್ಲಿ ಇದನ್ನುಪಯೋಗಿಸಿ, ತೋರಿಸಬಹುದು. ಈಗ ಈ ಕಾರ್ಯ ಮಾಡಬೇಡ. ನಿಲ್ಲಿಸು" ಎಂದು ತಡೆದನು. ಅರ್ಜುನನು ಆ ಮಹರ್ಷಿಯ ಮಾತನ್ನು ಮನ್ನಿಸಿ, ಯುಧಿಷ್ಠಿರನಿಗೆ ತಿಳಿಸಿ, ಮುಂದಿ

ನ ಘೋರ ಯುದ್ಧದವರೆಗೆ ತಡೆಯಬೇಕೆಂದು ನಿಶ್ಚಯಿಸಿದನು. ದೇವತೆ
ಗಳೂ, ಮುನಿಜನರೂ, ಇತರರೂ ತಮ್ಮ ನೆಲೆಗಳಿಗೆ ಹೋದರು.

ಕೆಲವು ದಿನಗಳು ಕಳೆದ ಬಳಿಕ ಪಾಂಡವರು ಕಾಮ್ಯಕವನವನ್ನು
ಬಿಟ್ಟು ಹೊರಟು, ಯಾಮುನವೆಂಬ ಬೆಟ್ಟಕ್ಕೆ ಬಂದರು. ಹಿಡಿಂಬೀಪುತ್ರ
ನಾದ ಘಟೋತ್ಕಚನು ಅವರನ್ನೂ ಅವರ ಪರಿಜನರನ್ನೂ ಸುಲಭವಾಗಿ
ಬೆಟ್ಟದ ಮೇಲಕ್ಕೇರಿಸಿದನು. ಅಲ್ಲಿ ಅವರು ಕೆಲವು ಕಾಲ ವಾಸಮಾಡಿ
ಕೊಂಡಿದ್ದು ಕುಮಾರಸ್ವಾಮಿಯ ಆಶ್ರಮಕ್ಕೆ ಹೋಗಿ ಒಂದು ವರುಷ
ಕಾಲವಿದ್ದರು. ಒಂದು ದಿನ ಪುಳಿಂದರನಾಯಕನೊಬ್ಬನು ಭೀಮಸೇನನ
ಬಳಿಗೆ ಬಂದು ಕೈಮುಗಿದು "ಎನ್ನೊಡೆಯಾ! ಕಾಡಿನಲ್ಲಿ ದುಷ್ಟಮೃಗ
ಗಳು ಹೆಚ್ಚಿಹೋಗಿವೆ. ಅವುಗಳ ಕಾಟವನ್ನು ತಡೆಯಲಿಕ್ಕೆ ಅಸಾಧ್ಯವು.
ಬೇಟೆಗೆ ತಕ್ಕ ಸಾಧನಗಳನ್ನೆಲ್ಲ ಸಿದ್ಧಪಡಿಸಿರುವೆನು. ದಯಮಾಡಿ ಬರ
ಬೇಕೆಂದು" ಪ್ರಾರ್ಥಿಸಿದನು. ಭೀಮನು ಅವನ ಕೋರಿಕೆಯಂತೆ
ಶಬರಸೇನೆಯೊಂದಿಗೆ ಹೊರಟು ಘೋರಾರಣ್ಯಕ್ಕೆ ಹೋದನು. ಕಾಡಿ
ನಲ್ಲಿ ಸಿಂಹಗಳು, ಹುಲಿಗಳು, ಕರಡಿಗಳು, ಕಾಡುಕೋಣಗಳು, ಮುಳ್ಳು
ಹಂದಿಗಳು, ಮುಂತಾದ ಪ್ರಾಣಿಗಳೆಲ್ಲಾ ಹೆದರಿ ಓಡಿಹೋಗುತ್ತಿದ್ದುವು.
ಬಲೆಗಳನ್ನು ಬೀಸಿ ಕೆಲವನ್ನು ಹಿಡಿದರು. ಸೀಳುನಾಯಿಗಳನ್ನು ಬಿಟ್ಟು
ಕೆಲವು ಪ್ರಾಣಿಗಳನ್ನು ಕೊಂದರು. ಬಾಣಗಳನ್ನೂ ಆಯುಧಗಳನ್ನೂ
ಪ್ರಯೋಗಿಸಿ ಹಲವು ಮೃಗಗಳನ್ನು ವಧಿಸಿದರು. ಭೀಮಪರಾಕ್ರಮ
ನಾದ ಭೀಮಸೇನನು ಹುಲಿ ಕರಡಿ ಸಿಂಹ ಮೊದಲಾದವುಗಳನ್ನು ಬಹಳ
ವಾಗಿ ಬೇಟೆಯಾಡಿದನು. ಇವನ ಗರ್ಜನೆಗೆ ಬೆದರಿ ದೊಡ್ಡ ಹಂದಿಯೊಂದು
ತಪ್ಪಿಸಿಕೊಂಡು ಓಡಿಹೋಗಿ ಹಲವು ಮೆಳೆಗಳನ್ನು ದಾಟಿ, ಒಂದು
ಹೆಬ್ಬಾವು ವಾಸಮಾಡಿಕೊಂಡಿದ್ದ ಸ್ಥಳಕ್ಕೆ ಸೇರಿ ಅಡಗಿಕೊಂಡಿತು. ಅದ
ನ್ನು ಅಟ್ಟಿಕೊಂಡು ಹೋದ ಭೀಮಸೇನನು ಓಡಿಹೋಗುವ ಆತುರದಲ್ಲಿ
ಅಲ್ಲಿ ಮಲಗಿದ್ದ ಹೆಬ್ಬಾವಿನ ಮೇಲೆ ಕಾಲಿಟ್ಟನು. ಅದು ಅತಿ ರೋಷಾ
ವೇಶದಿಂದ ಅವನ ಕಾಲುಗಳಿಂದ ಎದೆಯ ತನಕ ಬಿಗಿದು ಸುತ್ತಿಕೊಂಡಿ
ತು. ಆ ವೀರನು ಗಾಬರಿಗೊಂಡು ಹಾವಿನ ತೆಕ್ಕೆಯನ್ನು ಬಿಡಿಸಿಕೊಳ್ಳ
ಲಿಕ್ಕೆ ಕಾಲನ್ನು ಝಾಡಿಸಹೋದನು. ಸಾಧ್ಯವಾಗಲಿಲ್ಲ. ಕೊಡಹಲಿಕ್ಕೆ

ಯತ್ನಿಸಿದ ಹಾಗೆಲ್ಲ ಬಿಗಿತವು ಹೆಚ್ಚುತ್ತ ಬಂದಿತು. ಪೂರ್ವದಲ್ಲಿ ದೇವಾ ಸುರರು ಮಂದರಪರ್ವತವನ್ನು ಸಮುದ್ರದಲ್ಲಿಟ್ಟು ಕಡೆಯುವುದಕ್ಕೆ ಆದಿ ಶೇಷನನ್ನು ಕಟ್ಟಿ ಬಿಗಿದಂತೆ ಭೀಮಸೇನನನ್ನು ಆ ಅಜಗರವು ಬಿಗಿದಿರಲು ಅವನ ಯತ್ನವು ಸಾಗದೆ ಭಯದಿಂದ ಕಳವಳಗೊಂಡು, ಕೋಪದಿಂದ ತನ್ನ ಗದೆಯನ್ನು ಕೊಂಡು ಅದನ್ನು ಬಲವಾಗಿ ತಿವಿದನು. ಅದು ಆ ಪೆಟ್ಟನ್ನು ಲಕ್ಷ್ಯಮಾಡದೆ ಮತ್ತಷ್ಟು ಬಲವಾಗಿ ಅವನನ್ನು ಹಿಡಿದು ಬಿಗಿಯಿತು. ಆಗ ಭೀಮನು ಗಿಡುಗನ ಕೈಗೆ ಸಿಕ್ಕಿದ ಗಿಳಿಯಂತೆ ಸಿಕ್ಕಿಕೊಂಡು ನರಳು ತ್ತಿದ್ದನು.

ಅತ್ತ ಯುಧಿಷ್ಠಿರನಿಗೆ ಕೆಲವು ದುರ್ನಿಮಿತ್ತಗಳು ಕಂಡುಬಂದು ವು. ಎಡಗಣ್ಣು ದುರಿತು. ಈ ಉತ್ಪಾತದ ಫಲನೇನೆಂದು ಆ ರಾಯನು ಧೌಮ್ಯನನ್ನು ಕೇಳಲು ಆತನು ರಾಜರಿಗೆ ಇದು ಅರಿಷ್ಟಸೂಚಕವೆಂದನು. ಯುಧಿಷ್ಠಿರನು ಹೆದರಿ ಚಿಂತಿಸುತ್ತ ಕುಳಿತನು. ಬಹಳ ಹೊತ್ತಾದರೂ ಭೀಮಸೇನನು ಮನೆಗೆ ಬರಲಿಲ್ಲ. ಆಗ ಅವನನ್ನು ಹುಡುಕಿಕೊಂಡು ಯುಧಿಷ್ಠಿರನೇ ಹೊರಟನು. ಅವನ ಸಂಗಡ ಧೌಮ್ಯಾದಿ ಮುನಿಜನ ರೂ ಇದ್ದರು. ಭೀಮನ ಹೆಜ್ಜೆಯ ಗುರುತುಗಳನ್ನು ಅನುಸರಿಸಿಕೊಂ ಡು ಹೋಗಿ ಅವನಿದ್ದ ಸ್ಥಳವನ್ನು ಸೇರಿದನು. ಅಲ್ಲಿ ಮಹಾಶೂರನಾದ ಭೀಮನು ಅಜಗರ ಪಾಶದಲ್ಲಿ ಬದ್ಧನಾಗಿದ್ದನು. ನಿಟ್ಟುಸಿರು ಬರುತ್ತಿದೆ. ಬೆವರು ಸುರಿಯುತ್ತಿದೆ. ತಲೆಕೂದಲುಗಳೆಲ್ಲಾ ಕೆದರಿಹೋಗಿವೆ. ಹಿಡಿ ದಿದ್ದ ಗದೆಯು ಕೆಳಮುಖವಾಗಿ ಜೋಲಾಡುತ್ತಿದೆ. ಕಣ್ಣುಗಳು ಕುಳಿ ಬಿದ್ದುಹೋಗಿವೆ. ಕಂಠಸ್ವರವು ಕುಗ್ಗಿದೆ. ನಿತ್ರಾಣನಾಗಿದ್ದ ತಮ್ಮ ನನ್ನು ನೋಡಿ ಯುಧಿಷ್ಠಿರನಿಗೆ ಬಹು ವ್ಯಸನವಾಯಿತು. ಆಗ ಆತನು "ಅಯ್ಯೋ! ಇನ್ನೂ ನಮ್ಮ ಗ್ರಹಚಾರವು ಹರಿದಿಲ್ಲವೆ? ಹಿಂದೆ ಎಷ್ಟೆ ಷ್ಟೋ ಕಷ್ಟಗಳನ್ನನುಭವಿಸಿದೆವು. ಮೇಲೆ ಮೇಲೆ ಸಮುದ್ರತರಂಗ ಗಳಂತೆ ವಿಪತ್ತುಗಳು ಬಂದು ಮುಟ್ಟುತ್ತಲೇ ಇವೆಯಲ್ಲಾ! ಎಲೈ ಹತ ವಿಧಿಯೇ! ನಿನಗೆ ಕರುಣೆಯುಂಟಾಗುವುದೆಂದಿಗೆ? ಹತ್ತುಸಾವಿರ ಆನೆ ಗಳ ಬಲವುಳ್ಳ ಭೀಮಸೇನನ ಸತ್ವವೇ ಹೀಗೆ ಕುಗ್ಗಿಹೋಯಿತೆಂದರೆ, ಈ ಹೆಬ್ಬಾವಿನ ಶಕ್ತಿಯೆಷ್ಟಿರಬಹುದೋ?" ಎಂದು ಚಿಂತಿಸುತ್ತಾ

ಭೀಮನನ್ನು ನೋಡಿ ಕಣ್ಣೀರು ಸುರಿಸುತ್ತಾ "ತಮ್ಮಾ, ಇದೇನು! ಈ ಹಾವಿನ ಬಂಧಕ್ಕೆ ಹೇಗೆ ಸಿಕ್ಕಿಕೊಂಡೆ? ಇದು ನಿನಗೆ ವಿನೋದವೋ, ಅಥವಾ ನಿನ್ನ ಪ್ರಾಣಪರೀಕ್ಷೆಗೆ ವಿಧಿಯು ಹೂಡಿದ ಮಾಟವೋ? ನಮ್ಮ ಹೀನಸ್ಥಿತಿಯನ್ನು ಒಂದೊಂದಾಗಿ ನೆನಸಿಕೊಂಡರೆ ಬಹು ದುಃಖಬರುವುದು, ಮಾತನಾಡಪ್ಪಾ!" ಎಂದನು. ಅದನ್ನು ಕೇಳಿ ಭೀಮನು ಕಣ್ಣು ತೆರೆದು ಅಣ್ಣನನ್ನು ನೋಡಿದನು. ಬಾಯಿಂದ ಮಾತುಗಳೇ ಹೊರಡಲಿಲ್ಲ. ಹಾವು ಕೊರಳನ್ನು ಸುತ್ತಿಕೊಂಡಿದೆ. ಬೆರಳುಸನ್ನೆಯಿಂದ ತನ್ನ ಶಕ್ತಿ ಕುಗ್ಗಿರುವುದನ್ನು ಸೂಚಿಸಿ ತಲೆ ತಗ್ಗಿಸಿಕೊಂಡನು. ಆಗ ಧರ್ಮರಾಯನು ಆ ಸರ್ಪವನ್ನು ಕುರಿತು ಹೀಗೆ ಕೇಳಿದನು

ಯುಧಿ:—ಎಲೈ ಸರ್ಪರಾಜನೇ! ಈ ಭೀಮನು ಯಾವ ಅಪರಾಧ ಮಾಡಿದನು; ಅಥವಾ ನೀನೇ ಈ ಅನ್ಯಾಯದ ಕೃತ್ಯಕ್ಕೆ ಯತ್ನಿಸಿದೆಯೋ? ಪರಪೀಡನವು ಪಾಪಹೇತುವೆಂಬುದು ನಿನಗೆ ತಿಳಿಯದೆ ಹೋಯಿತೆ? ಅಯ್ಯಾ! ಸರ್ಪರೂಪದಿಂದ ಇರುವ ನೀನು ಯಾರು? ರಾಕ್ಷಸನೋ, ದೇವತೆಯೋ, ಗಂಧರ್ವನೋ, ಯಕ್ಷನೋ, ದೇವೇಂದ್ರನೋ, ನಿನ್ನ ನಿಜಸ್ಥಿತಿಯನ್ನು ಹೇಳು.

ಸರ್ಪ:—ಅಯ್ಯಾ! ನೀನು ಯಾರು? ನಿನ್ನ ಹೆಸರೇನು! ನೀನು ಬ್ರಾಹ್ಮಣನೋ, ಕ್ಷತ್ರಿಯನೋ, ವೈಶ್ಯನೋ, ಶೂದ್ರನೋ, ನಿನಗೆ ಈತನು ಏನಾಗಬೇಕು? ನೀನು ಈ ಕಾರಡವಿಗೆ ಏತಕ್ಕೆ ಬಂದೆ?

ಯುಧಿ:—ಎಲೈ ಫಣಿಪತಿಯೇ, ಚಂದ್ರವಂಶದಲ್ಲಿ ಜನಿಸಿ ಪ್ರಖ್ಯಾತನಾದ ಪಾಂಡುರಾಯನ ಮಗನಾದ ನನಗೆ ಯುಧಿಷ್ಠಿರನೆಂದು ಹೆಸರು. ನನ್ನ ನಾಲ್ವರು ತಮ್ಮಂದಿರಲ್ಲಿ ಈ ಭೀಮನೆಂಬುವನು ದೊಡ್ಡವನು. ನಮ್ಮಯ್ವರಿಗೂ ಪಂಚಪಾಂಡವರೆಂದು ಹೆಸರು. ದುರ್ದೈವದಿಂದ ನಮ್ಮ ಐಶ್ವರ್ಯವೆಲ್ಲವೂ ತೊಲಗಿಹೋಯಿತು. ಕೌರವರು ಕಪಟದ್ಯೂತದಲ್ಲಿ ನಮ್ಮನ್ನು ಸೋಲಿಸಿ ವನವಾಸಕ್ಕೆ ಕಳುಹಿದರು. ಇಲ್ಲಿ ಹೇಗೋ ಕಷ್ಟದಿಂದ ಜೀವಿಸಿಕೊಂಡು ಕಾಲಹರಣ ಮಾಡುತ್ತಿದ್ದರೂ ವಿಧಿಯು ಸೈರಿಸಲಾರದೆ ಮೇಲೆ ಮೇಲೆ ತೊಂದರೆಗಳನ್ನೆ ತಂದು ಒಡ್ಡುತ್ತಿರುವುದು. ನನ್ನ ಪ್ರಿಯಭ್ರಾತೃವಾದ ಈ ಭೀ

ಮನನ್ನು ನೀನು ಬಂಧಿಸಿಬಿಟ್ಟುದರಿಂದ ನನ್ನ ವ್ಯಥೆ ಮತ್ತಷ್ಟು ಹೆಚ್ಚಿತು. ಪರಹಿಂಸೆಯು ಉತ್ತಮರಿಗೆ ತಕ್ಕುದಲ್ಲ. ಅಯ್ಯಾ! ನೀನು ಇವನನ್ನು ಬಿಡಬಹುದಾದರೆ ಬಿಟ್ಟುಕೊಡು.

ಸರ್ಪ:—ಎಲೈ ಯುಧಿಷ್ಠಿರನೇ, ನೀನು ಧರ್ಮಸೂಕ್ಷ್ಮಗಳನ್ನು ಬಲ್ಲವನು. ವೇದವಿಹಿತವಾದ ಧರ್ಮವನ್ನು ಎಲ್ಲರೂ ಆದರಿಸಲೇಬೇಕು. ಕ್ಷತ್ರಿಯನಾದ ನಿನ್ನ ಧರ್ಮವು ಯಾವುದು ? ಕೈಗೆ ಆಯುಧವನ್ನು ತೆಗೆದುಕೊಂಡು ಯುದ್ಧಮಾಡು. ನಿನ್ನ ಒಡಹುಟ್ಟಿದವನನ್ನು ಬಿಡುವೆನು. ಧರ್ಮಸ್ವರೂಪವಿಂತದೇ ಎಂದು ನಿಸ್ಸಂಶಯವಾಗಿ ಹೇಳುವುದು ಕಷ್ಟ. ಬ್ರಾಹ್ಮಣರಿಗೆ ಸಮ್ಮತವಾದ ಧರ್ಮಸ್ಥಿತಿಯನ್ನು ತಿಳಿಯಬೇಕಾಗಿದೆ. ನಿಜವಾದ ಬ್ರಾಹ್ಮಣನು ಯಾರು ? ಬ್ರಾಹ್ಮಣ್ಯ ಧರ್ಮವು ಎಂತದು ? ಧರ್ಮಜ್ಞನಾದ ನೀನು ದಯಮಾಡಿ ಹೇಳು.

ಯುಧಿ:—ಎಲೈ ಸರ್ಪನೇ ಕೇಳು. ಉತ್ತಮವಂಶದಲ್ಲಿ ಹುಟ್ಟಿದ ಮಾತಾಪಿತೃಗಳಿಂದ ಜನಿಸಿದವನಾಗಿಯೂ, ಪರಿಶುದ್ಧನಾಗಿಯೂ ನಿರಂತರವೂ ಅಗ್ನಿಹೋತ್ರವನ್ನು ಕಾಪಾಡಿಕೊಂಡು, ವೇದಪಾರಾಯಣ ಮಾಡುತ್ತಾ, ಸತ್ಯ, ಅಹಿಂಸೆ, ಸಂತುಷ್ಟಿ ಎಂಬ ಗುಣತ್ರಯದಿಂದ ಒಪ್ಪುವವನೇ ನಿಜವಾದ ಬ್ರಾಹ್ಮಣನು. ಅವನೇ ಪೂಜ್ಯನು. ಇವೇ ಬ್ರಾಹ್ಮಣ್ಯ ಧರ್ಮವೆಂದು ತಿಳಿ.

ಸರ್ಪ:—ಎಲೈ ರಾಜನೇ, ನೀನು ಹೇಳಿದ್ದು ಯುಕ್ತವು. ಅಧ್ಯಯನವೆಂದರೇನು ? ದಮವೆಂದರೇನು ? ಸತ್ಯದ ಲಕ್ಷಣವಾವುದು ? ಅಹಿಂಸೆಯೆಂದರೇನು ? ಪರಿತೋಷದ ಸ್ವರೂಪವಾವುದು ? ವಿವರಿಸಿ ಹೇಳು.

ಯುಧಿ:—ಎಲೈ ಸರ್ಪರಾಜನೇ, ಕಣ್ಣು ಮೊದಲಾದ ಪಂಚೇಂದ್ರಿಗಳನ್ನು ಸ್ವೇಚ್ಛೆಯಾಗಿ ಬಿಡದೆ ಸ್ವಾಧೀನದಲ್ಲಿಟ್ಟುಕೊಂಡಿರುವುದೇ ದಮವೆನಿಸುವುದು. ವೇದಪಾರಾಯಣ ಮಾಡಿಕೊಂಡಿರುವುದೇ ಸ್ವಾಧ್ಯಾಯವೆನಿಸುವುದು. ಇತರರಿಗೆ ಭಯವನ್ನು ಉಂಟುಮಾಡದೆ ಇರುವುದೇ ಅಹಿಂಸೆಯು. ದೇವರು ಅನುಗ್ರಹಿಸುವಷ್ಟರಿಂದಲೇ ತೃಪ್ತಿ

ಗೊಂಡಿರುವುದೇ ಪರಿತೋಷವೆನಿಸುವುದು. ಸತ್ಯವೆಂದರೆ ಎಂದಿಗೂ ಸುಳ್ಳಾಡದಿರುವುದು. ಬ್ರಾಹ್ಮಣ್ಯಕ್ಕೆ ಇದೇ ಮೂಲವು. ಸತ್ಯವುಳ್ಳವನೇ ವಿಪ್ರನು. ಸತ್ಯದಿಂದ ಲೋಕತ್ರಯಗಳನ್ನೂ ಜಯಿಸಬಹುದು. ಸತ್ಯವೇ ಅಧ್ಯಯನ, ಸತ್ಯವೇ ನಿತ್ಯಕರ್ಮ, ಸತ್ಯವೇ ಜಪವು, ಸತ್ಯವೇ ಹೋಮವು. ಸತ್ಯವೇ ತಪಸ್ಸು. ಇದೇ ಯಜ್ಞವು. ಇದೇ ಧ್ಯಾನವು. ಸತ್ಯಶೀಲನು ಶೂದ್ರಜನ್ಮದಲ್ಲಿ ಹುಟ್ಟಿದವನಾದರೂ ಬ್ರಾಹ್ಮಣನಿಗಿಂತ ಶ್ರೇಷ್ಠನು. ಬ್ರಾಹ್ಮಣ ಜನ್ಮದಲ್ಲಿ ಜನಿಸಿದರೂ ಸತ್ಯವನ್ನಾಡದವನು ಕುಲಹೀನನೆಂದು ತಿಳಿಯತಕ್ಕದು.

ಸರ್ಪ:—ಎಲೈ ಪಾಂಡವಾಗ್ರಜನೇ! ಧೀರನು ಯಾರು? ವಿಕಾರವುಳ್ಳವನು ಯಾರು? ವಿನಯಪರನಾರು? ಆಚಾರಹೀನನು ಯಾರು? ಸುವ್ರತಿಯಾರು? ಶಠನಾರು? ಕ್ರೂರನು ಯಾರು? ಕಷ್ಟನು ಯಾರು? ವಿಚಾರಶೀಲನು ಯಾರು? ಮುಕ್ತಿಯನ್ನು ಪಡೆಯತಕ್ಕವನಾರು? ಇಹಪರಗತಿಗಳಿಗೆ ಸೇರದೆ ದೂರನಾಗುವವನು ಯಾರು?

ಯುಧಿ:—ಎಲೈ ಭುಜಗೇಂದ್ರನೇ ಕೇಳು. ಯಾವನು ಸುಂದರಾಂಗಿಯರಾದ ಸ್ತ್ರೀಯರ ಕಟಾಕ್ಷಬಾಣಗಳಿಗೆ ಹೆದರದೆ ಇರುವವನೋ ಅವನೇ ಧೀರನು, ಅವನೇ ಧಿಟ್ಟನು. ಸ್ತ್ರೀಯರ ಹೊಗಳಿಕೆಗೆ ಮರುಳಾಗಿ ಉಬ್ಬಿ ತನ್ನನ್ನು ತಾನು ಮರೆಯುವವನೇ ವಿಕಾರಿಯು. ಯುಕ್ತಾಯುಕ್ತಗಳನ್ನು ವಿಚಾರ ಮಾಡಿ ನಡೆದುಕೊಳ್ಳುವವನೇ ವಿನಯಪರನು. ತನ್ನ ಸ್ವಧರ್ಮವನ್ನು ಬಿಟ್ಟು ಪರಧರ್ಮವನ್ನಾಚರಿಸುವವನೇ ಆಚಾರಹೀನನು. ದಂಭಕಾಪಟ್ಯಗಳನ್ನು ವರ್ಜಿಸಿ ಕಷ್ಟಸುಖಗಳೆಂಬಿವುಗಳನ್ನು ಸಹಿಸುವವನೇ ಸುವ್ರತಿಯು. ಮೋಕ್ಷವನ್ನು ಪಡೆಯಬೇಕೆಂಬ ಅಪೇಕ್ಷೆಯಿಂದ ತತ್ವವಿಚಾರ ಮಾಡುವವನೇ ಮುಮುಕ್ಷುವು. ಕಪಟಸ್ವಭಾವದವನೇ ಶಠನು, ಉಪಕಾರಸ್ಮರಣೆ ಇಲ್ಲದೆ ಪರದ್ರೋಹಮಾಡುವವನೇ ಕ್ರೂರನು. ಲೋಭಗುಣವುಳ್ಳವನೇ ಕಷ್ಟನು. ಆತ್ಮಜ್ಞಾನ ನಿರತನೇ ವಿಮುಕ್ತನು, ವೇದಮಾರ್ಗವನ್ನು ಬಿಟ್ಟು ನಡೆಯುವವನೇ ಇಹಪರ ಸುಖಗಳಿಗೆ

ದೂರನಾದವನೆಂದು ಹೇಳುವರು.

ಸರ್ಪ:—ಅಜಾತಶತ್ರುವೇ, ಈ ಲೋಕದಲ್ಲಿ ಭಂಡನು ಯಾರು? ನಿಂದ್ಯನು ಯಾರು? ವಿಷದಂತಹ ದುರ್ಜನನು ಯಾರು? ಸಾಹಸಿಯಾರು? ಸತ್ಪುರುಷನು ಯಾರು? ಪರಿಶುದ್ಧನು ಯಾರು? ಶತ್ರುವು ಯಾರು? ಮಿತ್ರನಾರು? ಸೇವಾರ್ಹನಾರು? ದುರ್ಲಭನು ಯಾರು? ದುಸ್ಸಹನು ಯಾರು? ದುರ್ಬುದ್ಧಿ ಯಾರು?

ಯುಧಿ:—ಸರ್ಪರಾಜಾ ಕೇಳು. ಸಪ್ತವ್ಯಸನಗಳಲ್ಲಿ ಯಾವುದಕ್ಕಾದರೂ ಸಿಕ್ಕಿದವನೇ ನಿಂದ್ಯನು. ಯುದ್ಧರಂಗದಲ್ಲಿ ತನ್ನ ಒಡೆಯನನ್ನು ಬಿಟ್ಟು ಓಡಿಹೋಗುವವನೇ ಭಂಡನು ಸ್ವಾಮಿ. ದ್ರೋಹಮಾಡದೆ ಇರುವ ಸೇವಕನೇ ಸಾಹಸಿಯು. ಮಿತ್ರದ್ರೋಹಿಯೇ ಹಾಲಾಹಲಕ್ಕಿಂತ ಹೆಚ್ಚಿದ ವಿಷವು. ಚಾಡಿಹೇಳುವದುರ್ಜನನೇ ಶತ್ರುವು. ಪರಸ್ತ್ರೀಯರಿಗೆ ಮನಸ್ಸಿಡದೆ ಇರುವವನೇ ಶುಚಿಯು. ಪರಾರ್ಥವನ್ನೇ ಚಿಂತಿಸುತ್ತಿರುವವನು ಸತ್ಪುರುಷನೆನಿಸುವನು. ಪರತತ್ವವಿಚಾರಮಾಡುತ್ತಿರುವವನೇ ಸೇವ್ಯನು. ಇಂದ್ರಿಯಗಳನ್ನು ಜಯಿಸಿದವನೇ ದುರ್ಲಭನು. ಮಿತ್ರನ ಹಿತಚಿಂತಕನಾಗಿ ಅನುಸರಿಸಿಕೊಂಡಿರುವವನೇ ಸ್ನೇಹಿತನು. ಮಿತ್ರನ ಅಭಿವೃದ್ಧಿಯನ್ನು ಸೈರಿಸದವನೇ ದುಸ್ಸಹನು. ದುಷ್ಟರಿಗೆ ಆಶ್ರಯವನ್ನು ಕೊಡುವವನೇ ದುರ್ಬುದ್ಧಿಯೆಂದು ಕೇಳಿದ್ದೇನೆ ಈ ನನ್ನ ಅಭಿಪ್ರಾಯವು ಸಾಧುವಾಗಿದ್ದರೆ ಒಪ್ಪಬಹುದು.

ಸರ್ಪ:—ಅಯ್ಯಾ ರಾಜನೇ, ನೀನು ವಿದ್ಯೆಯಲ್ಲಿಯೂ, ದಾನದಲ್ಲಿಯೂ, ತಪಸ್ಸಿನಲ್ಲಿಯೂ, ಸತ್ಯದಲ್ಲಿಯೂ, ಧರ್ಮಾಚರಣೆಯಲ್ಲಿಯೂ, ಶ್ರೇಷ್ಠನೆನಿಸಿಕೊಂಡಿರುವೆ. ನೀನು ಕಪಟವಿಲ್ಲದ ಸಹಜವರ್ತನವುಳ್ಳವನು. ವಿರೋಧಿಯಿಲ್ಲದ ಮಿತ್ರನು. ಧರ್ಮಜ್ಞನಾದ ನಿನಗೆ ತಿಳಿಯದ ವಿಷಯ ಒಂದೂ ಇಲ್ಲ. ಆದರೂ ನಾನು ನಿನಗೆ ಒಂದು ಮುಖ್ಯಾಂಶವನ್ನು ಹೇಳುವೆನು ಕೇಳು.

ಯುಧಿ:—ಅಯ್ಯಾ! ಅದೇನು? ಕೇಳಬಹುದಾಗಿದ್ದರೆ ದಯಮಾಡಿ ಹೇಳು.

ಸರ್ಪ:—ಧರ್ಮರಾಯನೇ, ಬ್ರಾಹ್ಮಣ್ಯವು ಕ್ಷಾತ್ರತೇಜಸ್ಸಿಗಿಂತಲೂ ಶ್ರೇಷ್ಠವಾದುದು. ನೀನು ಸದಾಕಾಲವು ವಿಪ್ರರಿಗೆ ಆಶ್ರಯ ಕೊಟ್ಟು ಪೋಷಿಸುತ್ತಾ, ಬ್ರಹ್ಮವರ್ಗದ ಸೌಖ್ಯದಲ್ಲಿ ಮನಸ್ಸಿಟ್ಟು ರಕ್ಷಿಸುತ್ತಾ ಬರುವುದರಿಂದ ನೀನೇ ಧನ್ಯನೆನಿಸಿರುವೆ. ಈ ಲೋಕದಲ್ಲಿ ವಿಪ್ರರಿಗೆ ಅವಮಾನ ಮಾಡುವುದೇ ಐಶ್ವರ್ಯ ಹಾನಿಗೆ ಕಾರಣವಾದುದು. ಇದು ವಿಷಕ್ಕಿಂತಲೂ ಕ್ರೂರವಾದುದೆಂದು ತಿಳಿ. ನೀನು ಬ್ರಾಹ್ಮಣ ಸೇವೆಯಿಂದ ಕೃತಕೃತ್ಯನಾಗುವೆ. ನಾನು ಭೂಮಿಯಲ್ಲಿ ನೂರು ಯಾಗಗಳನ್ನು ಮಾಡಿ ಸ್ವರ್ಗಕ್ಕೆ ಹೋಗಿ ಇಂದ್ರನ ಪೀಠವನ್ನಲಂಕರಿಸಿದೆನು. ಆದರೆ ಫಲವೇನು? ಬ್ರಾಹ್ಮಣರನ್ನು ಅವಮಾನಗೊಳಿಸಿದ ಕಾರಣ ಪದಭ್ರಷ್ಟನಾಗಿ ಉರುಳಿ ಇಲ್ಲಿ ಹಾವಾಗಿ ಬಿದ್ದಿರುವೆನು. ಮುಖ್ಯವಾದ ತತ್ವವನ್ನು ಕೇಳು. ಕೋಟಿ ಯಜ್ಞಗಳನ್ನು ಮಾಡಲಿ. ಬ್ರಾಹ್ಮಣರು ಸ್ವರ್ಗಕ್ಕೆ ಏರಿಸಿದರೆ ಹತ್ತಬಹುದು ಅವರು ಕೋಪಿಸಿದರೆ ಅಷ್ಟನ್ನೂ ಕೆಡಿಸಿ ಕಾರಿಸಿ ಬಿಡುವರೆಂದು ತಿಳಿ.

ಇವನ್ನು ಕೇಳಿ ಧರ್ಮರಾಯನು ಆಶ್ಚರ್ಯಪಟ್ಟು "ಎಲೈ ಸರ್ಪರಾಜನೇ! ನೀನು ಕೇಳಿದ್ದಕ್ಕೆ ನನ್ನ ವೃತ್ತಾಂತವನ್ನೆಲ್ಲಾ ಹೇಳಿದೆನು. ನಿನ್ನ ಸಮಾಚಾರವು ವಿವರವಾಗಿ ನನಗೆ ತಿಳಿಯಲಿಲ್ಲ ನೀನು ಯಾರು? ನಿನ್ನ ಹೆಸರೇನು? ದಯಮಾಡಿ ಹೇಳು" ಎಂದನು. ಅದಕ್ಕಾ ಸರ್ಪವು ತನ್ನ ವೃತ್ತಾಂತವನ್ನು ಹೀಗೆ ಹೇಳಿತು

ಎಲೈ ಯುಧಿಷ್ಠಿರನೇ ಕೇಳು. ನಿಮ್ಮ ವಂಶದಲ್ಲಿ ಪ್ರಸಿದ್ಧನಾಗಿದ್ದ ಯಯಾತಿರಾಯನು ನನ್ನ ಮಗನು. ನಾನು ಬಹು ಪೂರ್ವಕಾಲದಲ್ಲಿ ರಾಜವಾಳುತ್ತಿದ್ದೆನು. ನನ್ನ ಹೆಸರನ್ನು ನಹುಷನೆಂದು ಕರೆಯುತ್ತಿದ್ದರು. ನಾನು ನೂರು ಯಾಗಗಳನ್ನು ಮಾಡಿದೆನು. ನನಗೆ ಇಂದ್ರಪದವಿಯು ಸಿಕ್ಕಿತು. ಮೂವತ್ತು ಮೂರು ಕೋಟೀ ದೇವತೆಗಳೂ ನನ್ನ ವಶರಾಗಿ ನಡೆದುಕೊಳ್ಳುತ್ತಿದ್ದರು. ಅತ್ಯುಚ್ಛ್ರಯವಾಗಿ ಇಂದ್ರಭೋಗಗಳನ್ನು ಆ ಸ್ವರ್ಗಲೋಕದಲ್ಲಿ ನಾನು ಅನುಭವಿಸುತ್ತಾ ಬಲುಹೆಮ್ಮೆಯಿಂದ ಬೆರೆಯುತ್ತಿದ್ದೆನು. ರಂಭೆ, ಊರ್ವಶಿ, ಮೇನಕೆ, ತಿಲೋತ್ತಮೆ ಮೊದಲಾದ ಸು

ಪ್ರಸಿದ್ಧರಾಗಿರುವ ಅಪ್ಸರಸ್ತ್ರೀಯರೆಲ್ಲರೂ ನನ್ನ ಅರಮನೆಯ ದಾಸಿಯರಾಗಿದ್ದರು. ಆ ಸುರಸುಂದರಿಯರ ಸಂಖ್ಯೆಯು ಮೂರು ಲಕ್ಷವೂ ಮೂವತ್ತಾರು ಸಾವಿರವಾಗಿತ್ತು. ಎಲೈ ಯುಧಿಷ್ಠಿರನೇ! ಏನು ಹೇಳಲಿ? ಇಷ್ಟು ಮಂದಿ ಸ್ತ್ರೀಯರಿದ್ದರೂ ಬಯಲಭಿಲಾಷೆಯು ನನಗೆ ತೀರಲಿಲ್ಲ. ದೇವೇಂದ್ರನ ಪಟ್ಟದರಸಿಯಾದ ಶಚೀದೇವಿಯೂ ನನ್ನ ರಾಣಿಯಾಗಿರಬೇಕೆಂದು ಆಜ್ಞಾಪಿಸಿ ಈ ಕೇಡು ತಂದುಕೊಂಡೆನು. ಪತಿವ್ರತಾ ಸ್ತ್ರೀಯರನ್ನು ಕಾಮಿಸುವವನು ಕೆಟ್ಟುಹೋಗುವನೆಂಬುದಕ್ಕೆ ನಾನೇ ದೃಷ್ಟಾಂತವಾಗಿದ್ದೇನೆ ಆ ಶಚೀದೇವಿಯು ನನ್ನ ಆಜ್ಞೆಯನ್ನು ಕೇಳಿ ಒಂದು ಉಪಾಯ ಮಾಡಿದಳು. ತನ್ನ ಪತಿಯಾದ ಇಂದ್ರನು ಅಂತಃಪುರಕ್ಕೆ ಬರುತ್ತಿರುವಾಗ ತನ್ನ ಪಾಲಕಿಯನ್ನು ಸಪ್ತರ್ಷಿಗಳಿಂದ ಹೊರಿಸಿಕೊಂಡು ಬರುತ್ತಿದ್ದನು ನೀನೂ ಹಾಗೆಯೇ ಬಂದರೆ ನಿನ್ನ ರಾಣಿಯಾಗಿರುವೆನೆಂದು ವರ್ತಮಾನವನ್ನು ಕಳುಹಿದಳು. ನಾನು ಅದಕ್ಕೆ ಸಮ್ಮತಿಸಿ, ಇಂದ್ರಪದವಿಯಲ್ಲಿರುವ ನನ್ನ ಪಾಲಕಿಯನ್ನು ಅಂತಃಪುರಕ್ಕೆ ಒಯ್ಯಬೇಕೆಂದು ಸಪ್ತರ್ಷಿಗಳಿಗೆ ವಿಧಿಸಿದೆನು. ಅವರು ಅದರಂತೆ ಹೊತ್ತುಕೊಂಡು ಹೋಗುತ್ತಿರುವಾಗ ಅವರಲ್ಲೊಬ್ಬನಾಗಿದ್ದ ಅಗಸ್ತ್ಯಮುನಿಯು ಸರಿಯಾಗಿ ಹೋಗದೆ ಮೆಲ್ಲಗೆ ನಡೆಯುತ್ತಿದ್ದನು. ಆಗ ನಾನು ಅವನನ್ನು "ಸರ್ಪ ಸರ್ಪ" ಬೇಗ ಬೇಗ ನಡೆ ಎಂದೆನು. ಅದಕ್ಕವನು "ತ್ವಂ ಸರ್ಪೋಭವ" ನೀನು ಹಾವಾಗಿ ಇರು ಎಂದು ನನ್ನನ್ನು ಶಪಿಸಿದನು. ನನ್ನ ಅಹಂಕಾರಕ್ಕೆ ತಕ್ಕ ಪ್ರಾಯಶ್ಚಿತ್ತವಾಯಿತು. ಕೂಡಲೇ ನನಗೆ ಬುದ್ಧಿ ಬಂದು ಆ ಮಹರ್ಷಿಯ ಪಾದಗಳಿಗೆ ಅಡ್ಡಬಿದ್ದೆನು. "ಸ್ವಾಮೀ! ಕ್ಷಮಿಸಬೇಕು ತಮ್ಮ ಶಾಪವು ತಪ್ಪದು. ಈ ಸರ್ಪಜನ್ಮದ ಅನುಭವವು ಎಂದಿಗೆ ಪರಿಹರವಾಗುವುದು. ಕರುಣಿಸಿ ರಕ್ಷಿಸಿರಿ" ಎಂದು ಪ್ರಾರ್ಥಿಸಿದೆನು. ಯುಧಿಷ್ಠಿರನು ಧರ್ಮವಿಚಾರಗಳನ್ನು ನಿನಗೆ ವಿವರಿಸುವನು. ಅದನ್ನು ಕೇಳಿದ ಮೇಲೆ ನಿನಗೆ ಈ ಶಾಪವಿಮೋಚನೆಯಾಗುವುದೆಂದು ಅನುಗ್ರಹಿಸಿದನೆಂದು ಹೇಳಿದನು ಕೂಡಲೇ ಆತನ ದೇಹಕಾಂತಿಯು ಹೆಚ್ಚಿತು. ಸರ್ಪತ್ವವು ಹೋಗಿ ದಿವ್ಯಸುಂದರ ಶರೀರವು ಬಂತು. ದೇವತಾವಿಮಾನವೂ ಸಮಸ್ತ ಬಿರುದುಗಳೂ ಸ್ವರ್ಗದಿಂದ ಬಂದುವು. ಆಗಲಾನಹುಷನು

ಹಾರಾಯನು ಧರ್ಮಪುತ್ರನನ್ನು ನೋಡಿ "ಅಯ್ಯಾ! ಯುಧಿಷ್ಠಿರನೇ! ಇಗೋ ನಿನ್ನ ತಮ್ಮನನ್ನು ಬಿಟ್ಟುಕೊಟ್ಟೆನು. ಇವನನ್ನು ಕರೆದುಕೊಂಡು ಹೋಗು. ನಿನ್ನ ಮೂಲಕ ನನಗೆ ಶಾಪಪರಿಹರವಾದುದರಿಂದ ನಾನು ನಿನಗೆ ಋಣಿಯಾಗಿದ್ದೇನೆ. ನಿಮಗೆ ಈ ವನವಾಸದ ಅವಧಿಯು ಮುಗಿದ ಮೇಲೆ ಶ್ರೇಯಸ್ಸುಂಟಾಗುವುದು. ಧರ್ಮವೇ ಜಯವು. ಅಧರ್ಮಕ್ಕೆ ಎಂದಿಗೂ ಪರಾಜಯವೇ ಸಿದ್ಧವೆಂದು ತಿಳಿ" ಎಂದು ಹೇಳಿ ಅವನನ್ನು ಹರಸಿ ಹೊರಟು ಹೋದನು.

ಬಳಿಕಲಾ ಯುಧಿಷ್ಠಿರನು ಭೀಮನನ್ನಪ್ಪಿಕೊಂಡು ಸಂತೈಸಿ "ತಮ್ಮಾ? ಚಿಂತಿಸಬೇಡ. ಮನೋವ್ಯಥೆಯನ್ನು ಬಿಡು ಈ ನಹುಷ ಚಕ್ರವರ್ತಿಯು ನಮ್ಮ ವಂಶದ ಪೂರ್ವ ರಾಜನಲ್ಲವೇ? ನೂರು ಯಜ್ಞಗಳನ್ನು ಮಾಡಿ ದೇವೇಂದ್ರ ಪದವಿಯನ್ನು ಪಡೆದು ಅನುಭವಿಸುತ್ತಿದ್ದ ಈತನಿಗೆ ಕೂಡ ಎಂತಹ ದುರವಸ್ಥೆ ಸಂಭವಿಸಿತ್ತು. ಕೇಳಿದೆಯಲ್ಲವೆ? ಇನ್ನು ನಮ್ಮಂತಹ ಯಃಕಶ್ಚಿತರ ಪಾಡೇನು? ನಿನ್ನ ದೆಸೆಯಿಂದಲೇ ಈ ರಾಜನಿಗೆ ಶಾಪವಿಮೋಚನವಾದುದರಿಂದ ನಿನ್ನ ಶೌರ್ಯಕ್ಕೆ ಇದರಿಂದ ಗೌರವವು ಉಂಟಾಯಿತೇ ಹೊರತು ಯಾವ ಕೊರತೆಯೂ ಇಲ್ಲವು. ನೀನೇ ಧನ್ಯನು. ತನ್ನ ಕಷ್ಟವನ್ನು ಚಿಂತಿಸದೆ ಪರರ ಶ್ರೇಯಸ್ಸನ್ನು ಬಯಸುತ್ತಿರುವವನೇ ಸತ್ಪುರುಷನೆಂದು ತಿಳಿ" ಎಂದು ಹೇಳಿ ಅವನ ಮನಸ್ಸಿನ ಕಳವಳವನ್ನು ಪರಿಹರಿಸಿ, ಮುನಿಜನರೊಂದಿಗೆ ತನ್ನ ಆಶ್ರಮಕ್ಕೆ ಕರೆದುಕೊಂಡು ಬಂದನು. ದ್ರೌಪದಿಯು ಭೀಮನ ಅವಸ್ಥೆಯನ್ನೂ, ಧರ್ಮಕಥಾಶ್ರವಣದಿಂದ ನಹುಷನಿಗೆ ಶಾಪವಿಮೋಚನವಾದುದನ್ನೂ ಕೇಳಿ, ಶ್ರೀ ಕೃಷ್ಣನ ಅನುಗ್ರಹದಿಂದ ಈ ವೀರನಿಗೆ ಬಂದಿದ್ದ ವಿಪತ್ತು ತೊಲಗಿತೆಂಬ ಸಂತೋಷದಿಂದ ತನ್ನ ಮನಸ್ಸಿನಲ್ಲಿ ಆ ಸ್ವಾಮಿಯನ್ನು ಧ್ಯಾನಿಸುತ್ತಿದ್ದಳು.

---

## ಒಂಭತ್ತನೆಯ ಸಂಧಿ.

———o———

ಸೂಚನೆ:—ಪಾಂಡವರು ಅರಣ್ಯವಾಸದಲ್ಲಿರುವಾಗ ಕೌರವನಿಂದ ಪ್ರೇರಿತನಾದ ದೂರ್ವಾಸ ಮುನಿಯು ಅವರಿಗೆ ಅವಮಾನಪಡಿಸಬೇಕೆಂದು ಬಹು ಜನ ಬ್ರಾಹ್ಮಣರೊಂದಿಗೆ ಹೋಗಿ ಅಶನಾರ್ಥಿಯಾಗಿ ಬಂದಿರುವೆನೆಂದು ಯುಧಿಷ್ಠಿರನನ್ನು ಬೇಡಿದನು. ಅವರ ಆಹಾರಕ್ಕೆ ಅನುಕೂಲವಿಲ್ಲದೆ ಇರುವಾಗ ದ್ರೌಪದಿಯು ಪ್ರಾರ್ಥಿಸಲು ಶ್ರೀ ಕೃಷ್ಣನು ಆಗಲೇ ಮೈದೋರಿ, ಅಕ್ಷಯಪಾತ್ರೆಯನ್ನು ಪೂರ್ಣಮಾಡಿ ಅವರ ಹಸಿವಿನೊಂದಿಗೆ ದೂರ್ವಾಸ ಮಹರ್ಷಿಯ ಕೋಪವನ್ನು ಅಡಗಿಸಿದನು.

ಪಾಂಡವರು ವಾಸವಾಗಿದ್ದ ವನದಲ್ಲಿ ಫಲವೃಕ್ಷಗಳೆಲ್ಲವೂ ಬೀತು ಹೋದುವು. ಮೃಗಪಕ್ಷ್ಯಾದಿಗಳೂ ತಗ್ಗಿಹೋದುವು. ಇನ್ನು ಈ ಅರಣ್ಯದಲ್ಲಿ ನಮಗೆ ಬೇಕಾದ ವಸ್ತುಗಳು ದುರ್ಲಭವಾಗುವುದರಿಂದ ಮರಳಿ ಕಾಮ್ಯಕವನಕ್ಕೇ ಹೋಗಿ ಕೆಲವು ಕಾಲ ಅಲ್ಲಿ ವಾಸಮಾಡಿಕೊಂಡಿರೋಣವೆಂದು ಯುಧಿಷ್ಠಿರನು ಅಭಿಪ್ರಾಯಪಡಲು ಸಹೋದರರೂ, ದ್ರೌಪದಿಯೂ ಅದಕ್ಕೊಪ್ಪಿದರು. ಬಳಿಕ ಪಾಂಡವರು ತಮ್ಮ ಸಂಗಡ ಇದ್ದ ಮುನಿಜನರೊಂದಿಗೆ ಕಾಮ್ಯಕವನಕ್ಕೆ ಸೇರಿ, ಅಲ್ಲಿ ಆಶ್ರಮಮಾಡಿಕೊಂಡು ಇದ್ದರು. ಒಂದು ದಿನ ದ್ವಾರಕಾಪುರದ ದೂತನೊಬ್ಬನು ಸಂಭ್ರಮದಿಂದ ಬಂದು ಯುಧಿಷ್ಠಿರನನ್ನು ನೋಡಿ ಯಾದವರೆರೆಡೆಯನಾದ ಶ್ರೀ ಕೃಷ್ಣದೇವರು ಸಪತ್ನೀಕನಾಗಿ ದಯಮಾಡಿಸುತ್ತಿರುವನೆಂದು ಬಸಗೆಯನ್ನು ಹೇಳಿದನು. ಅವನ್ನು ಕೇಳಿ ಯುಧಿಷ್ಠಿರನು ತಮ್ಮಂದಿರೊಡನೆ ಹೋಗಿ ಆ ವಾಸುದೇವನನ್ನು ಎದುರುಗೊಂಡು ಕರೆದುತಂದು ಮನ್ನಿಸಿ ಕುಶಲಪ್ರಶ್ನೆಗಳಾದ ಮೇಲೆ ಶ್ರೀ ಕೃಷ್ಣನು ಯುಧಿಷ್ಠಿರನನ್ನು ನೋಡಿ "ಎಲೈ ರಾಯನೇ ! ನೀನೇ ಪುಣ್ಯವಂತನು. ನಿನ್ನ ತಮ್ಮನಾದ ಅರ್ಜುನನು ಬಹು ಕಷ್ಟಪಟ್ಟು ತಪಸ್ಸು ಮಾಡಿ ಇತರರಿಗೆ ದುರ್ಲಭವಾದ ಪಾಶುಪತಾಸ್ತ್ರವನ್ನು ಪರಮೇಶ್ವರನಿಂದ ಪಡೆದು ಬಂದನು ಇತರ ದಿಕ್ಪಾಲಕರೂ ತಮ್ಮ ತಮ್ಮ ದಿವ್ಯಾಸ್ತ್ರಗಳನ್ನು ಅನುಗ್ರಹಿಸಿರುವರು. ಶೂರಶ್ರೇಷ್ಠನಾದ ಭೀಮಸೇನನಿಗೆ ಸಂಭವಿಸಿದ್ದ ವಿಪತ್ತುಗಳು ತೊಲಗಿದುವೆಂ

ದು ಕೇಳಿ ಬಲು ಸಂತೋಷವಾಯಿತು. ನಿಮ್ಮ ಕಷ್ಟಕಾಲವೆಲ್ಲಾ ಕಳೆಯುತ್ತಾ ಬಂದಿದೆ. ಇನ್ನು ಸ್ವಲ್ಪದಿವಸಗಳು ಸೈರಿಸಿಕೊಂಡಿರಿ. ಬಳಿಕ ಶುಭವುಂಟಾಗುವುದು " ಎಂದು ಸಮಾಧಾನೋಕ್ತಿಗಳನ್ನು ಹೇಳಿದನು. ಅದಕ್ಕೆ ಯುಧಿಷ್ಠಿರನು "ಎಲೈ ದೇವದೇವನೇ, ನಿನ್ನ ಅನುಗ್ರಹವಿರುವ ತನಕ ನಮಗೆ ಯಾವ ಭಯವೂ ಇಲ್ಲ. ಆಪತ್ತುಗಳನ್ನು ಪರಿಹರಿಸತಕ್ಕ ಸರ್ವಶಕ್ತನಾದ ನೀನು ನಮ್ಮವನಾಗಿರುವಲ್ಲಿ ನಾವು ಚಿಂತಿಸಬೇಕಾದುದೇತಕ್ಕೆ ? ಎಂತೆಂತಹ ಕಷ್ಟಗಳೋ ನಮಗೆ ಸಂಭವಿಸಿದುವು. ಅವುಗಳೆಲ್ಲವನ್ನೂ ನೀನೇ ಪರಿಹರಿಸಿದೆ. ತಾಯಿಯು ತನ್ನ ಕರುಗಳನ್ನು ಬಿಡದೆ ಎಚ್ಚರದಿಂದ ರಕ್ಷಿಸುತ್ತಿರುವಂತೆ ನಿನ್ನ ಭಕ್ತರನ್ನು ಕಾಪಾಡಿಕೊಂಡಿರುವೆ. ನಿನ್ನ ಉಪಕಾರಕ್ಕೆ ಪ್ರತಿಯಾಗಿ ನಾವೇನು ಮಾಡಬಲ್ಲೆವು " ಎಂದು ಹೇಳಿ, ಅವರೆಲ್ಲರೂ ಶ್ರೀ ಕೃಷ್ಣನಿಗೆ ಭಕ್ತಿಯಿಂದ ನಮಸ್ಕರಿಸಲು, ಶ್ರೀ ಕೃಷ್ಣನು ಅವರನ್ನೆತ್ತಿ ಸಂತೈಸಿದನು. ಸತ್ಯಭಾಮೆಯು ದ್ರೌಪದಿಯ ಕ್ಷೇಮವನ್ನು ವಿಚಾರಿಸಿ ಸಂತೈಸಿದಳು.

ಶ್ರೀ ಕೃಷ್ಣನು ಕಾಮ್ಯಕವನಕ್ಕೆ ಬಂದಿರುವುದನ್ನು ತಿಳಿದು ನಾರದನೂ, ಮಾರ್ಕಂಡೇಯನೂ ಆ ಸ್ವಾಮಿಯ ದರ್ಶನವನ್ನು ಪಡೆಯಬೇಕೆಂದು ಅಲ್ಲಿಗೆ ಬಂದರು. ಶ್ರೀ ಕೃಷ್ಣನು ಪಾಂಡವರೊಂದಿಗೆ ಹೋಗಿ ಅವರನ್ನೆದುರುಗೊಂಡು ಕರೆದುತಂದು ಸತ್ಕರಿಸಿ, ಅವರ ಯೋಗಕ್ಷೇಮ ಗಳನ್ನು ವಿಚಾರಿಸಿದನು. ತರುವಾಯ ಅವರು ಪಾಂಡವರಿಗೆ ಸಂಭವಿಸಿರುವ ಕಷ್ಟಗಳನ್ನು ಕುರಿತು ತಮ್ಮ ಅನುತಾಪವನ್ನು ತಿಳಿಸಿದ ಮೇಲೆ ಮಾರ್ಕಂಡೇಯನು ತನಗೆ ಹದಿನಾರನೆಯ ವರುಷದಲ್ಲಿಯೇ ಮೃತ್ಯುವು ಸಂಭವಿಸಿದ್ದುದನ್ನೂ ಶ್ರೀ ಕೃಷ್ಣನ ಅನುಗ್ರಹದಿಂದ ಆ ವಿಪತ್ತು ಪರಿಹರವಾಗಿ ತನಗೆ ಪೂರ್ಣಾಯುಷ್ಯವು ಲಭಿಸಿದುದನ್ನೂ ವಿವರಿಸಿ, ಭಗವಂತನ ಲೀಲೆಯಿಂದ ಈ ಪ್ರಪಂಚಗಳ ಸೃಷ್ಟಿಸ್ಥಿತಿಲಯಗಳು ಆಗುತ್ತಿರುವ ಕ್ರಮಗಳನ್ನೂ, ಯುಗದ ಧರ್ಮಗಳನ್ನೂ, ವರ್ಣಾಶ್ರಮಾಚಾರಗಳನ್ನೂ ವಿಸ್ತಾರವಾಗಿ ತಿಳಿಸಿದನು. ತರುವಾಯ ಯುಧಿಷ್ಠಿರನು ಧರ್ಮವ್ಯಾಧನ ಕಥೆಯನ್ನು ಆ ಮಹರ್ಷಿಯಿಂದ ಕೇಳಿ ತಿಳಿದುಕೊಂಡು, ಸ್ವಧರ್ಮನಿರತನಾಗಿದ್ದರೂ ತನಗೆ ಇಂತಹ ಕಷ್ಟವು ಸಂಭವಿಸಿತಲ್ಲಾ ! ಎಂದು ಮರುಗ

ಳು ನಾರದನು ಆವನನ್ನು ನೋಡಿ "ಎಲೈ ಯುಧಿಷ್ಠಿರನೇ, ಧರ್ಮದ್ರೋಹಿಗಳಾದ ಕೌರವರು ನಿಮಗೆ ವಂಚಿಸಿ ಮೋಸಮಾಡಿದುದಕ್ಕೆ ತಕ್ಕ ಫಲವನ್ನನುಭವಿಸುವರು. ವೀರಾಗ್ರೇಸರರಾದ ಭೀಮಾರ್ಜುನರಿಂದ ಆ ನೀಚರು ಪುತ್ರಾಮಾತ್ಯಬಾಂಧವ ಸಹಿತರಾಗಿ ನಾಶವಾಗುವರು, ಇದರಲ್ಲಿ ಸಂಶಯುವಿಲ್ಲ. ಧರ್ಮಶೀಲನಾದ ನಿನಗೆ ಜಯಶ್ರೀಯು ಇಷ್ಟರಲ್ಲಿ ವಶಳಾಗುವಳು. ಚಿಂತಿಸಬೇಡ" ಎಂದು ಧೈರ್ಯವನ್ನು ಹೇಳಿ ಶ್ರೀ ಕೃಷ್ಣನ ಅಪ್ಪಣೆ ಪಡೆದು ಮಾರ್ಕಂಡೇಯನೊಂದಿಗೆ ಹೊರಟು ಹೋದನು.

ಬಳಿಕ ಒಂದು ದಿನ ದ್ರೌಪದಿಯು ಶ್ರೀ ಕೃಷ್ಣನ ಪ್ರಿಯಪತ್ನಿಯಾದ ಸತ್ಯಭಾಮೆಯೊಂದಿಗೆ ಸಂಭಾಷಣೆ ಮಾಡುತ್ತಿರುವಾಗ ಆ ಭಾಮೆಯು ಕಟಕಿಯ ಮಾತಿನಿಂದ ದ್ರೌಪದಿಯನ್ನು ಹಾಸ್ಯಮಾಡಬೇಕೆಂದು ಇಂತೆಂದಳು.

ಸತ್ಯ:—ತಂಗೀ ದ್ರೌಪದೀ ! ಲೋಕದಲ್ಲಿ ಸ್ತ್ರೀಯು ತನ್ನ ಪತಿಯ ಇಷ್ಟಾನುವರ್ತಿನಿಯಾಗಿ ನಡೆದುಕೊಂಡು ಆತನ ಮೆಚ್ಚುಗೆಯನ್ನು ಪಡೆಯುವುದೇ ಬಹು ಕಷ್ಟವು. ನೀನು ಒಬ್ಬರಿಬ್ಬರಿಗೆ ಮಾತ್ರವಲ್ಲ. ಅಯ್ವರು ಗಂಡಂದಿರಿಗೆ ಹೆಂಡತಿಯಾಗಿದ್ದೀಯೇ! ಅವರೆಲ್ಲರೂ ನಿನ್ನಲ್ಲಿ ಏಕರೀತಿಯಾದ ಪ್ರೀತಿಯುಳ್ಳವರಾಗಿದ್ದಾರೆ. ಇದನ್ನು ಕಂಡು ನನಗೆ ಬಹು ಸಂತೋಷವಾಗುತ್ತಿದೆ. ನೀನು ಮಂತ್ರಸಿದ್ಧಿಯನ್ನು ಪಡೆದಿರುವೆಯೋ ಅಥವಾ ಶಾಬರ ಯಂತ್ರವನ್ನು ರಕ್ಷೆಗಾಗಿ ಕಟ್ಟಿಕೊಂಡಿರುವೆಯೋ, ಇಲ್ಲವೇ ವಶ್ಯದ ಔಷಧಗಳನ್ನೇನಾದರೂ ಉಪಯೋಗಿಸುತ್ತಿರುವೆಯೋ ನಿಜವಾಗಿ ಹೇಳು. ಈ ಕಾಲದ ರಾಜರು ಯಂತ್ರದ ಬೊಂಬೆಗಳಂತೆ ಇರುವರು. ಕೀಲು ತಿರುಗಿಸಿದಂತೆ ತಿರುಗುವರು. ಆ ಯಂತ್ರದ ಸೂತ್ರದ ಕುಣಿಕೆಯನ್ನು ನೀನು ಕೈಯಲ್ಲಿ ಹಿಡಿದು ಕುಣಿಸುತ್ತಿರುವೆಯಾ ?

ದ್ರೌಪದಿ:—ಸತ್ಯಕ್ಕಾ ! ಇದೇನು ಹೀಗೆ ಕೇಳುವೆ ? ನಿನಗೆ ಹುಚ್ಚೇನು ? ನಿನ್ನಂತವಳೇ ಇಂತಹ ಮಾತನಾಡಿದರೆ ಲೋಕದ ಮೂಢ ಜನರು ಮತ್ತೇನು ಹೇಳಬಹುದು. ನನಗೆ ಮಂತ್ರೌಷಧಾದಿಗಳೂ,

ವಶ್ಯಯಂತ್ರಗಳೂ ಬಾರವು. ಪರಿಶುದ್ಧ ಮನಸ್ಸಿನಿಂದ ಪತಿಗಳ
ಸೇವೆ ಮಾಡಿಕೊಂಡಿರುವೆನು. ಅವರ ಇಂಗಿತವನ್ನು ಅನುಸರಿಸಿ
ನಡೆಯುವೆನು. ಎಂದಾದರೂ ಅವರ ಆಜ್ಞೆಗೆ ವಿರೋಧವಾದ
ಕೆಲಸವನ್ನು ಮಾಡಲೊಲ್ಲೆನು. ನಾವು ಪ್ರೀತಿಸಿದರೆ ಅವರೂ
ಪ್ರೀತಿಯನ್ನು ತೋರಿಸುವರು. ಇದರಲ್ಲಿ ವಿಶೇಷವೇನೂ ಇಲ್ಲ.
ಅದು ಹಾಗಿರಲಿ. ರಸಿಕನಾದ ಶ್ರೀ ಕೃಷ್ಣನಿಗೆ ಹದಿನಾರು ಸಾವಿರ
ಸ್ತ್ರೀಯರಿರುವರಂತೆ! ಅವರಲ್ಲಿ ಆ ಮಹಾತ್ಮನಿಗೆ ಯಾರ ಮೇಲೆ
ಪ್ರೀತಿ ಹೆಚ್ಚು. ನೀವಾದರೋ ಮುಗ್ಧೆಯರು. ನಿಮ್ಮ ಪತಿ
ಬಹು ಚತುರನು. ಅಷ್ಟು ಮಂದಿ ಹೆಂಗಸರಲ್ಲಿ ಆತನ ಪ್ರೀತಿವಿ
ಶ್ವಾಸಗಳು ನಿಮ್ಮ ಮೇಲೆ ಹೆಚ್ಚಾಗಿರಬೇಕಾದರೆ ನೀವೇ ಸೌಂದ
ರ್ಯದ ಗಣಿಯಾಗಿರುವುದು ಮುಖ್ಯ ಕಾರಣವೋ ಅಥವಾ ನಿಮ್ಮ
ನಡೆನುಡಿಗಳ ಕೌಶಲ್ಯವೋ ನನಗೆ ತಿಳಿಯದು. ನನ್ನ ಪತಿಗಳೇ
ನೋ ಧರ್ಮಾವಲಂಬಿಗಳು. ರಸಿಕತೆಯು ಅವರಲ್ಲಿ ಹೆಚ್ಚಾಗಿ
ಲ್ಲ. ನಾನು ಹೇಗೆ ನಡೆದರೂ ಸೈರಿಸಿಕೊಂಡು ಹೋಗುವರು.

ಈ ರೀತಿಯಲ್ಲಿ ದ್ರೌಪದೀ ಸತ್ಯಭಾಮೆಯರು ಸರಸಸಲ್ಲಾಪಗ
ಳಿಂದ ಹೊತ್ತು ಕಳೆಯುತ್ತಿದ್ದರು. ಬಳಿಕ ಒಂದು ದಿನ ಶ್ರೀ ಕೃಷ್ಣ
ನು ಯುಧಿಷ್ಠಿರನನ್ನು ನೋಡಿ “ಭಾವಾ! ನಾವು ಊರನ್ನು ಬಿಟ್ಟು
ಬಹು ದಿನಗಳಾದುವು. ನಮ್ಮ ಶತ್ರುಗಳಾದ ರಾಕ್ಷಸರು ಸುಮ್ಮನೆ ಇರ
ತಕ್ಕವರಲ್ಲ. ನಮ್ಮ ಅಣ್ಣಯ್ಯ, ಪ್ರದ್ಯುಮ್ನ ಮೊದಲಾದವರು ವಿಷಯ
ಲಂಪಟರು. ನಿಮ್ಮನ್ನು ವನದಲ್ಲಿ ಬಿಟ್ಟು ಹೋಗಲಿಕ್ಕೂ ಮನಸ್ಸು ಬಾರ
ದು. ನಿಮ್ಮ ಅವಧಿಯೂ ಮುಗಿಯುತ್ತಾ ಬಂತು. ಸತ್ಯಧರ್ಮಗಳನ್ನು ಕಾ
ಪಾಡುತ್ತಾ ಬಂದಿರಿ. ಕರ್ಣಾದಿಗಳು ದುಡುಕಿ ನಿಮ್ಮ ಮೈಮೇಲೆ ಬೀಳ
ಲಿಕ್ಕೆ ಬಂದರೂ ನೀವು ಅವರನ್ನು ಕೊಂದುಹಾಕದೆ ರಕ್ಷಿಸಿ ಕೀರ್ತಿಯ
ನ್ನು ಪಡೆಯಿರಿ. ಜಯಲಕ್ಷ್ಮಿಯು ನಿಮ್ಮ ಕಡೆಯೇ ಕಟಾಕ್ಷಿಸುತ್ತಿರು
ವಳು. ಎಲೈ ಧರ್ಮಪುತ್ರನೇ! ಅಜ್ಞಾತವಾಸದ ಕಾಲದಲ್ಲಿ ಬಹು ಜಾ
ಗರೂಕರಾಗಿರಬೇಕು. ನಿಮ್ಮನ್ನು ಕಂಡುಹಿಡಿದು ಮತ್ತೆ ಹನ್ನೆರಡು
ವರುಷಗಳ ವನವಾಸಕ್ಕೆ ತಾಂಬೂಲ ಕೊಡಲು ಕೌರವರು ಹಲವು ಬಗೆ

ಪ್ರಯತ್ನಗಳನ್ನು ಮಾಡಬಹುದು. ನೀನೆಲ್ಲರೂ ಒಾದೇ ಕಡೆಯುಲ್ಲಿದ್ದು ಆಗಾಗ್ಗೆ ಪರಸ್ಪರ ಯೋಚಿಸಿ ಯಾವ ಕಾರ್ಯವನ್ನಾದರೂ ಮಾಡುತ್ತಾ, ನನ್ನ ತಂಗಿಯಾದ ಪಾಂಚಾಲಿಯ ಮನಸ್ಸನ್ನು ನೋಯಿಸದೆ ಆ ಅವಧಿ ಯನ್ನು ಕಳೆಯಿರಿ. ಏನಾದರೂ ವಿಶೇಷ ಸಂದರ್ಭ ಬಿದ್ದರೆ ನನ್ನನ್ನು ಸ್ಮರಿಸಿರಿ ಕೂಡಲೆ ಬಂದು ನಿಮ್ಮ ಕಷ್ಟ ಹರಿಸುವೆನು '' ಎಂದು ಹೇ ಳಿ ಆತನ ಅಪ್ಪಣೆ ಪಡೆದು ಸತ್ಯಭಾಮೆಯೊಂದಿಗೆ ದ್ವಾರಕೆಗೆ ಪ್ರಯಾಣ ಮಾಡಿದನು. ಪಾಂಡವರು ಶ್ರೀ ಕೃಷ್ಣನ ಅಗಲಿಕೆಯಿಂದ ಕೆಲವು ದಿನ ಗಳ ತನಕ ಚಿಂತೆಯಲ್ಲಿದ್ದರು. ವನವಾಸದ ಅವಧಿಯಲ್ಲಿ ಹತ್ತು ವರು ಷಗಳು ಕಳೆದುಹೋದುವು. ಬಳಿಕ ಮೊದಲಿದ್ದ ದ್ವೈತಾರಣ್ಯಕ್ಕೇನೇ ಬಂದು ಅಲ್ಲಿ ವಾಸಮಾಡಿಕೊಂಡಿದ್ದರು.

ಅತ್ತ ಹಸ್ತಿನಾಪುರದಲ್ಲಿ ದುರ್ಯೋಧನನು ರಾಜ್ಯಪದವಿಯನ್ನನುಭ ವಿಸಿಕೊಂಡು ಸುಖವಾಗಿದ್ದನು. ಒಂದು ದಿನ ದೂರ್ವಾಸ ಮಹರ್ಷಿಯು ಹಲವು ಮಂದಿ ಮುನಿಜನರನ್ನು ಕರೆದುಕೊಂಡು ಅಲ್ಲಿಗೆ ಬಂದನು. ಆ ಸುದ್ದಿಯನ್ನು ಕೇಳಿ ಕುರುಪತಿಯು ಭೀಷ್ಮದ್ರೋಣಾದಿ ಗುರುಹಿರಿ ಯರನ್ನು ಮುಂದಿಟ್ಟುಕೊಂಡು ಹೋಗಿ ಅವರನ್ನೆದುರುಗೊಂಡು ಸತ್ಕರಿ ಸಿ ಕರೆದುತಂದನು. ಅವರನ್ನು ತನ್ನ ಅರಮನೆಯಲ್ಲಿಯೇ ಇಳಿಸಿ, ಸ ಮಸ್ತೋಪಚಾರಗಳಿಂದ ಅವರನ್ನು ಮನ್ನಿಸಿದನು. ಆತನ ಸೇವೆಯನ್ನು ಪರಿಗ್ರಹಿಸಿ, ಆತಿಥ್ಯಕ್ಕೆ ಮೆಚ್ಚಿ ಆ ದುರ್ವಾಸ ಋಷಿಯು ದುರ್ಯೋಧನ ನನ್ನು ನೋಡಿ " ಎಲೈ ಕುರುರಾಜನೇ ! ಎಂಭತ್ತೆಂಟು ಸಾವಿರ ಮುನಿ ಗಳಿಗೂ ಯಾವ ಕೊರತೆಯೂ ಇಲ್ಲದಂತೆ ಆದರಿಸಿ ಆತಿಥ್ಯವನ್ನು ನಡೆಸಿದೆ. ನಮ್ಮ ಮನಸ್ಸಿಗೆ ಇದರಿಂದ ಬಹು ಸಂತೋಷವಾಯಿತು. ನಿನಗೆ ಬೇ ಕಾದ ಒಂದು ವರವನ್ನು ಬೇಡು. ಕೊಡುವೆನು '' ಎಂದನು. ದುರು ಳನಾದ ದುರ್ಯೋಧನನಿಗೆ ಯಾವಾಗಲೂ ಪಾಂಡವರ ಅಭಿವೃದ್ಧಿಗೆ ಭಂಗ ತರಬೇಕೆಂಬುದೇ ಮುಖ್ಯೋದ್ದೇಶವಾಗಿದ್ದಿತು. ಈಶ್ವರಾಂಶಸಂಭ ವನಾದ ಈ ಮಹರ್ಷಿಗೆ ಕೋಪಬಂದರೆ ಆ ಪಾಂಡವರ ವಂಶವನ್ನೇ ನಾಶಮಾಡಿಬಿಡುವನೆಂತಲೂ, ಈತನಿಗೆ ಸಿಟ್ಟು ಬರುವಂತೆ ಮಾಡಬೇಕೆಂ ತಲೂ, ಯೋಚಿಸಿ " ಮಹಾಸ್ವಾಮಿ! ತಾವು ಮೆಚ್ಚಿದುದಾದರೆ ಈ ಮುನಿ

ಜನರನ್ನೆಲ್ಲಾ ಕರೆದುಕೊಂಡು ಪಾಂಡವರಿರುವ ಅರಣ್ಯಕ್ಕೆ ಹೋಗಿ, ದ್ರೌಪದಿಗೆ ಭೋಜನವಾದ ಮೇಲೆ ಎಲ್ಲರಿಗೂ ಆಹಾರ ಕೊಡಬೇಕೆಂದು ಕೇಳಿರಿ. ನನಗೆ ಇದೊಂದು ವರವೇ ಸಾಕು. ಮತ್ತೇನೂ ಬೇಕಾಗಿಲ್ಲ" ಎಂದು ಪ್ರಾರ್ಥಿಸಿದನು. ಆಹಾ ! ಇದು ಎಂತಹ ಹುಚ್ಚು ! ಮೂರ್ಖರು ತಮ್ಮ ಅಪಾಯವನ್ನು ಸುದಾ ಚಿಂತಿಸದೆ ಇತರರಿಗೆ ಕೇಡು ಸಂಭವಿಸಿದರೆ ಸಾಕೆಂದು ಆಲೋಚಿಸುವರು. ಸ್ವಾರ್ಥವನ್ನು ಸುದಾ ಅಪೇಕ್ಷಿಸದ ಈ ದುಷ್ಟಾತ್ಮರಿಂದ ಭೂಭಾರ ಹೆಚ್ಚಾಗುವುದೇ ಹೊರತು ತಗ್ಗುವುದಿಲ್ಲ. ಆ ಮುನಿಸಿನ ಮುನಿಯು ಜನಪತಿಯ ಮನದೆಣಿಕೆಯನ್ನು ಗ್ರಹಿಸಿ, ನಿನ್ನ ಇಷ್ಟದಂತೆ ನಡೆಸುವೆನೆಂದು ಎಲ್ಲರನ್ನೂ ಕರೆದುಕೊಂಡು ಅಲ್ಲಿಂದ ಹೊರಟು ಪಾಂಡವರಿದ್ದ ಕಾಡಿಗೆ ಹೋಗಿ ಸೇರಿದನು. ಆಹಾ ! ದುರಾತ್ಮರ ಹೃದಯವನ್ನು ಬಲ್ಲವರಿಲ್ಲ. ನಿಷ್ಕಪಟಿಗಳಾದ ಪಾಂಡವರು ತಮ್ಮ ಷ್ಟಕ್ಕೆ ತಾವು ಕಾಡಿನಲ್ಲಿ ಕಷ್ಟಪಟ್ಟುಕೊಂಡು ಕಾಲವನ್ನು ಕಳೆಯುತ್ತಿದ್ದರೂ ಅವರಿಗೆ ಉಳಿವು ಬಾಳಿಲ್ಲ.

ಕೌರವನ ಕೋರಿಕೆಯಂತೆ ದ್ರೌಪದಿಯ ಭೋಜನವಾದ ಮೇಲೆ ಆ ಮುನಿಸಿನ ಮುನಿಯು ತನ್ನ ಸಂಗಡಿಗರೊಡನೆ ಪಾಂಡವರ ಆಶ್ರಮಕ್ಕೆ ಬಂದನು. ಯುಧಿಷ್ಠಿರನಿಗೆ ಆ ಋಷಿಯ ಉದ್ದೇಶವೇನು ತಿಳಿಯುವುದು ? ತಮ್ಮಂದಿರೊಂದಿಗೆ ಆ ದೂರ್ವಾಸನನ್ನೆದುರುಗೊಂಡು ಕರೆದು ತಂದು ಭಕ್ತಿಯಿಂದ ಸತ್ಕರಿಸಿ, ಕುಶಲ ಪ್ರಶ್ನೆಗಳನ್ನು ವಿಚಾರಿಸಿದನು. ಆತನು ಪಾಂಡವ ಕ್ಷೇಮಸಮಾಚಾರವನ್ನೂ, ಧೌಮ್ಯಾದಿ ಮುನಿಜನರ ಯೋಗಕ್ಷೇಮವನ್ನೂ ಕೇಳಿ ತಿಳಿದುಕೊಂಡು, ಅವರು ಕೊಟ್ಟ ದರ್ಭಾಸನದಲ್ಲಿ ಕುಳಿತು, ಅರ್ಘ್ಯಪಾದ್ಯಾಚಮನಾದಿಗಳನ್ನು ಸ್ವೀಕರಿಸಿ, ಮಧುಪರ್ಕವನ್ನು ಕೈಕೊಂಡನು. ಬಳಿಕ ಯುಧಿಷ್ಠಿರನು ಆ ಮುನೀಂದ್ರನನ್ನು ನೋಡಿ " ಮಹರ್ಷಿಗಳೇ ! ಅರಣ್ಯವೇ ನನ್ನ ದೇಶವು. ಪರ್ವತವೇ ನನ್ನ ವಾಸಸ್ಥಳವು. ಈ ಬ್ರಾಹ್ಮಣೋತ್ತಮರೇ ನನ್ನ ಆತ್ಮೀಯರು. ಮುತ್ತುಗದೆಲೆಗಳೇ ಭೋಜನಪಾತ್ರೆಗಳು. ಕಂದಮೂಲಫಲಗಳೇ ನಮ್ಮ ಆಹಾರವಸ್ತುಗಳು. ಈ ಕೊಳದ ನೀರೇ ಪಾನೀಯವು. ನಾನು ನಿಮಗೆ ಯಾವ ಉಪಚಾರವನ್ನು ಮಾತಬಲ್ಲೆನು. ಭಕ್ತಿಯಿಂದ

ನಾನು ಒಪ್ಪಿಸುವ ವಸ್ತುಗಳನ್ನೇ ಭೋಗ್ಯವಾಗಿ ಪರಿಗ್ರಹಿಸಿ ರಕ್ಷಿಸಬೇಕೆಂದು ಉಪಚಾರೋಕ್ತಿಗಳನ್ನು ಹೇಳಿದನು'' ಅದಕ್ಕಾ ಮುನಿಯು "ಯುಧಿಷ್ಠಿರಾ! ನೀನು ಚಿಂತಿಸಬೇಡ. ರಾಜರ್ಷಿಯಾದ ನೀನು ಎಲ್ಲಿದ್ದರೂ ಅದೇ ನಿನಗೆ ಉತ್ತಮ ರಾಜ್ಯವಾಗಿರುವುದು. ಅಜಾತಶತ್ರುವಾದ ನಿನಗೆ ಎಣೆಯಾರು? ಸದ್ಗುಣಮಂಡಿತನಾದ ನಿನಗೆ ಚಿಂತೆಯೆಂದರೇನು? ಆ ಮಾತು ಹಾಗಿರಲಿ. ನಾನೊಬ್ಬನೇ ಅಲ್ಲ. ನನ್ನ ಸಂಗಡ ಬಹು ಮಂದಿ ಬಂದಿರುವರು. ಇವರೆಲ್ಲರೂ ಹಸಿವಿನಿಂದ ಪೀಡಿತರಾಗಿ ಬಳಲಿರುವರು. ನಮ್ಮ ಕ್ಷುದ್ಬಾಧೆಯನ್ನು ಪರಿಹರಿಸಲು ಬೇಗ ಪ್ರಯತ್ನಿಸು'' ಎಂದನು. ಯುಧಿಷ್ಠಿರನು "ಸ್ವಾಮಿ! ಇಷ್ಟು ಮಂದಿ ಮಹನೀಯರು ಅನುಗ್ರಹಿಸಿ ಬಂದುದರಿಂದ ನಾನೇ ಸುಕೃತಿಯು. ತಮ್ಮಂತವರ ಆತಿಥ್ಯಕ್ಕೆ ಅನುಕೂಲ ಪಡಿಸದವನ ಜನ್ಮದಿಂದೇನು ಫಲವು? ತಾವು ಸ್ವಲ್ಪವೂ ಚಿಂತಿಸಬಾರದು. ಎಲ್ಲರೂ ಸ್ನಾನಾನುಷ್ಠಾನಾದಿಗಳನ್ನು ತೀರಿಸಿಕೊಂಡು ಜಾಗ್ರತೆಯಾಗಿ ದಯಮಾಡಿಸಬೇಕು. ಸರ್ವವನ್ನೂ ಸಿದ್ಧಪಡಿಸಿರುವೆನು'' ಎಂದು ಹೇಳಿ ಅವರನ್ನು ಜಲಾಶಯಕ್ಕೆ ಕಳುಹಿದನು.

ಬಳಿಕ ಆ ರಾಯನು ದ್ರೌಪದಿಯನ್ನು ಕರೆಸಿ ಕೇಳಲು ಆಕೆಯು "ಈಗ ತಾನೇ ನಾನು ಭೋಜನ ಮಾಡಿಬಿಟ್ಟೆನು. ಇನ್ನು ನಮ್ಮ ಅಕ್ಷಯಪಾತ್ರೆಯು ಇಂದಿನ ಆಹಾರ ಪದಾರ್ಥಗಳನ್ನು ಒದಗಿಸಲಾರದು. ಏನು ಮಾಡಲಿ!'' ಎಂದು ನೊಂದುಕೊಂಡಳು. ಎಲ್ಲರೂ ಬಂದು ಸೇರಿದರು. ಎಷ್ಟೆಷ್ಟು ಯೋಚಿಸಿದರೂ ಬಗೆಹರಿಯದು. ರಾಯನ ಮನಸ್ಸು ಕಳವಳಗೊಂಡಿತು. ಕಣ್ಣುಗಳಿಂದ ನೀರು ಹರಿಯತೊಡಗಿತು. ಅವನ ಮುಖವು ಉರಿಹೊಡೆದ ಕೆಂದಾವರೆಯ ಹಾಗೆ ಸುಟ್ಟ ಕರುಕು ಬಣ್ಣದಿಂದ ಕಾಣಿಸಿತು. ಅವನು ಕೆನ್ನೆಯ ಮೇಲೆ ಕೈಯಿಟ್ಟು, ಏನೂ ತೋರದೆ ಸ್ವಲ್ಪ ಹೊತ್ತು ಚಿಂತಿಸುತ್ತಿದ್ದು ಇಂತೆಂದನು.

ಅಯ್ಯೋ! ಎಂತಹ ವಿಪತ್ತು ಬಂತು! ಇಂದ್ರನ ಸಕಲೈಶ್ವರ್ಯಗಳನ್ನೂ ಸಮುದ್ರದಲ್ಲಿ ಕದಡಿದ ಈ ಕೋಪಿಷ್ಠನಾದ ದೂರ್ವಾಸನು ಮುನಿದರೆ ಮೂರು ಲೋಕಗಳನ್ನೂ ಸುಟ್ಟುಬಿಡುವನು. ಈತನು

ನನ್ನೊಬ್ಬನಿಗೆ ಶಾಪಕೊಟ್ಟರೂ ನನಗೆ ಭಯವಿಲ್ಲ. ನನ್ನ ಮಾತಿಗೆ ಅಸತ್ಯ ಬಂದರೆ ನಾನು ಬದುಕಿದ್ದರೂ ಸತ್ತಂತೆಯೇ ಸರಿ. ದೇವರು ಈ ಕಷ್ಟವನ್ನು ಹೇಗೆ ಪರಿಹರಿಸುವನೋ ಕಾಣೆನು.

ಭೀಮನು (ಗದೆಯನ್ನು ಕೈಗೆ ತೆಗೆದುಕೊಂಡು) ಅಣ್ಣಯ್ಯಾ! ಮನೋವ್ಯಥೆಯನ್ನು ಬಿಟ್ಟು ಬಿಡು. ನಿನ್ನ ನುಡಿಗೆ ಭಂಗ ಬರುವ ವೇಳೆಗೆ ಇಂದ್ರನ ಅಮರಾವತಿಯನ್ನಾದರೂ ಸುಟ್ಟು ಬರುವೆನು. ಸ್ವರ್ಗದ ಕಾಮಧೇನುವನ್ನು ಕಾಲುಹಿಡಿದು ಎಳೆದು ತರುವೆನು. ಚಿಂತಸಬೇಡ.

ಧೌಮ್ಯನು:—ಅಯ್ಯಾ ರಾಜನೇ! ನಿಮ್ಮ ಕ್ಷಾತ್ರತೇಜಸ್ಸಿಗೆ ಹೆದರಿ ಇಂದ್ರನು ಕಾಮಧೇನುವನ್ನು ಕೊಟ್ಟುಬಿಡುವನೆ? ಕೌರವರ ಸೌಭಾಗ್ಯವು ಹತ್ತಿರದಲ್ಲಿಯೇ ಇರುವಾಗ ನಿಮಗೆ ಇಲ್ಲಿ ಸಹಾಯ ಮಾಡತಕ್ಕವರು ಯಾರಿರುವರು! ಜಮದಗ್ನಿಯ ಕಾಮಧೇನುವಿಗೆ ಆಶಿಸಿದ ಕಾರ್ತವೀರ್ಯಾರ್ಜುನನ ಗತಿ ಬಂದೀತು? ಈ ಭೀಮಸೇನನು ಶೂರನಾದರೂ ಈ ವೇಳೆಯಲ್ಲಿದು ನಡೆಯತಕ್ಕುದಲ್ಲ. ಇದಕ್ಕೆ ನಾನೊಂದು ಉಪಾಯ ಹೇಳುವೆನು. ನಿಮ್ಮ ಪ್ರಾಣರಕ್ಷಣೆಗೆ ಹೊಣೆಯಾಗಿರುವ ಕೃಷ್ಣದೇವರಿಲ್ಲವೆ? ಆತನನ್ನು ಧ್ಯಾನಿಸಿರಿ. ಈಗಲೇ ಬಂದು ನಿಮಗೆ ಸಂಭವಿಸಬಹುದಾದ ವಿಪತ್ತನ್ನು ಪರಿಹರಿಸುವನು. ಹಿಂದೆ ದ್ರೌಪದಿಯ ಸೀರೆಯನ್ನು ಸೆಳೆದು ಮಾನಭಂಗ ಮಾಡಿದಾಗ ಅಕ್ಷಯವಸ್ತ್ರವಿತ್ತು ರಕ್ಷಿಸಿದವರಾರು? ಯಾವ ಪರಮಾತ್ಮನ ಹೆಸರನ್ನು ಧ್ಯಾನಿಸಿದರೆ ಸಕಲೇಷ್ಟಗಳೂ ಸಿದ್ಧಿಸುವುವೋ ಅಂತಹ ದೇವದೇವನು ನಿಮ್ಮವನಾಗಿರುವಾಗ ಈ ಕಷ್ಟಕಾಲದಲ್ಲಿ ಆತನನ್ನು ಮರೆಯಬಹುದೆ? ಈ ದ್ರೌಪದಿಯು ನೆನೆದರೆ ಕೂಡಲೇ ಅವನು ಬರುವನು. ಈಕೆಯು ಶ್ರೀಕೃಷ್ಣನನ್ನು ಸ್ಮರಿಸುವುದು ಯುಕ್ತವು.

ತಮಗಾಗಿ ಬ್ರಾಹ್ಮಣರು ಅನುತಾಪಗೊಳ್ಳುವುದನ್ನೂ, ಯುಧಿಷ್ಠಿರನು ಚಿಂತೆಯಿಂದ ದಿಕ್ಕುತೋರದೆ ಕುಳಿತಿರುವುದನ್ನೂ, ಭೀಮಸೇನನ ಆವೇಶವನ್ನೂ, ಅರ್ಜುನನ ಆಗ್ರಹವನ್ನೂ, ಮಾದ್ರೀಪುತ್ರರ ಕಳವಳವನ್ನೂ ಕಂಡು ದ್ರೌಪದಿಯು ಅವರಂತೆ ತಾನೂ ದುಃಖಿಸುತ್ತಾ ಕುಳಿ

ತರೆ ಈ ವೇಳೆಯಲ್ಲಿ ವಿಪತ್ತು ತಪ್ಪುವುದಿಲ್ಲವೆಂದು ಚಿಂತಿಸಿ, ಪುರೋಹಿತರ ಉಪದೇಶದಂತೆ ಕೂಡಲೇ ಪರಿಶುದ್ಧಭಾವದಿಂದ ಶ್ರೀ ಕೃಷ್ಣನನ್ನು ಹೀಗೆ ಧ್ಯಾನಿಸಿದಳು.

ಎಲೈ ಲಕ್ಷ್ಮೀರಮಣನೇ, ದಾನವಮರ್ದನಾ, ಜನನಮರಣವಿದೂರಾ, ಶ್ರೀ ಕೃಷ್ಣಾ, ಸಾಕ್ಷಾತ್ಕರಿಸು. ಪರಮೇಶ್ವರಾಂಶಸಂಭವನಾದ ದೂರ್ವಾಸನ ನೇತ್ರಾಗ್ನಿಗೆ ಆಹುತಿಯಾಗಿ ನನ್ನ ಪತಿಗಳೈವರೂ ನಾಶವಾಗುವ ಹೊತ್ತು ಬಂದಿದೆ. ನೀನು ಈ ವೇಳೆ ಬಂದು ಯುಧಿಷ್ಠಿರನ ವಾಗ್ದಾನವನ್ನು ಸತ್ಯಗೊಳಿಸದಿದ್ದರೆ ನಾವೆಲ್ಲರೂ ನಿರ್ನಾಮವಾಗುವೆವು. ಎಲೈ ದೇವದೇವನೇ, ಬೇಗನೆ ಬಾ. ಹಿಂದೆ ಸಂಭವಿಸಿದ್ದ ಹಲವು ವಿಪತ್ತುಗಳಿಂದ ತಪ್ಪಿಸಿ ರಕ್ಷಿಸಿದವನು ನೀನೇ ಅಲ್ಲವೇ? ಈಗಲೀರುದ್ರಾಂಶದ ಮುನಿಯು ಮುನಿದು ನಮ್ಮನ್ನೆಲ್ಲಾ ನಾಶಮಾಡಿಬಿಡುವನಲ್ಲ! ಮುಂದೇನು ಗತಿ? ಎಲೈ ಆಶ್ರಿತವತ್ಸಲನೆ! ಕರುಣಾಸಮುದ್ರನೇ, ನಿನ್ನನ್ನು ಹುಡುಕಿಕೊಂಡು ಬರಲೇ? ಸರ್ವವ್ಯಾಪಿಯಾದ ನೀನು ಇಲ್ಲದ ಸ್ಥಳವೇ ಇಲ್ಲ. ನನ್ನ ಗತಿ ಹೀಗಾಯಿತೆಂದು ವಿವರಿಸಲೇ? ಸರ್ವಜ್ಞನಾದ ನಿನಗೆ ತಿಳಿಯದ ವಿಷಯವೇನಿದೆ? ಕೃಷ್ಣಾ! ನೀನೇ ತಾಯಿ, ನಾವೇ ಮಕ್ಕಳು. ಈ ಸಮಯದಲ್ಲಿ ಕೈಬಿಡಬೇಡ. ಸುಮ್ಮನೆ ಹೊತ್ತು ಕಳೆದರೆ ಮಹರ್ಷಿಯು ಬಂದುಬಿಡುವನು. ತೀವ್ರಕೋಪಿಯಾದ ಆತನು ಪೂರ್ವದಲ್ಲಿ ತನಗೆ ಪಾರಣೆಗೆ ಬರಹೇಳಿ, ತಾನು ಬರುವ ತನಕ ನಿರೀಕ್ಷಿಸದೆ ಹೋದನೆಂದು ಅಂಬರೀಷನ ಮೇಲೆ ಮುಳಿದು ತನ್ನ ಕೋಪಾಗ್ನಿಯಿಂದ ಆ ರಾಜನನ್ನು ಭಸ್ಮಮಾಡಿ ಬಿಡುವೆನೆಂದು ಯತ್ನಿಸಲು, ಆ ರಾಜನು ನಿನ್ನನ್ನು ಪ್ರಾರ್ಥಿಸಿದನು. ಆಗ ನೀನು ಸುದರ್ಶನ ಚಕ್ರಕ್ಕೆ ಅಪ್ಪಣೆ ಮಾಡಲು ಆ ಚಕ್ರವು ದೂರ್ವಾಸನನ್ನು ಎಲ್ಲಿಗೆ ಹೋದರೂ ಬಿಡದೆ ಬೆಂಬತ್ತಿ ಹಿಡಿಯಬಂತು. ಕೊನೆಗೆ ಆತನು ಅಂಬರೀಷನನ್ನೇ ಮರೆಹೊಕ್ಕು ತನ್ನ ಪ್ರಾಣವನ್ನು ರಕ್ಷಿಸಿಕೊಳ್ಳುವಂತೆ ಮಾಡಿದೆ. ಭಕ್ತಪರಾಧೀನನಾದ ನೀನು ಈಗ ನಮ್ಮನ್ನು ಕೈಬಿಡುವೆಯಾ? ಆಪದ್ರಕ್ಷಕಾ! ಹಿಂದೆ ಮಹಾಮಕರದ ಬಾಯಿಗೆ ತುತ್ತಾಗಿದ್ದ ಗಜೇಂದ್ರನು ತನ್ನ ವಿಪತ್ತನ್ನು ತಪ್ಪಿಸಬೇಕೆಂದು ಪ್ರಾರ್ಥಿಸಲು, ಲಕ್ಷ್ಮೀದೇವಿಗೆ ಕೂಡ ಹೇಳದೆ ಓಡಿಬಂದು

ಚಕ್ರದಿಂದಲಾನಕ್ರನನ್ನು ಸಂಹರಿಸಿ ಗಜರಾಜನನ್ನು ರಕ್ಷಿಸಲಿಲ್ಲವೆ ? ಕಂದನಾದ ಪ್ರಹ್ಲಾದನ ಮೊರೆಯನ್ನು ಲಾಲಿಸಿ, ಸ್ತಂಭದಲ್ಲಿ ಅವತರಿಸಿ ದುರುಳನಾದ ಹಿರಣ್ಯಕಶಿಪುವಿನ ಸೊಕ್ಕನ್ನು ಮುರಿದು ಬಾಲನನ್ನು ಪಾಲಿಸಲಿಲ್ಲವೆ ? ದೇವಾ ! ದೇವಕೀನಂದನಾ, ವಿಪತ್ಸಮುದ್ರದಲ್ಲಿ ಮುಳುಗಿಹೋಗುತ್ತಿರುವ ನಮ್ಮನ್ನು ದಡಕ್ಕೆ ತಂದುಬಿಡು.

ಈ ಪ್ರಕಾರವಾಗಿ ದೃಢಚಿತ್ತದಿಂದ ಪ್ರಾರ್ಥಿಸಿದ ಪಾಂಚಾಲಿಯ ಮೊರೆಯನ್ನು ಕೇಳಿದ ಕ್ಷಣದಲ್ಲಿಯೇ ಶ್ರೀ ಕೃಷ್ಣನು ಅಲ್ಲಿ ಪ್ರತ್ಯಕ್ಷನಾಗಿ ಬಂದುನಿಂತನು. ಪಾಂಡವರು ಧೌಮ್ಯಾದಿ ಮುನಿಜನರೊಂದಿಗೆ ಆತನನ್ನು ಎದುರುಗೊಂಡು ಕರೆದುತಂದರು. ಅವನು ನೆಟ್ಟಗೆ ದ್ರೌಪದಿಯ ಬಳಿಗೆ ಬಂದು, " ತಂಗೀ ! ಏತಕ್ಕೆ ಚಿಂತಿಸುವೆಯಮ್ಮಾ ! ಸಮಾಧಾನವನ್ನು ತಂದುಕೋ ನಾನು ಬಂದಿರುವುದು ಕೂಡ ತಿಳಿಯದೆ ಕಣ್ಣು ಮುಚ್ಚಿಕೊಂಡಿರುವೆಯಲ್ಲಾ ! ಏಳು ಕಣ್ತೆರೆ " ಎಂದನು. ಶ್ರೀಕೃಷ್ಣನ ಮಾತನ್ನು ಕೇಳಿದ ಕೂಡಲೇ ಆ ಸಾಧ್ವಿಯು ಕಣ್ದೆರೆದು ಸ್ವಾಮಿಯ ಶ್ರೀಮೂರ್ತಿಯನ್ನು ಕಣ್ದಣಿಯೆ ನೋಡಿ, ಆನ ದಭರಿತಳಾಗಿ ಆ ದೇವನ ಪಾದಗಳಲ್ಲಿ ಅಡ್ಡಬಿದ್ದು " ಆಹಾ ! ಭೂಮಿಯನ್ನೆಲ್ಲಾ ಮೂರೇ ಹೆಜ್ಜೆಯಾಗಿ ಅಳೆದ ಪಾದವು ಇದೇ. ಅರೆಬಂಡೆಯಾಗಿ ಬಿದ್ದಿದ್ದ ಅಹಲ್ಯೆಯ ಶಾಪವನ್ನು ಪರಿಹರಿಸಿದುದು ಈ ಪಾದವೇ ಅಲ್ಲವೇ ? ದೇವಗಂಗೆಯನ್ನು ಪಡೆದ ಪಾವನ ಪಾದವು ಇದೇ, ಇದೇ ಪಾದವಲ್ಲವೇ ಶಕಟಾಸುರನನ್ನು ಒದೆದು ಕೆಡಹಿದುದು. ಇಂತಹ ಪಾದಗಳು ನಮಗೆ ರಕ್ಷೆಯಾಗಿರಲಿ " ಎಂದು ಕಣ್ಣಿಗೆ ಒತ್ತಿಕೊಳ್ಳುತ್ತಿದ್ದಳು. ಆಗ ಶ್ರೀ ಕೃಷ್ಣನು " ದ್ರೌಪದೀ ! ಸ್ತೋತ್ರಗಳಿಂದ ಹೊತ್ತು ಕಳೆಯುಲಿಕ್ಕೆ ಇದು ವೇಳೆಯಲ್ಲ. ನಿನ್ನ ಅಂತರಂಗವನ್ನು ಬಿಚ್ಚಿ ಬೇಗ ಹೇಳು " ಎಂದು ತಲೆ ಹಿಡಿದು ಮೇಲಕ್ಕೆತ್ತಿ ನುಡಿಸಲು ಪಾಂಚಾಲಿಯು " ಅಣ್ಣಾ ! ಶಿವನ ಅವತಾರವಾದ ದೂರ್ವಾಸ ಮುನಿಯು ಹಸಿವಿನಿಂದ ಬಂದು ಅನ್ನವನ್ನು ಬೇಡಿದನು ಅನ್ನವು ಸಿದ್ಧವಾಗಿರುವುದು. ನಿಮ್ಮ ಅನುಷ್ಠಾನಗಳನ್ನು ಮುಗಿಸಿಕೊಂಡು ದಯಮಾಡಿಸಬಹುದೆಂದು ರಾಯನು ಆಮಂತ್ರಣ ಕೊಟ್ಟನು. ಮನೆಯಲ್ಲಿ ನೋಡಿದರೆ ಅಕ್ಷಯಪಾತ್ರೆಯು ಬರಿದಾಗಿದೆ. ಈಗ ಮುನಿ

ಗೂ ಆತನ ಸಂಗಡ ಬಂದಿರುವ ಎಂಬತ್ತೆಂಟು ಸಾವಿರ ಋಷಿಗಳಿಗೂ ಆಹಾರವನ್ನು ಎಲ್ಲಿಂದ ತಂದು ಬಡಿಸಲಿ? ಆ ಮುನಿಯು ಮುನಿದರೆ ನಿನ್ನ ಪ್ರಾಣಪದರಾದ ಅಯ್ಯರನ್ನೂ ಪಾರಣೆ ಮಾಡದೆ ಬಿಡನು. ಈಗ ಏನು ಮಾಡಬೇಕೆಂಬುದು ತೋರದೆ ನಿನ್ನನ್ನು ಧ್ಯಾನಿಸಿದೆನು" ಎಂದು ಹೇಳಿದಳು. ಶ್ರೀ ಕೃಷ್ಣನು "ಪಾಂಚಾಲಿಯೇ, ನಾವು ಬಹು ದೂರದಿಂದ ಹಸಿದುಕೊಂಡು ಬಂದಿರುವಾಗ ಈ ರೀತಿಯಾಗಿ ದೂರುಗಳನ್ನು ಹೇಳುತ್ತಾ ಹೊತ್ತು ಕಳೆಯುವುದು ಸರಿಯೆ?" ಎನ್ನಲು ಆಕೆಯು ಗಡಗಡನೆ ನಡುಗುತ್ತಾ ಕೈಮುಗಿದು ನಿಂತುಕೊಂಡು "ಎಲೈ ಪರಮಾತ್ಮನೇ! ನಿಮ್ಮ ಹಸಿವನ್ನು ಕಳೆಯಬೇಕಾದರೆ ಅಚಂಚಲವಾದ ಭಕ್ತಿಯೇ ಹೊರತು ಮತ್ತಾವ ಭುಕ್ತಿಯೂ ನಮ್ಮಲ್ಲಿಲ್ಲ. ಅಬಲೆಯರಾದ ನಾವು ಚಂಚಲೆಯರೆಂಬುದು ನೀನರಿಯೆಯಾ?" ಎನಲು ಶ್ರೀ ಕೃಷ್ಣನು "ತಂಗೀ! ಈ ಮಾತುಗಳೂ ಸ್ತೋತ್ರಗಳೂ ಇರಲಿ. ನೀನು ಪ್ರೀತಿಯಿಂದ ಕೊಟ್ಟದ್ದೇ ನಮಗೆ ಅಮೃತವು ಇದ್ದುದನ್ನು ತಂದೊಪ್ಪಿಸು. ತಡೆಮಾಡಬೇಡ" ಎಂದನು. ಆಗಲು ದ್ರೌಪದಿಯು ಭಯದಿಂದ ಮನೆಯೊಳಕ್ಕೆ ಹೋಗಿ ಸೂರ್ಯನು ಕೊಟ್ಟಿದ್ದ ಸ್ಥಾಲಿಯನ್ನು ತಂದು ಸ್ವಾಮಿಯ ಮುಂದೆ ಇರಿಸಿ "ಸ್ವಾಮಿ! ಇಗೋ ಇದೇ ನಮ್ಮ ಆಸ್ತಿ. ನಿನಗೆ ಬೇಕಾದುದನ್ನು ತಿಂದು ತೃಪ್ತನಾಗು" ಎಂದು ಒಪ್ಪಿಸಿದಳು.

ಆಗ ಶ್ರೀ ಕೃಷ್ಣನು ಅಕ್ಷಯಪಾತ್ರೆಯನ್ನು ತನ್ನ ಕೈಗೆ ತೆಗೆದುಕೊಂಡು, ಶೋಧಿಸಿ ನೋಡಿ, ಅದರಲ್ಲಿ ಮೆತ್ತಿಕೊಂಡಿದ್ದ ಒಂದೇ ಒಂದು ಅಗುಳು ಅನ್ನವನ್ನು ತೆಗೆದು ತನ್ನ ಬಾಯಲ್ಲಿ ಹಾಕಿಕೊಂಡು ತೃಪ್ತನಾಗಿ, ತಲೆದೂಗಿ ತೇಗಿದನು. ಕೂಡಲೇ ಆ ಪಾತ್ರೆಯಲ್ಲಿ ಭಕ್ಷ್ಯ ಭೋಜ್ಯ ಲೇಹ್ಯ ಚೋಷ್ಯಗಳೆಂಬ ಚತುರ್ವಿಧಾನ್ನಗಳೂ ಪರಿಪೂರ್ಣವಾದುವು. ಸ್ವಾಮಿಯು ದ್ರೌಪದಿಯನ್ನು ನೋಡಿ "ತಂಗೀ! ಇನ್ನು ನೀನು ಹೆದರಬೇಡ. ವಿಷವು ಕಳೆದು ಅಮೃತವಾಯಿತು. ಧೈರ್ಯದಿಂದ ಇರಮ್ಮಾ" ಎಂದು ಸಮಾಧಾನ ಹೇಳಿದನು.

ಅತ್ತ ಸ್ನಾನಾರ್ಥವಾಗಿ ಹೋಗಿದ್ದ ಋಷಿಗಳಿಗೆಲ್ಲಾ ಹೊಟ್ಟೆ ತುಂಬಿ ತೇಗುಗಳು ಬರುತ್ತಿದ್ದುವು. ಅವರ ಅಳ್ಳೆಗಳು ಹಿಗ್ಗಿದುವು.

ಆಕಂಠಪೂರ್ತಿಯಾಗಿ ಉಂಡಂತೆ ಎಲ್ಲರಿಗೂ ತೃಪ್ತಿಯಾಯಿತು. ಅದನ್ನು ಕಂಡು ದೂರ್ವಾಸ ಮುನಿಯು ಅಲ್ಲಿಗೆ ಶ್ರೀ ಕೃಷ್ಣನು ದಯಮಾಡಿಸಿರುವುದನ್ನು, ಆತನ ಅನುಗ್ರಹದಿಂದ ತನ್ನೆಲ್ಲರ ಹೊಟ್ಟೆಗಳೂ ತುಂಬಿಹೋಗಿ ತನ್ನ ಉದ್ದೇಶಕ್ಕೆ ಭಂಗ ಬಂದಿರುವುದನ್ನು ತನ್ನ ಜ್ಞಾನದೃಷ್ಟಿಯಿಂದ ತಿಳಿದುಕೊಂಡನು. "ಮುಂದೆ ತಾನು ಮಾಡತಕ್ಕುದೇನು! ಆ ದೇವದೇವನಲ್ಲಿ ಸೆಣಸಿ ನಾವು ಬದುಕಬಲ್ಲೆವೆ? ಎಂದಿಗೂ ಇಲ್ಲ. ಹಿಂದೆ ನನಗೆ ಆದ ಪರಿಭವವನ್ನು ನೆನಸಿಕೊಂಡರೆ ಈಗಲೂ ಮೈ ಜುಮ್ಮೆನ್ನುವುದು. ನಮ್ಮ ಗರ್ವಕ್ಕೂ ಕಪಟಕ್ಕೂ ತಕ್ಕ ಪ್ರಾಯಶ್ಚಿತ್ತವಾಯಿತು. ಇತರರಿಗೆ ತಿಳಿಯದಂತೆ ಇಷ್ಟರ ಮರ್ಯಾದೆಯಿಂದ ರಕ್ಷಿಸಿದುದೇ ನಮಗೊಂದು ಗೌರವವು. ನಾವು ಈಗಲೇ ಹೋಗಿ ಆ ಶ್ರೀ ಕೃಷ್ಣ ಪರಮಾತ್ಮನ ಸಂದರ್ಶನ ಮಾಡಿ ಕೃತಾರ್ಥರಾಗುವುದು ಯುಕ್ತವು" ಎಂದು ತಿಳಿದು ಆ ಮುನೀಂದ್ರನು ಸಂಗಡ ಇದ್ದ ಋಷಿಗಳೊಂದಿಗೆ ಧರ್ಮರಾಯನ ಆಶ್ರಮಕ್ಕೆ ಬಂದನು. ಶ್ರೀ ಕೃಷ್ಣನು ಆ ಮಹರ್ಷಿಯನ್ನು ನೋಡುತ್ತಲೇ ಎದ್ದು ಬಂದು ನಮಸ್ಕರಿಸಿ, ಕಾಣಿಕೆ ಕೊಟ್ಟು "ಹೋಹೋ! ರುದ್ರಮಹರ್ಷಿಗಳೇ! ಕ್ಷೇಮವೇ? ಎಲ್ಲಿಂದ ದಯಮಾಡಿಸಿದಿರಿ?" ಎಂದು ಕೇಳಿದನು. ಅದಕ್ಕೆ ದೂರ್ವಾಸನು "ಎಲೈ ಮಾಯಾಮಾನವ ರೂಪನೇ! ಈ ಕಪಟ ನಾಟಕವು ಸಾಕು. ಮಾತಿನಲ್ಲಿ ನೀನು ಬಲು ಜಾಣನೆಂಬುದನ್ನು ಬಲ್ಲೆವು" ಎಂದು ಹೇಳಿ ಶ್ರೀ ಕೃಷ್ಣನನ್ನು ಬಾಚಿ ತಬ್ಬಿಕೊಂಡನು. ಯತಿಗಳು ಬಂದರೆ ಗೃಹಸ್ಥನು ಅವರನ್ನು ಮನ್ನಿಸುವುದು ಲೋಕಪದ್ಧತಿ. ಅದರಂತೆ ಮನುಷ್ಯಾವತಾರವೆತ್ತಿ ಗೃಹಸ್ತನೆನಿಸಿರುವ ನೀನು ನಮಗೆ ವಂದಿಸುವುದು ಸಹಜವೇ ಸರಿ. ಕೃಷ್ಣಾ! ಕುಳ್ಳಿರು ಕುಳ್ಳಿರು" ಎಂದು ವಿನೋದವಾಗಿ ಮಾತನಾಡುತ್ತಿರುವಾಗ ಆತನ ಸಂಗಡ ಬಂದಿದ್ದ ಋಷಿಗಳೆಲ್ಲರೂ ಸಾಲುಗಟ್ಟಿ ಕುಳಿತಿದ್ದರು. ಪಾಂಡವರು ಅವರಿಗೆಲ್ಲಾ ನಮಸ್ಕರಿಸಿ ಬಂದು ಕಡೆಯಲ್ಲಿ ಕುಳಿತಿದ್ದರು. ಆಗ ದ್ರೌಪದಿಯು ಬಂದು ಭಕ್ತಿಯಿಂದ ಆ ದೂರ್ವಾಸಮುನಿಗೆ ನಮಸ್ಕರಿಸಲು ಸುಮಂಗಲೆಯಾಗಿರೆಂದು ಆತನು ಹರಸಿದನು. ಬಳಿಕಲಾ ಮುನಿಯು ಯುಧಿಷ್ಠಿರನನ್ನು ನೋಡಿ "ಎಲೈ ರಾಯನೇ! ನಿಮಗೆ ಶ್ರೀಕೃಷ್ಣನ ಅನುಗ್ರಹವಿ

ರುವಾಗ ಅಸಾಧ್ಯವೇನುಂಟು? ಈ ಭೀಮಾರ್ಜುನರಿಬ್ಬರೇ ಕುರುಕುಲದ ಬೇರುಗಳನ್ನೆಲ್ಲಾ ಕಳಚಿಬಿಸುತುವರು. ಮುಂದೆ ರಾಜ್ಯವೆಲ್ಲವೂ ನಿಮ್ಮ ವಶವೇ ಆಗುವುದು. ಇದರಲ್ಲಿ ಸಂಶಯವಿಲ್ಲ" ಎಂದು ಹೇಳಿದನು. ಆಗ ಯುಧಿಷ್ಠಿರನು ಆತನಿಗೆ ನಮಸ್ಕರಿಸಿ "ಸ್ವಾಮಿ! ಶ್ರೀ ಕೃಷ್ಣಮೂರ್ತಿಯ ಅನುಗ್ರಹವು ನಮ್ಮ ಮೇಲೆ ಸಂಪೂರ್ಣವಾಗಿರುವುದು ನಿಜ ನಿಮ್ಮ ಅಭಿಮಾನವೂ ನಮ್ಮ ಮೇಲೆ ಇಲ್ಲದೆ ಇಲ್ಲವು. ನಿಮ್ಮ ಆಶೀರ್ವಾದ ಬಲದಿಂದ ನಾವು ಈ ಕಷ್ಟಗಳನ್ನು ಪರಿಹರಿಸಿಕೊಳ್ಳಬಹುದು. ಸೂರ್ಯನು ಅಸ್ತಮಿಸುವ ವೇಳೆಯಾಯಿತು. ಈ ಮುನಿಜನರೆಲ್ಲರೂ ಹಸಿದುಬಂದಿರುವರು. ಎಲ್ಲರೂ ಭೋಜನಕ್ಕೆ ಏಳಬೇಕು" ಎಂದು ಪ್ರಾರ್ಥಿಸಿದನು. ಅದಕ್ಕಾ ಮಹರ್ಷಿಯು "ಎಲೈ ರಾಜೇಂದ್ರನೇ! ಮರದ ಬೇರು ನೀರು ಕುಡಿದರೆ ಆ ವೃಕ್ಷದ ರೆಂಬೆಗಳೆಲ್ಲವೂ ತೃಪ್ತಿಹೊಂದುವುದಿಲ್ಲವೆ? ಸರ್ವಗತನಾದ ಈ ಶ್ರೀ ಕೃಷ್ಣನು ಸಂತುಷ್ಟನಾದ ಮೇಲೆ ಆತನ ಅಂಗೋಪಾಂಗಗಳಾಗಿರುವ ನಮಗೆ ಹಸಿವು ಎತ್ತಣದು? ನಾವೆಲ್ಲರೂ ಮೃಷ್ಟಾನ್ನಪಾನಗಳನ್ನು ಪಡೆದು ಸಂತೃಪ್ತರಾದೆವು. ದುಷ್ಟಾತ್ಮನಾದ ಕೌರವನು ಧೂರ್ತತನದಿಂದ ನಿಮ್ಮನ್ನು ವಂಚಿಸಬೇಕೆಂದು ನನ್ನನ್ನಿಲ್ಲಿಗೆ ಕಳುಹಿದನು. ಇದರಿಂದ ನಮಗೆ ಕಷ್ಟವೂ ಅವಮಾನವೂ ಸಂಭವಿಸಿತೇ ಹೊರತು ಈ ಪಾಂಡವರು ವ್ರತಭ್ರಷ್ಟರಾಗಲಿಲ್ಲ. ಭಗವದ್ಭಕ್ತರನ್ನು ಕೆಣಕಿದ ದುರ್ಜನರು ಎಂದಿಗಾದರೂ ಕೆಟ್ಟುಹೋಗುವರು" ಎಂದು ಹೇಳಿ ಎಲ್ಲರನ್ನೂ ಸಂತೈಸಿ ಶ್ರೀ ಕೃಷ್ಣನ ಅಪ್ಪಣೆ ಪಡೆದು ಮುನಿಜನರೊಂದಿಗೆ ತನ್ನ ಆಶ್ರಮಕ್ಕೆ ಹೊರಟು ಹೋದನು. ಶ್ರೀ ಕೃಷ್ಣನೂ ದ್ರೌಪದೀ ಸಹಿತರಾದ ಆ ಪಾಂಡವರಿಗೆ ಧೈರ್ಯವಾಕ್ಯಗಳನ್ನು ಹೇಳಿ ದ್ವಾರಕೆಗೆ ಹೋಗಿ ಸೇರಿದನು.

## ಹತ್ತನೆಯ ಸಂಧಿ.

ಸೂಚನೆ:—ದ್ವಾರಕೆಯಲ್ಲಿ ಬಲರಾಮನು ತನ್ನ ಮಗಳಾದ ಶಶಿರೇಖೆಯನ್ನು ದುರ್ಯೋಧನನ ಮಗನಾದ ಲಕ್ಷ್ಮಣನಿಗೆ ಕೊಟ್ಟು ಮದುವೆ ಮಾಡಬೇಕೆಂದು ನಿಶ್ಚಯಿಸಿ ಲಗ್ನಪ್ರಯತ್ನಮಾಡಿದನು. ಅವನ ಸೋದರಳಿಯನಾದ ಅಭಿಮನ್ಯುವಿಗೆ ಕೊಡಬೇಕೆಂದು ಸುಭದ್ರೆಯು ಬೇಡಿ, ತಿರಸ್ಕೃತಳಾಗಿ ಮಗನೊಂದಿಗೆ ಹೊರಟುಹೋಗಿ ಘಟೋತ್ಕಚನ ಆಶ್ರಮಕ್ಕೆ ಸೇರಿದಳು. ಅವನು ಮಾಯೆಯಿಂದ ಆ ಕನ್ಯೆಯನ್ನು ತಂದು, ಕೌರವಾದಿಗಳನ್ನು ಭಂಗಿಸಲು, ಶ್ರೀ ಕೃಷ್ಣಾನುಮತದಿಂದ ಬಲರಾಮನು ಅಭಿಮನ್ಯುವಿಗೇನೇ ಮಗಳನ್ನು ಕೊಡುವುದಾಗಿ ಒಪ್ಪಿದನು ಬಳಿಕ ಅವರಿಬ್ಬರ ವಿವಾಹವು ನಿರ್ವಿಘ್ನವಾಗಿ ನೆರವೇರಿತು.

ಇತ್ತ ಪಾಂಡವರು ಶ್ರೀ ಕೃಷ್ಣ ವಿಯೋಗದಿಂದ ದುಃಖಿಸುತ್ತಾ "ಇನ್ನೂ ಎರಡು ವರ್ಷಗಳ ಕಾಲ ವನವಾಸವನ್ನು ಅನುಭವಿಸಬೇಕಾಗಿದೆಯಲ್ಲ! ಆ ಸ್ವಾಮಿಯು ಹೇಗೆ ಕಾಪಾಡುವನೋ? ಅವಧಿ ಮುಗಿಸಿಕೊಂಡು ಎಂದಿಗೆ ಸತ್ಯಪ್ರತಿಜ್ಞರಾಗಿ ನಮ್ಮ ರಾಜ್ಯವನ್ನು ಸಂಪಾದಿಸುವೆವೋ?" ಎಂದು ಚಿಂತಿಸುತ್ತಲಿದ್ದರು.

ಅತ್ತ ದ್ವಾರಕಾನಗರದಲ್ಲಿ ಸುಭದ್ರೆಯು ಪುತ್ರನಾದ ಅಭಿಮನ್ಯುವಿನೊಂದಿಗೆ ತೌರುಮನೆಯಲ್ಲಿಯೇ ವಾಸಮಾಡಿಕೊಂಡಿದ್ದಳು. ಬಲರಾಮನಿಗೆ ಶಶಿರೇಖೆಯೆಂಬ ಕನ್ಯೆ ಇದ್ದಳು. ಆ ಹುಡುಗಿಯು ಬಾಲ್ಯದಿಂದಲೂ ಅಭಿಮನ್ಯುವಿನೊಂದಿಗೆ ಆಟಪಾಟಗಳಾಡುತ್ತಾ ಬಲು ಸಲುಗೆಯಿಂದ ಆತನನ್ನು ಪ್ರೀತಿಸಿದ್ದಳು. ಅಭಿಮನ್ಯುವಿಗೂ ಅವಳ ಮೇಲೆ ಮೋಹ ಹುಟ್ಟಿತು. ಮೈನೆರೆದ ಆ ಹರೆಯದ ಹುಡುಗಿಗೆ ವಿವಾಹ ಪ್ರಯತ್ನಮಾಡಬೇಕೆಂದು ಯೋಚಿಸಿ ಬಲರಾಮನು ತಕ್ಕ ವರನನ್ನು ಅಲ್ಲಲ್ಲಿ ಹುಡುಕಿಸುತ್ತಿದ್ದನು. ಈ ವಿಷಯವು ಹಸ್ತಿನಾಪುರದ ಕೌರವರಿಗೆ ತಿಳಿಯಿತು. ದುರ್ಯೋಧನನ ಹಿರಿಯ ಮಗನಾದ ಲಕ್ಷ್ಮಣನು ತನ್ನ ಹೆಸರಿಗೆ ತಕ್ಕಂತೆ ಲಕ್ಷಣವಂತನಾಗಿಯೇ ಇದ್ದನು ಶಶಿರೇಖೆಯನ್ನು (ಇವಳಿಗೆ ಕನಕಾಂಗಿಯೆಂಬ ಹೆಸರೂ ಉಂಟು) ತಂದುಕೊಂಡು ವಿವಾಹ ಮಾಡಬೇಕೆಂದು ಆಲೋಚಿಸಿ, ಕೌರವರು ಬಲರಾಮನ ಬಳಿಗೆ ಪುರೋಹಿತರನ್ನು ಕಳುಹಿದರು. ಅವರು

ದ್ವಾರಕೆಗೆ ಹೋಗಿ ಆ ಹಲಾಯುಧನನ್ನು ಕಂಡು “ ಅಯ್ಯಾ ! ಯಾದವರಿಗೂ ಕೌರವರಿಗೂ ಬಹು ಪೂರ್ವಕಾಲದಿಂದಲೂ ಸಂಬಂಧವುಂಟು. ನಿನ್ನ ತಂಗಿಯಾದ ಸುಭದ್ರೆಯನ್ನು ಕುರುಪತಿಯಾದ ಸುಯೋಧನನಿಗೆ ಕೊಡಬೇಕೆಂತಲೇ ನೀನು ನಿಶ್ಚಯಿಸಿದ್ದೆ. ದೈವಯೋಗದಿಂದಲೋ ಶ್ರೀ ಕೃಷ್ಣನ ಕಾಪಟ್ಯದಿಂದಲೋ ನಿನ್ನ ಯೋಚನೆಯು ವಿಫಲವಾಗಿ ವಿವಾಹವು ಅನ್ಯಥಾ ಪರಿಣಮಿಸಿತು. ನಡೆದುಹೋದ ಕೆಲಸಕ್ಕೆ ನುಡಿದು ಫಲವೇನು ? ಈಗ ನಿನ್ನ ಮಗಳು ಶಶಿರೇಖೆಯು ವಿವಾಹಕ್ಕೆ ತಕ್ಕ ವಯಸ್ಕಳಾಗಿದ್ದಾಳೆ. ನಮ್ಮ ಸುಯೋಧನಪುತ್ರನಾದ ಲಕ್ಷಣನು ಆ ಕನ್ಯೆಗೆ ಅನುರೂಪನಾದ ವರನಾಗಿರುವನು. ನೀನು ಪೂರ್ವ ಸಂಬಂಧದ ಮೇಲೆ ದೃಷ್ಟಿಯಿಟ್ಟು ಈ ಕಾರ್ಯವನ್ನು ನೆರವೇರಿಸಿಕೊಡಬೇಕೆಂದು ಧೃತರಾಷ್ಟ್ರರಾಯನು ಅಪೇಕ್ಷಿಸುವನು ” ಎಂದರು. ಅದನ್ನು ಕೇಳಿ ಬಲರಾಮನು “ ಪುರೋಹಿತರೇ ! ನಿಮ್ಮ ವಾಕ್ಯಗಳು ಯುಕ್ತವಾಗಿವೆ. ಆದರೂ ಮದುವೆಯ ವಿಷಯದಲ್ಲಿ ವಾಗ್ದಾನ ಮಾಡಬೇಕಾದರೆ ಬಹು ದೂರ ಆಲೋಚಿಸಬೇಕು. ಆ ಹುಡುಗಿಯ ಅಭಿಪ್ರಾಯವೇನೋ, ಅವಳ ತಾಯಿಯು ಯಾರಿಗೆ ಕೊಡಬೇಕೆಂದಿರುವಳೋ, ಬಂಧುಜನರ ಇಷ್ಟವು ಹೇಗಿರುವುದೋ ಇವುಗಳನ್ನೆಲ್ಲಾ ತಿಳಿದ ಹೊರತು ಮಾತುಕೊಡುವುದಕ್ಕೆ ಬಾರದಷ್ಟೆ ! ಈಗ ತಾನೇ ನಮಗೆ ಈ ಯೋಚನೆ ಹುಟ್ಟಿದೆ. ಎಲ್ಲರೂ ಕಲೆತು ಆಲೋಚಿಸಿ, ನಿಶ್ಚಯಿಸಿಕೊಂಡು ಹೇಳಿಕಳುಹುವೆನು. ಕುರುವಂಶದವರ ಸಂಬಂಧ ಬಿಡಬಾರದೆಂಬುದೇ ನನ್ನ ಇಷ್ಟವು ” ಎಂದು ಹೇಳಿ ಅವರಿಗೆ ಉಡುಗೊರೆಯೊಂದಿಗೆ ತಾಂಬೂಲ ಸಂಭಾವನೆಗಳನ್ನು ಕೊಟ್ಟು ಕಳುಹಿದನು.

ಲೋಕದಲ್ಲಿ ಜನರ ಬಾಯಿ ಮುಚ್ಚುವುದು ಕಷ್ಟ. ಇಬ್ಬರು ಪರಸ್ಪರ ಸೇರಿದರೆ ಇವರು ಇಂತಹ ವಿಷಯವನ್ನೇ ಮಾತನಾಡುತ್ತಿರುವರೆಂದು ಗ್ರಹಿಸುವ ಚತುರರೂ ಉಂಟು. ಕೌರವ ಪುರೋಹಿತರು ಬಂದಾಗಲೇ ಇವರು ಶಶಿರೇಖೆಯ ಲಗ್ನ ಗೊತ್ತುಮಾಡಿಕೊಳ್ಳಲು ಬಂದಿರುವರೆಂದು ಪಟ್ಟಣದಲ್ಲೆಲ್ಲಾ ಸುದ್ದಿ ಹರಡಿತು. ಹುಡುಗಿಯನ್ನು ಹೆತ್ತ ತಾಯಿತಂದೆಗಳು ಕೂಡ ವರ ನಿಶ್ಚಯವಿಲ್ಲದೆ ಕುಳಿತಿರುವಾಗ ಊರಿನವ

ರಲ್ಲಿ ಕೆಲವರು "ಓಹೋ! ಇನ್ನೇನು! ಶಶಿರೇಖೆಗೆ ಚಕ್ರವರ್ತಿಯ ಸಂಬಂಧ ದೊರೆಯಿತೆಂತಲೂ, ಕೆಲವರು ಏತರ ಮಾತಿದು! ಸೋದರ ಸಂಬಂಧವನ್ನು ಶ್ರೀಕೃಷ್ಣನು ಎಂದಿಗೆ ತಪ್ಪಿಸುವನು? ಸುಭದ್ರೆಯೂ ತನ್ನ ಮಗನಾದ ಅಭಿಮನ್ಯುವಿಗೆ ಹೆಣ್ಣು ಕೊಡದಿದ್ದರೆ ಸುಮ್ಮನೆ ಬಿಡುವಳೆ?" ಎಂದು ಕೆಲವರೂ, ಈ ಕಾಲದಲ್ಲಿ ಜನರು ಐಶ್ವರ್ಯವನ್ನು ನೋಡುವರೇ ಹೊರತು ಬಾಂಧವ್ಯವನ್ನಾಗಲಿ, ಕುಲಶೀಲ ರೂಪಗಳನ್ನಾಗಲಿ ನೋಡುವುದೇ ಇಲ್ಲ, ಪಾಪ! ಆಕೆಯ ಗಂಡ ಅರ್ಜುನನು ಸಹೋದರರೊಂದಿಗೆ ವನವಾಸ ಮಾಡಿಕೊಂಡಿರುವಾಗ ಈ ವಿವಾಹದ ಸುದ್ದಿ ಅವರಿಗೇನು ಬೇಕಾಗಿದೆ? ಎಂದು ಕೆಲವರೂ ಬಗೆಬಗೆಯಾಗಿ ಮಾತನಾಡಿಕೊಳ್ಳುತ್ತಿದ್ದರು.

ಬಲರಾಮನು ತನ್ನ ಹೆಂಡತಿಯಾದ ರೇವತಿಯ ಅಂತಃಪುರಕ್ಕೆ ಹೋಗಿ ಮಗಳ ವಿವಾಹದ ಪ್ರಸ್ತಾಪವೆತ್ತಿ ಆ ಹುಡುಗಿಯನ್ನು ಲಕ್ಷ್ಮಣನಿಗೆ ಕೊಡಬೇಕೆಂದು ಕೌರವರ ಕಡೆಯಿಂದ ಬ್ರಾಹ್ಮಣರು ಬಂದಿದ್ದ ಸಮಾಚಾರವನ್ನು ಹೇಳಿ, ಈ ಬಗ್ಗೆ ನಿನ್ನ ಅಭಿಪ್ರಾಯವೇನೆಂದು ಕೇಳಿದನು ಅದಕ್ಕಾಕೆಯು ಸ್ವಲ್ಪ ಹೊತ್ತು ಆಲೋಚಿಸಿ, "ಪ್ರಾಣನಾಥಾ! ಲಕ್ಷ್ಮಣನಿಗೆ ಹುಡುಗಿಯನ್ನು ಕೊಡಬೇಕೆಂಬ ಆಸೆ ನಿಮಗಿರುವಂತೆ ಕಾಣುತ್ತಿದೆ ನನಗೂ ಇದು ಸಮ್ಮತವೇ ಸರಿ. ಆದರೆ ಒಂದು ಸಂದೇಹವು ಮಾತ್ರ ಬಾಧಿಸುತ್ತಿರುವುದು. ಪಾಂಡವರು ಜೂಜಿನಲ್ಲಿ ಸೋತು ವನವಾಸಕ್ಕೆ ಹೋದಮೇಲೆ ನಿಮ್ಮ ತಂಗಿ ಸುಭದ್ರೆಯನ್ನೂ, ಸೋದರಳಿಯನಾದ ಅಭಿಮನ್ಯುವನ್ನೂ ಇಲ್ಲಿಗೆ ಕರೆದುತಂದಿರಷ್ಟೆ! ಹತ್ತುವರುಷಗಳಿಂದಲೂ ಅವರು ನಮ್ಮ ಮನೆಯಲ್ಲಿಯೇ ಇರುವರು. ಅಂದಿನಿಂದ ನಮ್ಮ ಶಶಿರೇಖೆಯೂ ಅಭಿಮನ್ಯುವೂ ಕಲೆತು ಆಟಪಾಟಗಳನ್ನಾಡುತ್ತ ಪರಸ್ಪರ ಪ್ರೀತಿಗೊಂಡಿರುವಂತೆ ಕಾಣುತ್ತಿದೆ. ಲೋಕದ ಜನರು ಕೂಡ ಪಾಂಡವರು ಕಾಡುಪಾಲಾದ ಕಾರಣ ಅವರು ಬಡವರೆಂದು ನಾವು ಸೋದರಿಕೆಯನ್ನು ಬಿಟ್ಟು, ರಾಜ್ಯಾಧಿಪತಿಗಳಾದ ಕೌರವರ ಬಾಂಧವ್ಯವನ್ನು ಬೆಳೆಸಿದೆವೆಂದು ಹಲವು ಬಗೆಯಾಗಿ ದೂರಿಕೊಳ್ಳುವರು ತಾವು ನಿಧಾನ

ವಾಗಿ ಆಲೋಚಿಸಿ ಕಾರ್ಯ ನಿಶ್ಚಯಮಾಡಿರಿ. ಅಬಲೆಯಾದ ನನಗೆ ಏನು ತಿಳಿಯುವುದು'' ಎಂದಳು.

ಬಲರಾಮನು ಈ ಮಾತನ್ನು ಕೇಳಿ ನಿರುತ್ಸಾಹನಾಗಿ ತನ್ನ ಕೈಕಚ್ಚಿಕೊಂಡು "ಓಹೋ! ನಿರರ್ಗಳವಾಗಿ ಹರಿದು ಹೋಗುತ್ತಿರುವ ನದೀ ಪ್ರವಾಹಕ್ಕೆ ದೊಡ್ಡ ಬಂಡೆಯು ಅಡ್ಡಬಂದು ತಡೆಯುವಂತೆ ನನ್ನ ಸಂಕಲ್ಪಕ್ಕೆ ಇವಳು ಮೊದಲೇ ಅಡ್ಡಿಮಾಡುವಂತಿದೆ'' ಎಂದು ಸ್ವಲ್ಪಹೊತ್ತು ಆಲೋಚಿಸಿ, "ಕನ್ಯೆಯನ್ನು ಅಭಿಮನ್ಯುವಿಗೆ ಕೊಡೋಣವೇ ಅಥವಾ ಮುಂದೆ ಚಕ್ರವರ್ತಿಯಾಗತಕ್ಕವನಾಗಿರುವ ಲಕ್ಷಣಕುಮಾರನಿಗೆ ಕೊಡೋಣವೇ ಎಂಬ ಚಿಂತೆಯು ನನ್ನ ಮನಸ್ಸಿನಲ್ಲಿ ವ್ಯಾಪಿಸಿ ಕೆಳಗೂ ಮೇಲೂ ನಿಲ್ಲಿಸಿದ ಕಬ್ಬಿಣ ಸಲಾಕೆಯ ನಡುವೆ ಸಿಕ್ಕಿಕೊಂಡ ಅಯಸ್ಕಾಂತ ಶಿಲೆಯಂತೆ ನಿಶ್ಚಲವಾಗಿ ನಿಂತುಬಿಟ್ಟಿದೆ ಎಂದುಕೊಂಡು ಮತ್ತೆ ಸ್ವಲ್ಪಹೊತ್ತು ನಿದಾನವಾಗಿ ವಿಚಾರಮಾಡಿ ನಿಶ್ಚಯಭಾವದಿಂದ ಪತ್ನಿಯನ್ನು ಕುರಿತು "ಸಾಧ್ವೀ! ನೀನು ಲೋಕನಿಂದೆಯೇ ಮುಖ್ಯವೆಂದು ತಿಳಿದೆಯೇ ಹೊರತು ಪರಮಾರ್ಥವನ್ನು ಯೋಚಿಸಲಾರದೆ ಹೋದೆ. ಲೋಕದ ಜನರಿಗೆ ಒಂದು ಬಗೆಯ ಹುಚ್ಚು ಹಿಡಿದಿರುವುದು. ಪೂರ್ವ ಸಂಬಂಧವನ್ನು ಬಿಡಬಾರದೆಂಬುದೇ ಅವರ ಹಟವು. ಯಾವಾಗಲೂ ಹೊಸ ಬಾಂಧವ್ಯದಲ್ಲಿ ಇರುವ ಆನಂದವು ಹಳೆಯ ಸೋದರ ಸಂಬಂಧದಲ್ಲಿ ಇರುವುದಿಲ್ಲ. ದಂಪತಿಗಳಲ್ಲಿ ಐಕಮತ್ಯವು ಕುದುರಬೇಕಾದರೆ ಹೊಸ ಸಂಬಂಧವನ್ನೇ ಮಾಡುತ್ತಾ ಬರಬೇಕು. ಇದೂ ಅಲ್ಲದೆ ಫಲವೃಕ್ಷದಲ್ಲಿರುವ ಒಂದು ದೊಡ್ಡಹಣ್ಣಿನ ಬೀಜವನ್ನು ತಂದು ನೆಟ್ಟರೆ ಗಿಡವು ಬೆಳೆದು ಅದಕ್ಕಿಂತಲೂ ಸಣ್ಣ ಕಾಯಿಗಳನ್ನು ಕೊಡುವುದು. ಅವರ ಬೀಜವನ್ನು ನಾಟವರೆ ಅವಕ್ಕಿಂತಲೂ ಸಣ್ಣಕಾಯಿಗಳೇ ಬಿಡುವುವು ಹೀಗೆ ರುಚಿಯಲ್ಲಿಯೂ ಗಾತ್ರದಲ್ಲಿಯೂ ಕ್ರಮೇಣ ತಗ್ಗಿ ಹೋಗುತ್ತಾ ಬರುವಂತೆ ಮನುಷ್ಯವರ್ಗದಲ್ಲಿಯೂ ರಕ್ತಸಂಬಂಧವನ್ನು ತಪ್ಪಿಸದೆ ಬಾಂಧವ್ಯ ಬೆಳೆಸಿದರೆ ಸಂತಾನಗಳು ದುರ್ಬಲವಾಗಿ ಹೋಗುವುದಲ್ಲದೆ ಕೆಲವು ಕಾಲದಲ್ಲಿಯೇ ಕುಲಕ್ಷಯವಾಗುವ ಸಂಭವವೂ ಉಂಟಾಗಬಹುದು. ಇದು ಪ್ರಕೃತಿಶಾಸ್ತ್ರದ ನಿಯಮವು. ಇವೆಲ್ಲಾ ಹಾಗಿರಲಿ. ನಮ್ಮ

ಶಶಿಯನ್ನು ಅಭಿಮನ್ಯುವಿಗೆ ಕೊಟ್ಟರೆ ಅವಳಿಗಾಗಲಿ ನಿನಗಾಗಲಿ ಸಂತೋಷವಾಗಿರುವುದೆ? ಹೇಳೆಂದನು.

ರೇವತಿಯು "ನಾಥನೇ! ನಾನು ಹೇಳತಕ್ಕುದೇನು? ಹುಡುಗಿಗೆ ತಕ್ಕ ವರನು ಸಿಕ್ಕಬೇಕೆಂಬ ಆಸೆಯು ಎಲ್ಲರಿಗೂ ಇರುವುದು. ಮುಖ್ಯವಾಗಿ ಅತ್ತೆಸೊಸೆಯರ ವೈರವನ್ನಡಗಿಸಿ, ಅವರಿಬ್ಬರಿಗೂ ತಾನೇ ಇಕ್ಕೆಯಾಗಿ ಮನ್ಮಥನಂತೆ ಸುಂದರಾಂಗನಾದ ಚತುರನು ನಮ್ಮ ಕನಕಾಂಗಿಗೆ ಪತಿಯಾದರೆ ಅಷ್ಟೇ ನಮಗೆ ಬೇಕಾದುದು. ಇಷ್ಟರ ಮೇಲೆ ತಮ್ಮ ಚಿತ್ತವು. ನಾನು ಹೇಳತಕ್ಕುದೇನು?" ಎಂದಳು.

ಆಗ ಬಲರಾಮನು ವಿಮರ್ಶೆ ಮಾಡಿ "ವಿವಾಹ ಕಾಲದಲ್ಲಿ ಸೋದರಳಿಯ—ಗೀದರಳಿಯ ಎಂಬ ಮಾತು ಕಟ್ಟಡಬೇಕು. ರತ್ನದಂತಹ ಬಾಲೆಯನ್ನು ನಿರ್ಭಾಗ್ಯನಾದ ಸೋದರಳಿಯನಿಗೆ ಕೊಟ್ಟು ಹುಡುಗಿಗೆ ಮಿತಿಮೀರಿದ ದುಃಖವನ್ನುಂಟುಮಾಡಿದರೆ ಅದರಿಂದ ಸಂಭವಿಸುವ ರೌರವಾದಿ ನರಕಯಾತನೆಗಳನ್ನು ಅನುಭವಿಸುವುದಕ್ಕಿಂತ ಲೋಕಾಪವಾದವನ್ನು ಹೇಗಾದರೂ ಸಹಿಸಬಹುದು. ಲೋಕವನ್ನು ಮೆಚ್ಚಿಸಬೇಕೆಂದು ಯೋಚಿಸುವ ಭ್ರಷ್ಟನು ಕೆಲವು ದಿನಗಳಲ್ಲಿಯೇ ಕೆಟ್ಟುಹೋಗದಿರನು ಇತರರಿಗೆ ಉಪದೇಶ ಮಾಡುವುದರಲ್ಲಿ ಎಲ್ಲರೂ ಜಾಣರೇ ಹೊರತು ಹೇಳದುದನ್ನು ತಮ್ಮ ಆಚರಣೆಯಲ್ಲಿ ಇಟ್ಟುಕೊಂಡಿರತಕ್ಕವರು ಇಲ್ಲವೇ ಇಲ್ಲ. "ಲೋಕೋಭಿನ್ನರುಚಿಃ" ಎಂಬಂತೆ ಜನರೆಲ್ಲರೂ ಒಂದೇ ದಾರಿಯಲ್ಲಿ ಎಂದಿಗೂ ನಡೆಯಲಾರರು. ಎತ್ತಿನ ಹುಣ್ಣು ಕಾಗೆಗೆ ನೋವಾಗುವುದೆ? ಆದುದರಿಂದ ಶ್ರೀಮಂತನಾಗಿಯೂ ಚಿರಂಜೀವಿಯಾಗಿಯೂ ಇರುವ ಲಕ್ಷಣನಿಗೇನೇ ನನ್ನ ಮಗಳನ್ನು ಕೊಡುವೆನು. ಯಾರು ಇದಕ್ಕೆ ವಿರೋಧವಾಗಿ ನುಡಿದರೂ ನಾನು ಕೇಳತಕ್ಕವನಲ್ಲ" ಎಂದು ಹೇಳಬಿಟ್ಟನು.

ಶ್ರೀ ಕೃಷ್ಣನು ಸತ್ಯಭಾಮೆಯೊಂದಿಗೆ ಅಂತಃಪುರದಲ್ಲಿ ಕುಳಿತಿದ್ದಾಗ ಪರಿಚಾರಿಕೆಯು ಬಂದು ಬಲರಾಮನು ಶಶಿರೇಖೆಯ ಲಗ್ನದ ವಿಷಯದಲ್ಲಿ ಮಾಡಿದ ತೀರ್ಮಾನವನ್ನು ಸ್ವಾಮಿಗೆ ತಿಳಿಸಿದಳು. ಅದನ್ನು ಕೇಳಿ ಆತನು "ಆಹಾ! ಎಂತಹ ಪ್ರಮಾದವು! ಸರ್ವಲಕ್ಷಣಸಂಪನ್ನನಾದ ಸೋದರಳಿಯನು ಅಭಿಮನ್ಯುವಿರುವಾಗ ಅಣ್ಣಯ್ಯನಿಗೆ ಲಕ್ಷಣನು

ಅಳಿಯನಾಗಿ ಬಂದನೆ ? ಸತ್ಯಾ ! ನೋಡಿದೆಯಾ ? ಕೊನೆಗೆ ನಮ್ಮ ಕನ
ಕಾಂಗಿಯ ಕೋರಿಕೆ ಹೇಗಾಯಿತು ? ಪಾಪ ! ಸುಭದ್ರೆಯು ಈ ಸುದ್ದಿ
ಕೇಳಿದರೆ ಎಷ್ಟು ನೊಂದುಕೊಳ್ಳುವಳೋ ? ಹೆತ್ತವರ ಎದುರಿಗೆ ನಮ್ಮ
ಸೂಚನೆಗಳು ನಡೆಯುವುವೆ ? ಬ್ರಹ್ಮಸಂಕಲ್ಪವು ಹೇಗಿರುವುದೋ ಬಲ್ಲ
ವರಿಲ್ಲ " ಎಂದನು. ಅದಕ್ಕೆ ಸತ್ಯಭಾಮೆಯು "ಮನೋವಲ್ಲಭಾ !
ಭಾವನವರ ಉದ್ದೇಶವು ಬೇರೆ ಕಡೆ ಇರುವಾಗ ನಿಮ್ಮ ಈ ಹುಚ್ಚು
ಕೂಗುಗಳನ್ನು ಕೇಳತಕ್ಕವರಾರು ? ಅರ್ಜುನನ ಮಗನು ನಿಮಗೆ ಹೇ
ಗೋ ಹಾಗೆಯೇ ಬಲಭದ್ರನಿಗೂ ಸೋದರಳಿಯನೇ ಅಲ್ಲವೆ ? ಆ ಧರ್ಮ
ವನ್ನವರು ಕಡೆಗಣಿಸಿ ಅನ್ಯಥಾ ಪ್ರವರ್ತಿಸಿದರೆ ನೀವು ಮಾಡತಕ್ಕುದೇನು?
ಇದೂ ಅಲ್ಲದೆ ಅಭಿಮನ್ಯುವಿನ ಈಗಿನ ಸ್ಥಿತಿಯನ್ನೂ, ಭಾವನವರ ಉದ್ದೇ
ಶವನ್ನೂ ನೋಡಿದರೆ ಶಶಿರೇಖೆಯನ್ನು ಅಭಿಮನ್ಯುವಿಗೆ ಕೊಡಿಸಲು
ನೀವು ಪ್ರಯತ್ನ ಪಡುವುದು ಹುಚ್ಚುತನವೆಂದು ತೋರುತ್ತದೆ " ಎಂದ
ಳು. ಅಷ್ಟರಲ್ಲಿ ಸುಭದ್ರೆಯು ಜೋಲುಮುಖ ಹಾಕಿಕೊಂಡು ಅಲ್ಲಿಗೆ
ಬಂದಳು. ಕೃಷ್ಣನು ಅವಳನ್ನು ನೋಡಿ "ತಂಗೀ ! ಯಾವಾಗಲೂ
ಸಂತೋಷದಲ್ಲಿದ್ದ ನಿನ್ನ ಮುಖವು ಈಗ ಕಳೆಗುಂದಿದೆ. ಅಣ್ಣಯ್ಯನು
ಹುಡುಗಿಯನ್ನು ಬೇರೆ ಕಡೆಗೆ ಕೊಡುವನೆಂದು ಕೇಳಿ ಚಿಂತಿಸುವೆಯಾ ?
ನಿನ್ನ ಪತಿಯು ವನವಾಸದಲ್ಲಿರುವಾಗ ನಿನ್ನ ಮನಸ್ಸಿಗೆ ಕೊರತೆಯಾಗಬಾ
ರದೆಂದು ನಾವು ಎಷ್ಟೋ ಶ್ರದ್ಧೆ ತೆಗೆದುಕೊಳ್ಳುತ್ತಿದ್ದೇವೆ. ಶಶಿರೇಖೆಯ
ಲಗ್ನದ ವಿಷಯವಾಗಿ ನಿನ್ನ ಮಗನನ್ನು ಬಲರಾಮನು ಮರೆತುಬಿಟ್ಟುದು
ಸರಿಯಲ್ಲ. ಆಗಲಿ, ಒಂದು ಸಾರಿ ಹೋಗಿ ಕೇಳೋಣ " ಎಂದು ಹೇಳಿ
ಸುಭದ್ರೆಯನ್ನೂ ಸಾತ್ಯಕಿಯನ್ನೂ ಕರೆದುಕೊಂಡು ಬಲರಾಮನ ಅರಮ
ನೆಗೆ ಹೋದನು. ಅವರನ್ನು ನೋಡಿ ಆತನು ಶ್ರೀ ಕೃಷ್ಣಸಾತ್ಯಕಿಯರಿಗೆ
ತಕ್ಕ ಪೀಠಗಳ ಮೇಲೆ ಕುಳ್ಳಿರಹೇಳಿ, ಸುಭದ್ರೆಯ ಕಡೆ ಕಣ್ಣೆತ್ತಿ
ನೋಡದೆ ಉದಾಸೀನಭಾವದಿಂದ ಇದ್ದನು. ಆಗ ಸುಭದ್ರೆಯು ಖಿನ್ನ
ಳಾಗಿ ಬಲರಾಮನನ್ನು ನೋಡಿ,—

ಸುಭ:—" ಅಣ್ಣಯ್ಯಾ ! ನಿನಗೆ ನಾನು ಮಾಡಿದ ಅನ್ಯಾಯವೇನು ? ನ
ನ್ನನ್ನು ಮಾತನಾಡಿಸಿದ್ದರೆ ಬಾಯಿಂದ ಮುತ್ತುಗಳು ಉದುರಿಹೋ

ಗುತ್ತಿದ್ದುವೆ ? ದುರ್ದೈವಿಯಾದ ನಾನು ಕಷ್ಟಕಾಲದಲ್ಲಿ ಇಲ್ಲಿಗೆ ಬಂದು ಸೇರಿದುದೇ ತಪ್ಪು. ಆಗಲಿ. ಮುಂದಿನ ಯೋಚನೆ ಏನು?

ಬಲ:—ಮುಚ್ಚು ಬಾಯಿ. ನಾವು ನಿನಗೆ ಮಾಡಿದ ಅನ್ಯಾಯವೇನು ? ನಿನಗೆ ಏತರಲ್ಲಿ ಕೊರತೆ ಮಾಡಿದೆವು ?

ಶ್ರೀ ಕೃಷ್ಣ:—ಅಣ್ಣಾ ! ಕೊರತೆ ಏನೂ ಇಲ್ಲ ಹತ್ತಿರವಿರುವ ರಸದಾಳೆ ಕಬ್ಬನ್ನು ಪರಿತ್ಯಜಿಸಿ ಪರರ ಮನೆಯ ಜೊಂಡಿಗೆ ಆಶಿಸುವಂತೆ ಮುತ್ತಿನ ಮಣಿಯಂತಹ ವರನನ್ನು ಮನೆಯಲ್ಲಿಟ್ಟುಕೊಂಡು, ಮಗಳಿಗೆ ಬೇರೆ ವರನನ್ನು ಗೊತ್ತುಮಾಡುವುದು ಸರಿಯೆ ! ಸೋದರ ಸಂಬಂಧವನ್ನು ಹರಿದುಬಿಡುವೆಯಾ ? ಇಂತಹ ದೋಷಕ್ಕೆ ನಾವು ಗುರಿಯಾಗಬಾರದು. ನಮ್ಮ ಶಶಿರೇಖೆಯನ್ನು ವಿಜಯಾಕುಮಾರನಿಗೆ ಕೊಟ್ಟು ಕೃತಕೃತ್ಯನಾಗು.

ಬಲ:—ಕೃಷ್ಣಾ ! ನಿನ್ನ ಪಕ್ಷಪಾತದ ಮಾತುಗಳು ಕಂಡೇ ಇವೆ. ಇದನ್ನು ನಂಬಿ ನಾನು ಹೇಗೆ ಮೋಸಹೋಗಲಿ. ಲಕ್ಷಣವಂತನಾದ ಲಕ್ಷಣನಿಗೆ ಭಿಕ್ಷುಕನ ಮಗನಾದ ಅಭಿಮನ್ಯುವನ್ನು ಹೋಲಿಸಿ ನುಡಿಯುತ್ತೀಯೆ. ಅಷ್ಟೈಶ್ವರ್ಯಸಂಪನ್ನನಾದ ಲಕ್ಷಣನೆಲ್ಲಿ ? ತುತ್ತಿಗಿಲ್ಲದೆ ಗೆಡ್ಡೆಗೆಣಸುಗಳನ್ನು ತಿಂದು ಹೊಟ್ಟೆ ಹೊರೆಯುತ್ತಿರುವ ಅರ್ಜುನನ ಮಗನೆಲ್ಲಿ ? ಸುಮ್ಮನೆ ಹೊಗಳಿ ಬಾಯಿ ನೋಯಿಸಿಕೊಳ್ಳಬೇಡ, ಸಾಕು, ನಿಲ್ಲಿಸು.

ಕೃಷ್ಣ:—(ಸುಭದ್ರೆಯ ಕಡೆ ನೋಡಿ) ತಂಗೀ ! ಅಣ್ಣಯ್ಯನ ಮಾತು ಕೇಳಿದೆಯಾ ?

ಸುಭ.—ಅಣ್ಣಾ ! ಪತಿಯೂ ಭಾವಂದಿರೂ ಮೈದುನರೂ ವಿಧಿವಶದಿಂದ ಕಾಡಿನಲ್ಲಿ ಅಲೆಯುತ್ತಿರುವಾಗ ನೀವು ಸಕಲೈಶ್ವರ್ಯಸಂಪನ್ನರಾಗಿರುವುದರಿಂದ ನೀವೇ ಗತಿಯೆಂದು ನಂಬಿ ಇಲ್ಲಿಗೆ ಬಂದು ಸೇರಿದೆನು. ಊರವರೆಲ್ಲರೂ ಶಶಿರೇಖೆಯು ಅಭಿಮನ್ಯುವಿನ ಹೆಂಡತಿಯೇ ಸರಿಯೆಂದು ಆಡಿಕೊಳ್ಳುತ್ತಿರುವರು. ಸಮಯ ಬಂದಾಗ ಕೈಬಿಟ್ಟರೆ ನಾನು ಮಾಡತಕ್ಕದೇನು ? ತಂಗಿಯ ಮಾತನ್ನು ಅಣ್ಣಂದಿರು ನಡೆಸಿಕೊಡುವುದು ಧರ್ಮವು. ಈಗಲೂ ನೀವು

ಗಳು ದಯಮಾಡಿ ನಿಮ್ಮ ಸೋದರಳಿಯನಿಗೆ ಹುಡುಗಿಯನ್ನು ಕೊಟ್ಟು ಮನೆ ಉದ್ಧರಿಸಬೇಕು.

ಬಲ:—(ಹಾಸ್ಯದಿಂದ) ಆಹಾ! ಎಂತಹ ಮಾತನಾಡುವೆ! ಸುಭದ್ರೇ. ನಿನ್ನ ಮಗನಿಗೆ ಹುಡುಗಿಯನ್ನು ಕೊಡಬೇಕೆ? ನಿನಗೆ ಕೇಳಲಿಕ್ಕೆ ಬಾಯಿ ಹೇಗೆ ಬಂತು? ನಾಚಿಕೆಯಿಲ್ಲವೆ? ಲೋಕದ ಜನರಿಗೆ ಎಂತಹ ಹುಚ್ಚು! ತಮ್ಮ ಇಷ್ಟವನ್ನು ನೆರವೇರಿಸಿಕೊಳ್ಳಲಿಕ್ಕೆ ಯುಕ್ತಾಯುಕ್ತ ವಿಮರ್ಶೆಯನ್ನೇ ಮಾಡುವುದಿಲ್ಲವಲ್ಲಾ! ರತ್ನದಂತಹ ಹುಡುಗಿಯನ್ನು ಕೊರಳು ಕೊಯ್ದು ನಿನ್ನ ಮಗನಿಗೆ ಕಟ್ಟದಿದ್ದರೆ ಸಂಭವಿಸುವ ನಷ್ಟವೇನ? ನಿನ್ನ ಮಗನಿಗೆ ಮದುವೆ ಇಲ್ಲದೆ ಹೋದರೆ ಈ ಚಿಂತೆ ಯಾರಿಗೆ? ಈಗ ಹಡಗು ಮುಳುಗಿಹೋಯಿತೇನು? ಬಲು ಚೆನ್ನಾಗಿದೆ. ನಿನ್ನ ಬಯಕೆಯು ನಿಲುಕದ ಮರದ ಹಣ್ಣಿಗೆ ಕೈನೀಡುವಂತೆ ಇದೆ. ಲೋಕದಲ್ಲಿ ಒಬ್ಬ ತಿರುಪೆಯವನು ಮೊದಲು ಒಂದು ಹಿಡಿ ಭಿಕ್ಷ ನೀಡಿರೆಂದು ಬಂದು ಬಂದು ಗಳಿಗೆ ಕುಳ್ಳಿರಲಿಕ್ಕೆ ಸ್ಥಳ ಕೊಟ್ಟರೆ ಊಟಕ್ಕೆ ಬಡಿಸಿರೆಂದು ಬೇಡುವನು. ನಿನ್ನ ಅಡಿಯಾಸೆಯೂ ಹಾಗೆಯೇ ಇದೆ. ಕೊಟ್ಟ ಅನ್ನವಸ್ತ್ರಗಳಿಂದ ತೃಪ್ತಳಾಗದೆ ಸಾಲದುದಕ್ಕೆ ಸೊಸೆಯನ್ನೂ ಕೊಡೆಂದು ಬೇಡಲಿಕ್ಕೆ ಬಂದೆಯಾ? ಛೀ ತೊತ್ತೇ! ನಿನಗೆ ಏನು ಭೋಗಭಾಗ್ಯಗಳು ಕೊಳ್ಳೆ ಹೋಗುತ್ತಿವೆ. ಸೊಸೆಯನ್ನು ಯಾವ ಮನೆಯಲ್ಲಿ ಗೃಹಪ್ರವೇಶ ಮಾಡಿಕೊಳ್ಳುವೆ. ಕುಬೇರನಿಗೆ ಸಮಾನನಾದ ಲಕ್ಷಣನನ್ನು ಬಿಟ್ಟು ಬಿಟ್ಟು ಬೆಟ್ಟಗುಡ್ಡಗಳನ್ನು ಸುತ್ತುತ್ತಾ ಅಲೆದಾಡುವ ಅರ್ಜುನನ ಮಗನಿಗೆ ಮಗಳನ್ನು ಕೊಡುವುದಕ್ಕೆ ನಮಗೆ ಖಂಡಿತವಾಗಿ ಮನಸ್ಸಿಲ್ಲ. (ಮುಖವನ್ನು ಓರೆಯಾಗಿ ತಿರುಗಿಸಿಕೊಳ್ಳುವನು)

ಸಾತ್ಯಕಿ:—(ಥಟ್ಟನೆ ಎದ್ದು) ಹಿರಿಯಣ್ಣಾ! ಐಶ್ವರ್ಯಹೀನನಾದ ಇಂದ್ರನ ಮೊಮ್ಮಗ ಅಭಿಮನ್ಯುವಿಗೆ ಮಗಳನ್ನು ಕೊಡುವುದಿಲ್ಲವೆಂದು ಬಿಡುನುಡಿಗಳಾಡಿ, ದುರಹಂಕಾರಿಗಳಾದ ಕೌರವರನ್ನು ಹೊಗಳುತ್ತಿರುವ ನಿನ್ನ ಮಾತುಗಳು ಕೇಳಲಿಕ್ಕೆ ದುಸ್ಸಹಗಳಾಗಿವೆ. ಯು

ಭೀಷ್ಮರಾದಿ ಮಹಾತ್ಮರನ್ನು ದೂಷಿಸಲಿಕ್ಕೆ ನಿನಗೆ ಹೇಗೆ ಬಾಯಿ ಬಂತು ?

ಸುಭದ್ರೆ:—(ದೈನ್ಯದಿಂದ) ಅಣ್ಣಯ್ಯಾ, ಸಿಂಹಸರಾಕ್ರಮಿಗಳಾದ ಪಾಂಡುಕುಮಾರರನ್ನಗಲಿ ಕೂಳಿಗಾಗಿ ನಿಮ್ಮ ಮನೆಗೆ ಬಂದು ಸೇರಿಕೊಂಡುದರಿಂದಲ್ಲವೇ ನಾನಿಷ್ಟು ಹಗುರಳಾದೆನು ಆದರೂ ಆಗಲಿ. ನಾನು ತಂಗಿಯಾಗಿರುವುದರಿಂದ ಅಣ್ಣನಾಡುವುದರಿಂದ ತಪ್ಪೇನೂ ಇಲ್ಲ. ನನ್ನ ಮಗನು ಚೆನ್ನಾಗಿದ್ದರೆ ಸೊಸೆ ಬಾರದೆ ಎಲ್ಲಿ ಕೊಳ್ಳೆ ಹೋಗುವಳು ? ಮೊದಲು ನೀನಾಡಿದ ಮಾತುಗಳೆಲ್ಲಾ ಏನಾದುವು! ದತ್ತಾಪಹಾರಕ್ಕಿಂತ ಹೆಚ್ಚಿದ ದೋಷವಿಲ್ಲ ಲೋಕದಲ್ಲಿ ದುರ್ಮಾರ್ಗರು ಏನು ತಾನೇ ಮಾಡಲೊಲ್ಲರು ? ಒಳ್ಳೆಯದಾಯಿತು. ನನಗೆ ನಾಚಿಕೆಯಾಗುತ್ತಿದೆ ಇನ್ನು ನೀನೂ ಕುರುಪತಿಯೂ ಒಂದಾಗಿ ನಿಲವನ್ನು ಕಟ್ಟಿಕೊಂಡು ಜೋಲಾಡುತ್ತಲಿರಿ (ಕೃಷ್ಣನ ಕಡೆ ನೋಡಿ) ಚಿಕ್ಕಣ್ಣಾ ! ಇಷ್ಟೇ ಅಲ್ಲವೇ ?

ಕೃಷ್ಣ:—ತಂಗೀ ! ನಾನೇನು ಮಾಡಲಿ ! ನಾನಾಡುವ ಮಾತುಗಳು ನೀರಿಗಿಂತ ಹಗುರವಾಗಿ ತೋರಿ ಅಣ್ಣಯ್ಯನು ಯಾವಾಗಲೂ ನಾನು ಪಾಂಡವರ ಪಕ್ಷದಲ್ಲಿರುವೆನೆಂದು ದೂರುತ್ತಿರುವನು. ಈಗ ಕನ್ಯಾದಾನ ವಿಷಯದಲ್ಲಿ ನಾನು ಮಾಡತಕ್ಕುದೇನಮ್ಮಾ ! ನನ್ನಿಂದ ಏನಾಗುವುದು ? ನಿನಗೆ ದಿಕ್ಕಿರುವ ಕಡೆಗೆ ಹೋಗು.

ಬಲ:—ಅಬ್ಬಬ್ಬಾ ! ನಮ್ಮ ಕೃಷ್ಣನಿಗೆ ಎಲ್ಲಿಯೂ ಇಲ್ಲದ ಪೌರುಷವು ಬಂತೆ !

ಕೃಷ್ಣ:—ಒಡಹುಟ್ಟಿದವಳು ಎದುರಿಗೆ ಬಂದು ನಿಂತಿರುವಾಗ ಬಿಡುನುಡಿಗಳಿಂದ ಅವಳ ಮನಸ್ಸನ್ನು ಕೆಡಿಸಿ ಅಟ್ಟಿಬಿಡುವ ನಿಮ್ಮಂತಹ ಧರ್ಮಪ್ರವರ್ತಕರಿಗೆ ಪೌರುಷವೇ ಹೊರತು ಧರ್ಮವರ್ತನರಾದ ಪಾಂಡವರಲ್ಲಿ ಪಕ್ಷಪಾತ ತೋರಿಸುವ ನನಗೆ ನಿಜವಾದ ಪೌರುಷವಿರುವುದು ದೋಷವೆ ?

ಬಲ:—(ಕೋಪದಿಂದ ಕೈಚಾಚಿ) ಎಲಾ ಕೃಷ್ಣಾ ! ಈಕೆಯನ್ನು ಅರ್ಜುನನಿಗೆ ಕೊಟ್ಟು ಇಷ್ಟು ಸುಖ ಅನುಭವಿಸುತ್ತಿದ್ದೇವೆ. ಇನ್ನು

ಶಶಿರೇಖೆಯನ್ನು ಅಭಿಮನ್ಯುವಿಗೆ ಕೊಟ್ಟು ಎರಡು ಕೈಗಳಿಂದಲೂ ಜೂರುವುದೊಂದೇ ಉಳಿದಿದೆ.

ಕೃಷ್ಣ:—ಅಣ್ಣಾ! ತಮ್ಮ ಇಷ್ಟಕ್ಕೆ ವಿರೋಧವಾದ ಕಾರ್ಯಗಳಲ್ಲಿ ದೋಷಾರೋಪಣೆ ಮಾಡುವುದಕ್ಕೆ ಕಾರಣಗಳು ಇಲ್ಲದೆ ಹೋಗುವುವೆ? 'ಅತಿಸರ್ವತ್ರ ವರ್ಜಯೇತ್' ಎಂಬ ನ್ಯಾಯದಿಂದ ಅಮೃತದಲ್ಲಿ ಸಿಹಿಯು ಬಹು ಹೆಚ್ಚಾಗಿರುವುದರಿಂದ ಅದನ್ನೂ ವರ್ಜಿಸಲೇಬೇಕಲ್ಲವೆ? ನಿನ್ನ ಮನಸ್ಸಿಗೆ ಬಂದಂತೆ ಆಗಲಿ. ನಾವು ಹೊರಡುವೆವು.

ಹೀಗೆ ಹೇಳಿ ಸುಭದ್ರೆಯನ್ನೂ ಸಾತ್ಯಕಿಯನ್ನೂ ಒಡಗೊಂಡು ಮನೆಗೆ ಹೊರಟನು. ಸುಭದ್ರೆಯು ಕೃಷ್ಣನನ್ನು ಬಿಟ್ಟು ತನ್ನ ಅಂತಃಪುರಕ್ಕೆ ಹೋಗಿ ಚಿಂತೆಯಿಂದ ಮಲಗಿದಳು. ಆಕೆಯ ಮಗನಾದ ಅಭಿಮನ್ಯುವು ಬೇಟೆಗೆ ಹೋಗಿದ್ದು ಆಗ ತಾನೇ ಅಲ್ಲಿಗೆ ಬಂದನು. ಅವನು ತನ್ನ ತಾಯಿಯ ಸ್ಥಿತಿಯನ್ನು ನೋಡಿ ಗಾಬರಿಗೊಂಡು "ಅಮ್ಮಾ! ಇದೇನು? ಹೀಗೇಕೆ ಮಲಗಿರುವೆ? ನಿನ್ನ ಮುಖದ ಕಳೆ ಗುಂದಿರುವಂತಿದೆ. ಕಾರಣವೇನು? ಹೇಳಮ್ಮಾ ಸುಭದ್ರೆ. (ತಲೆ ಬಾಗಿಸಿಕೊಂಡು ಸುಮ್ಮನಿರುವಳು.)

ಅಭಿ:—(ಸಮೀಪಕ್ಕೆ ಬಂದು) ತಾಯೀ! ವನವಾಸದಲ್ಲಿರುವ ತಂದೆಗಳ ಕಡೆ ಯಾವ ಸಮಾಚಾರವೂ ಬಂದಿಲ್ಲವಷ್ಟೆ!

ಸುಭ:—(ಮುಖವನ್ನು ಬೇರೆ ಕಡೆ ತಿರುಗಿಸಿಕೊಳ್ಳುವಳು.)

ಅಭಿ:—(ತನ್ನಲ್ಲಿ) ಅಯ್ಯೋ! ಏನಿದು? ಎಷ್ಟು ಮಾತನಾಡಿಸಿದರೂ ದುಃಖಕಾರಣವನ್ನೇ ಹೇಳಲೊಲ್ಲಳು. ಏನು ಮಾಡಲಿ? (ಸ್ವಲ್ಪ ಹೊತ್ತು ಚಿಂತಿಸಿ) ಆಗಲಿ. ನನ್ನ ಪಿತೃಜನರು ಕ್ಷೇಮದಿಂದಲೇ ಇರುವರು. ಹಾಗಿಲ್ಲದಿದ್ದರೆ ಈಕೆಯು ಈ ಸ್ಥಿತಿಯಲ್ಲಿರಳು. ನನ್ನ ಮೇಲೆ ಏನಾದರೂ ಕೋಪಿಸಿಕೊಂಡಿರಬಹುದೇನೋ, ಕಾರಣವು ತಿಳಿಯದು. (ಸುಭದ್ರೆಯ ಪಾದಗಳ ಮೇಲೆ ಬಿದ್ದು) ಅಮ್ಮಾ! ಸಣ್ಣವನಾದ ನಾನು ನಿನಗೆ ಯಾವ ಅಪರಾಧವನ್ನೂ ಮಾಡಲಿಲ್ಲವಷ್ಟೆ! ನಿನ್ನ ಮಾತಿಗೆ ಎಂದಾದರೂ ಮಾರುತ್ತರ ಕೊಟ್ಟೆನೆ!

ಸುಭ:—(ಕೋಪದಿಂದ ಮಗನನ್ನು ಆಚೆಗೆ ನೂಕಿ ತಾನು ವಿಮುಖಳಾಗಿ ತಿರುಗುವಳು.)

ಅಭಿ:—(ಲಜ್ಜಾಕ್ರೋಧಗಳಿಂದ ಥಟ್ಟನೆ ಎದ್ದು) ಛೀ ! ಹೆತ್ತ ತಾಯಿಗೆ ಕೋಪವನ್ನೆಬ್ಬಿಸಿ ಮನೋವ್ಯಥೆಯನ್ನುಂಟುಮಾಡಿದ ಈ ಪ್ರಾಣಗಳಿಂದ ಫಲವೇನು ? ಅವುಗಳನ್ನೀಗಲೇ ಪರಿತ್ಯಜಿಸುವೆನು. (ಒರೆಯಿಂದ ಕತ್ತಿಯನ್ನು ಈಚೆಗೆ ಹಿರಿಯುವನು.)

ಸುಭ:—(ಧಿಗ್ಗನೆದ್ದು) ಅಯ್ಯಯ್ಯೊ ! ದುಡುಕಿಗಾ ! ಅವಸರಪಡಬೇಡ. ಸ್ವಲ್ಪ ತಡೆ. (ಬಿಗಿಯಾಗಿ ಕೈಹಿಡಿದುಕೊಳ್ಳುವಳು)

ಅಭಿ:—(ಸಿಟ್ಟನಿಂದ ಕೈಬಿಡಿಸಿಕೊಳ್ಳುತ್ತಾ) ತಾಯಿಾ ! ನಿನಗೆ ಕೋಪವನ್ನುಂಟುಮಾಡಿದ ಈ ಜನ್ಮದಿಂದೇನು ? ಬಿಡು. ಇದನ್ನು ಪರಿತ್ಯಜಿಸುವೆನು.

ಸುಭ:—ಮಗೂ ! ನಿನ್ನಿಂದ ಯಾವ ತಪ್ಪೂ ನಡೆದಿಲ್ಲ. ಸೈರಿಸಿಕೋ.

ಅಭಿ:—ಹಾಗಾದರೆ ನಿನ್ನ ಚಿಂತೆಗೆ ಕಾರಣವನ್ನು ಹೇಳು.

ಸುಭ:—(ನಿಟ್ಟುಸಿರು ಬಿಡುತ್ತಾ) ಕುಮಾರನೇ, ಶಶಿರೇಖೆಯು ನಿನಗೆ ಪ್ರಿಯಳಾಗಿರುವುದರಿಂದ ನಿನ್ನನ್ನೇ ಮದುವೆಯಾಗುವಳೆಂದು ನಂಬಿದ್ದೆನು. ಬಲರಾಮನು ನಿನ್ನನ್ನು ಕಡೆಗಣಿಸಿ, ಕೌರವನ ಮಗ ಲಕ್ಷಣನಿಗೆ ಮಗಳನ್ನು ಕೊಡಬೇಕೆಂದು ನಿಶ್ಚಯಿಸಿದನು. ಅವನಿಗೆ ನಾನು ಯಾವ ದ್ರೋಹ ಮಾಡಿದ್ದೆನೋ ಕಾಣೆ.

ಅಭಿ:—(ಕಿರುನಗೆಗೂಡಿದ ನೀರಸಭಾವದಿಂದ) ತಾಯಿಾ ! ನೀನು ಎಂತಹ ಹುಚ್ಚಿ ! ನೀನು ಮನಸ್ಸಿಗೆ ವ್ಯಥೆ ತಂದುಕೊಂಡು ನನ್ನ ಮನಸ್ಸಿಗೂ ಕಳವಳವನ್ನು ಹುಟ್ಟಿಸಿದೆ. ಮಾವಯ್ಯನು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳನ್ನು ತನ್ನ ಇಷ್ಟಬಂದವನಿಗೆ ಕೊಡಲಿಕ್ಕೆ ನಿನ್ನ ಅಡ್ಡಿ ಏನಿದೆ ?

ಸುಭ:—ಹಾಗಲ್ಲ, ಮಗುವೇ. ಬಲರಾಮನು ನಿನಗೆ ಮಗಳನ್ನು ಕೊಡಲೊಲ್ಲೆನೆಂದು ಹೇಳಿದರೂ ಹೇಳಲೊಲ್ಲನೇಕೆ ? ನನ್ನ ಹೊಟ್ಟೆ ಉರಿದುಹೋಗುವಂತಹ ಮಾತುಗಳಿಂದ ನಿಂದಿಸಿಬಿಟ್ಟನು. ಇದನ್ನು ಕೇಳಿ ನಾನು ಹೇಗೆ ಸೈರಿಸಿಕೊಂಡಿರಲಿ. ಅವುಗಳನ್ನು ಹೇಳುವೆನು.

ಕೇಳು ತಾನಿಟ್ಟ ಅನ್ನವನ್ನುಂಡು, ಕೊಟ್ಟ ಬಟ್ಟೆಯನ್ನುಟ್ಟು ಕೊಂಡು ಬಂದು ಮೂಲೆಯಲ್ಲಿ ಬಿದ್ದಿರದೆ ಸಕಲೈಶ್ವರ್ಯಸಂಪನ್ನಳಾದ ತನ್ನ ಮಗಳನ್ನು ನಾನು ಸೊಸೆಯೆನ್ನುವುದೊಂದು ತಪ್ಪಂತೆ! ಬೆಟ್ಟಬೆಟ್ಟಗಳಲ್ಲಿ ಅಲೆದಾಡುವ ನಿಮ್ಮ ತಂದೆಯ ಬೀಯಗತನವು ಕಾಮಧೇನುವನ್ನು ಕಳೆದುಕೊಂಡು ಸಾದೆಗಳನ್ನು ಮಾರಿಕೊಂಡಹಾಗಾಗುವುದಂತೆ! ಇಂತಹ ಬಿಡಿನುಡಿಗಳೆಷ್ಟೋ ಆಡಿದನು. ಅವಕ್ಕೆ ಲೆಕ್ಕವೇ ಇಲ್ಲ (ಕಣ್ಣೀರು ಸುರಿಸುವಳು)

ಅಭಿ:—(ಕ್ರೋಧದಿಂದ) ಅಮ್ಮಾ! ಅಳಬೇಡ ಆ ಬಲರಾಮನು ತನ್ನ ಮಗಳನ್ನು ಕೊಡದಿದ್ದರೂ ಚಿಂತೆಯಿಲ್ಲ. ದುರಾತ್ಮನಾದ ದುರ್ಯೋಧನನನ್ನು ಹೊಗಳಿ, ಧರ್ಮಮೂರ್ತಿಗಳಾಗಿಯೂ ಸೂರ್ಯಾಗ್ನಿಸಮತೇಜಸ್ಕರಾಗಿಯೂ ಇರುವ ಯುಧಿಷ್ಠಿರಾದಿಗಳನ್ನು ನಿಂದಿಸುವುದಕ್ಕೆ ಕಾರಣವೇನೋ ತಿಳಿಯುವೆನು. (ಬಿಳ್ಳುವಿನಾಸೆಯನ್ನು ಸವರುತ್ತಾ) ಬಲರಾಮಾದಿ ಯಾದವರೂ, ಪಾಪಾತ್ಮರಾದ ಕೌರವರೂ ಬ್ರಹ್ಮಾದಿ ದೇವತೆಗಳೂ ಬಂದು ನಿಂದು ಎದುರಿಸಿದರೂ ಅವರ ಹುಟ್ಟಡಗಿಸಿ ನನ್ನ ಪಿತೃಜನರು ಸಂತೋಷಪಡುವಂತೆ ಮಾಡಿ ಅವನ ಮಗಳನ್ನು ಮದುವೆಯಾಗದೆ ಇದ್ದರೆ ನಾನು ಪಾರ್ಥಸಂಜಾತನೇ ಅಲ್ಲ. (ಎಂದು ಧನುಷ್ಟಂಕಾರ ಮಾಡತೊಡಗಿದನು.)

ಸುಭ:—(ಕೈಹಿಡಿದುಕೊಂಡು) ಅಭಿಮನ್ಯು ಕುಮಾರಾ! ನೀನು ಈಗ ಹೊರಟರೆ ಮೂರ್ಖನೆಂದು ಜನರು ಹೀಯಾಳಿಸುವುದಲ್ಲದೆ ಈ ಸುಭದ್ರೆಯು ಎಂತಹ ಗಯ್ಯಾಳಿ ಹೆಂಗಸು ಎಂದು ನಿಂದಿಸುವರು. ಅವನು ಮಗಳನ್ನು ಕೊಡದಿದ್ದರೆ ಬಿಡಲಿ. ಮಾವನ ಮೇಲೆ ಕತ್ತಿ ಕಟ್ಟಬೇಡ. ಈ ಯೋಚನೆಯನ್ನು ಬಿಡಪ್ಪಾ!

ಅಭಿ:—ಗಂಡನನ್ನು ಬಿಟ್ಟು, ಹುಟ್ಟಿದ ಮನೆಯೇ ಸೌಖ್ಯಪ್ರದವೆಂದೆಣಿಸುವ ಮೂರ್ಖರಿಗೆ ಈ ಲೋಕದಲ್ಲಿ ಬಹು ಕಷ್ಟಗಳುಂಟಾಗುವುವಮ್ಮಾ. ಪತಿಗೋಸ್ಕರ ಬೆಂಕಿಯುಲ್ಲಿಯಾದರೂ ಬಿದ್ದು ಸಾಯಬೇಕೆಂಬ ಗಾಥೆಯನ್ನು ಕೇಳಲ್ಲವೇ?

ಸುಭ:—ಸುಗೂ ಇದರಲ್ಲಿ ನನ್ನ ಲೋಪವೇನೂ ಇಲ್ಲ ನಾನು ತೌರು ಮನೆಗೆ ಹೊರಡುವುದೇ ಇಲ್ಲವೆಂದು ಎಷ್ಟು ಮುಷ್ಕರ ಹಿಡಿದರೂ ಕುಮಾರನ ಸಂರಕ್ಷಣೆಗಾಗಿ ನೀನು ದ್ವಾರಕೆಗೆ ಹೋಗಿ ಅಲ್ಲಿರಬೇಕೆಂದು ನಿನ್ನ ತಂದೆಯುವರು ನನಗೆಆಜ್ಞೆ ಮಾಡಿದರು.

ಇದನ್ನು ಕೇಳಿ ಅಭಿಮನ್ಯುವು ಸುಮ್ಮನಾದನು. ಮುಂದಿನ ಕರ್ತವ್ಯವನ್ನು ನಿದಾನವಾಗಿ ಯೋಚಿಸೋಣ. ಹಿರಿಯ ಮಾವನಂತೆ ಶ್ರೀ ಕೃಷ್ಣನೂ ನಮ್ಮನ್ನು ಕೈಬಿಡುವನೆ ? ನಾವು ಚಿಂತಿಸಲೇಕೆ ? ದೈವಾನುಗ್ರಹವಿದ್ದಂತಾಗಲಿ; ಚಿಂತಿಸಬೇಡವೆಂದು ತಾಯಿಗೆ ಸಮಾಧಾನ ಹೇಳಿ, ತನ್ನ ಕೆಲಸಕ್ಕೆ ಹೋದನು.

ಅತ್ತ ಶಶಿರೇಖೆಯು ತನ್ನನ್ನು ಕುರುರಾಜನ ಮಗ ಲಕ್ಷಣನಿಗೆ ಕೊಡುವರೆಂಬ ವರ್ತಮಾನ ಕೇಳಿ ಬಲು ಚಿಂತಾಕ್ರಾಂತಳಾಗಿ “ ಅಯ್ಯೋ ಏನು ಮಾಡಲಿ ! ನಮ್ಮಪ್ಪನು ಏಕೆ ಇಂತಹ ಹುಚ್ಚು ಯೋಚನೆ ಮಾಡಿದನು. ಅಪ್ಪಾ ! ನಾನು ನಿನಗೆ ಶತ್ರುವೆಂದು ತಿಳಿದೆಯೋ? ನಾನು ಏನು ಅನ್ಯಾಯ ಮಾಡಿದೆನು? ಎಲೌ ತಾಯಿಯೇ ಲೋಕದಲ್ಲಿ ತಂದೆಗಳು ಹೇಗಿದ್ದರೂ ಹೆಣ್ಣು ಹುಡುಗಿಯರಿಗೆ. ತಾಯಿಯರು ಅತ್ಯಂತ ಆಪ್ತೆಯರಾಗಿ ತಮ್ಮ ಮಕ್ಕಳನ್ನು ಪ್ರಾಣಕ್ಕೆ ಸಮಾನವಾಗಿ ಭಾವಿಸುತ್ತಿರುವರು; ಅಂತದರಲ್ಲಿ ನಾನು ನಿನಗೂ ಕಹಿಯಾದೆನೆ ? ಎಲೈ ಸುಯೋಧನನೇ ನಿನ್ನ ಮಗನಿಗೆ ನನ್ನನ್ನು ಕೂಡಿಸಬೇಕೆಂದು ಯತ್ನಿಸುವುದು ಕಾಗೆಯ ಮೂಗಿಗೆ ತೊಂಡೆಯ ಹಣ್ಣನ್ನು ಕಟ್ಟುವಂತೆಯೇ ಅಲ್ಲವೆ? ಎಲೈ ಲಕ್ಷಣಾ ! ನಿನ್ನ ಬಯಕೆಯು ಅಲಭ್ಯಾರಂಭವೆಂದು ಭಾವಿಸು. ಹಾ ಪ್ರಾಣನಾಯಕಾ ! ನನ್ನ ತಂದೆಯು ಧನಿಕರಿಗೆ ವಶಂವದನಾಗಿ ನನ್ನನ್ನು ನಿನಗೆ ಕೊಡುವುದಿಲ್ಲವೆಂದ ಮಾತ್ರಕ್ಕೆ ನನ್ನನ್ನು ದಡವಿಲ್ಲದ ವಿಯೋಗ ಸಾಗರದಲ್ಲಿ ಮುಳುಗಿಸಿ ಹೋಗಬಹುದೆ ? ನನ್ನ ಮನಸ್ಸನ್ನು ಮೊದಲೇ ನಿನಗೆ ಮಾರಿಬಿಟ್ಟೆನಲ್ಲ ! ಇಂತಹ ಕ್ರೀತವಸ್ತುವನ್ನು ನಿರ್ನಿಮಿತ್ತವಾಗಿ ನೀನು ಪರಿತ್ಯಜಿಸಬಹುದೆ? ಅಯ್ಯೋ ! ಈ ಲೋಕದಲ್ಲಿ ಪುರುಷರು ಯಾವ ಕೊರತೆಯೂ ಇಲ್ಲದೆ ಸುಖದಿಂದ ಇರುವರು ಎಲ್ಲಿ ಹೋದರೂ ಹಾಳು ಸ್ತ್ರೀಜನ್ಮಕ್ಕೆ ತಾನೇ ಲೆಕ್ಕವಿಲ್ಲದ ದುಃಖಗಳು ಬರುವುವು ’ಎಂದು ಮನಸ್ಸು ಬಂದಂತೆ ಪ್ರಲಾಪಿ

ಸುತ್ತಾ ಸಮೀಪದಲ್ಲಿದ್ದ ಸಖಿಯನ್ನು ನೋಡಿ, " ಗೆಳತೀ ! ಈ ಜಗತ್ತೆಲ್ಲ ವೂ ಗಾಢಾಂಧಕಾರದಿಂದ ತುಂಬಿಕೊಂಡಿರುವಂತೆ ನನ್ನ ಕಣ್ಣುಗಳಿಗೆ ಕಾಣಬರುತ್ತಿದೆಯಲ್ಲಾ ! ಏನುಮಾಡಲಿ ? " ಎಂದು ವಿರಹತಾಪದಿಂದ ಬಾಧೆಪಡುತ್ತಿದ್ದಳು. ಸಖಿಯರು ಆ ಬಾಲೆಗೆ ಶೈತ್ಯೋಪಚಾರ ಮಾಡಿ ಸಂತೈಸುತ್ತಿದ್ದರು.

ಸುಭದ್ರೆಯು ತೌರುಮನೆಯಲ್ಲಿ ನಿಲ್ಲಲಿಕ್ಕೆ ಮನಸ್ಸಿಲ್ಲದೆ ಅರಣ್ಯದಲ್ಲಿರುವ ಪತಿಯ ಬಳಿಗೆ ಹೋಗಬೇಕೆಂದು ನಿಶ್ಚಯಿಸಿ ಯಾರಿಗೂ ಹೇಳದೆ, ತನ್ನ ಮಗನನ್ನು ಕರೆದುಕೊಂಡು ಹೊರಟಳು ದಾರಿಯಲ್ಲಿ ಭೀಮನ ಮಗನಾದ ಘಟೋತ್ಕಚನ ಆಶ್ರಮವು ಸಿಕ್ಕಿತು. ಆ ಘಟೋತ್ಕಚನ ತಮ್ಮನು ಮಾಂಸಾರ್ಥಿಯಾಗಿ ಕಾಡಿನಲ್ಲಿ ಅಲೆಯುತ್ತಿರುವಾಗ ಶೂರನಾದ ಅಭಿಮನ್ಯುವು ತಾಯಿಯನ್ನು ಕರೆದುಕೊಂಡು ಹೋಗುತ್ತಾ, ದಾರಿಯಲ್ಲಿ ಅಡ್ಡವಾಗಿದ್ದ ಮರಗಳನ್ನು ಕಡಿದು ಬಿಸುಟು, ಕ್ರೂರಮೃಗಗಳನ್ನು ದಂಡಿಸುತ್ತಾ ಪ್ರಯಾಣಮಾಡುತ್ತಿದ್ದನು ಕರಿಬಲನು ಅವನನ್ನು ಕೊಂದು ತಿನ್ನಬೇಕೆಂದು ಮೇಲೆ ಬೀಳಲು ಬಲಶಾಲಿಯಾದ ಆ ಕುಮಾರನು ಒಂದು ಬಾಣವನ್ನು ಪ್ರಯೋಗಿಸಿ ಅವನನ್ನು ಮೂರ್ಛೆಗೊಳಿಸಿದನು ಅವನ ಹಿಂದೆ ಮತ್ತೆ ಕೆಲವು ರಾಕ್ಷಸರು ಬಂದರು. ಅವರಿಗೂ ಇದೇ ಗತಿಯಾಯಿತು. ಘಟೋತ್ಕಚನಿಗೆ ಈ ಸುದ್ದಿ ತಿಳಿದು ಓಡಿಬಂದನು. ಆ ಸಹೋದರರಿಬ್ಬರೂ ಬಹಳ ಹೊತ್ತಿನ ತನಕ ಹುಟಾಹುಟಿಯಾಗಿ ಕಾದಿದರು. ಇಬ್ಬರಿಗೂ ಮೈಯಲ್ಲೆಲ್ಲಾ ಗಾಯಗಳಾದವು. ಘಟೋತ್ಕಚನು ಮೈಮರೆತಿದ್ದು ಅಭಿಮನ್ಯುವಿನ ಶೈತ್ಯೋಪಚಾರಗಳಿಂದ ಚೇತರಿಸಿಕೊಂಡನು. ಬಳಿಕ ಅವನೆದ್ದು ಅಭಿಮನ್ಯುವನ್ನು ನೋಡಿ, " ಎಲೈ ವೀರನೇ ! ನೀನಾರು ? ಈ ತಾಯಿ ಯಾರು ? ಇಲ್ಲಿಗೆ ಏತಕ್ಕೆ ಬಂದಿರಿ? " ಎಂದು ಕೇಳಲು ಆ ಕುಮಾರನು ತನ್ನ ವೃತ್ತಾಂತವನ್ನೆಲ್ಲಾ ತಿಳಿಸಿದನು. ಅದನ್ನು ಕೇಳಿ ಘಟೋತ್ಕಚನು ಇವನು ತನ್ನ ತಮ್ಮನೆಂದು ತಿಳಿದು ಬಹಳವಾಗಿ ಪಶ್ಚಾತ್ತಾಪಗೊಂಡು, ಚಿಕ್ಕಮ್ಮನಾದ ಸುಭದ್ರೆಗೆ ನಮಸ್ಕರಿಸಿ, ಅಭಿಮನ್ಯುವನ್ನು ಅಪ್ಪಿಕೊಂಡು " ನನ್ನ ತಪ್ಪನ್ನು ಕ್ಷಮಿಸಿರಿ. ನೀವು

ಇಂತವರೆಂದು ತಿಳಿಯದೆ ದ್ರೋಹವಮಾಡಿದೆನು. ಇದನ್ನು ಮನಸ್ಸಿನಲ್ಲಿ ಡಬೇಡಿರೆಂದು ಸಮಾಧಾನ ಮಾಡಿದನು. ಅದಕ್ಕೆ ಅಭಿಮನ್ಯುವು,—

ಅಭಿ:—ಅಣ್ಣಾ! ನಾನು ಮಾಡಿದುದೂ ತಪ್ಪೇ. ಹಿರಿಯರಿಗೆ ಅನ್ಯಾಯ ವಾಗಿ ನೋಯಿಸಿದ ಅಪರಾಧವನ್ನು ದಯಮಾಡಿ ಕ್ಷಮಿಸಬೇಕು (ನಮಸ್ಕರಿಸುವನು.)

ಘಟೋ:—(ಅಭಿಮನ್ಯುವಿನ ತಲೆಯನ್ನೆತ್ತಿ ಮುಂಡಾಡಿ) ಮಗುವೇ ಕ ಮಲಾಕರವು ಮಕರಂದವನ್ನು ಹೊರತು ಮತ್ತಾವುದನ್ನು ಚೆಲ್ಲು ವುದು? (ಸುಭದ್ರೆಯ ಕಡೆ ತಿರುಗಿ) ತಾಯಿ! ಬುದ್ಧಿಹೀನನಾಗಿ ನಿಮ್ಮನ್ನು ಶ್ರಮಪಡಿಸಿದೆನು. ಮನ್ನಿಸಬೇಕು (ಎಂದು ಪಾದ ಗಳ ಮೇಲೆ ಬೀಳುವನು.)

ಸುಭ:—ಮಗುವೇ, ದುರ್ವಾರವಾದ ದೈವವು ಮಾಡಿಸತಕ್ಕ ಕೆಲಸಗಳನ್ನು ಮಾಡುತ್ತಿರುವೆವು. ಇದರಲ್ಲಿ ನಿನ್ನ ದೋಷವೇನಿದೆ? ಇದನ್ನು ಮರೆಯೋಣ ಬಿಟ್ಟುಬಿಡು.

ಘಟೋ:—(ಎದ್ದು) ತಾಯಿ! ಹೇಗೆ ತಾನೇ ಮರೆಯಲಿ! ಈ ಸುದ್ದಿ ನನ್ನ ತಂದೆಗಳಿಗೆ ತಿಳಿದರೆ ಏನೆನ್ನರು? ನೀವು ಹೀಗೆ ದಾರಿತಪ್ಪಿ ಈ ಮಾರ್ಗದಲ್ಲಿ ಬಂದರೆ ನಿಮ್ಮ ಆಯಾಸ ಪರಿಹರವಾಗುವಂತೆ ಉಪಚರಿಸಿ ಆದರಿಸದೆ ಹೀಗೆ ನೋಯಿಸಿದ ನನ್ನ ಕರಂಗಳು ನಿಂದೆ ಗೆ ಆಕರಂಗಳಲ್ಲವೆ? ಇದನ್ನು ಕೇಳಿದವರು ನನ್ನನ್ನೆಷ್ಟು ನಿಂದಿಸು ವರು? ಛಿ ಛೀ! ನಾನು ಪರಮ ದ್ರೋಹಿಯು.

ಸುಭ:—ಮಗೂ, ನೀರು ಹರಿದುಹೋದ ಮೇಲೆ ಸೇತುವೆ ಕಟ್ಟಿ ಫಲ ವೇನು?

ಘಟೋ:—ಅಮ್ಮಾ! ನಮ್ಮ ಅರಮನೆಗೆ ಹೋಗೋಣ ಬಾ. ನಮ್ಮ ಮ್ಮನಾದ ಹಿಡಿಂಬಿಯು ನನಗಾಗಿ ನಿರೀಕ್ಷಿಸಿಕೊಂಡಿರುವಳು

ಎಂದು ಹೇಳಿ ಅವರಿಬ್ಬರನ್ನೂ ಕರೆದುಕೊಂಡು ಮನೆಗೆ ಹೋಗಿ, ತಾಯಿಗೆ ನಮಸ್ಕರಿಸಿ ಯಾವದ್ವೃತ್ತಾಂತವನ್ನೂ ತಿಳಿಸಿದನು. ಸುಭದ್ರಾ ಭಿಮನ್ಯುಗಳು ಆಕೆಗೆ ಅಭಿವಂದಿಸಿದರು. ಅವಳು ಅವರನ್ನು ಸತ್ಕರಿಸಿ, ಕುಶಲಪ್ರಶ್ನೆಯಾದ ಬಳಿಕ ನಡೆದ ಸಮಾಚಾರವನ್ನೆಲ್ಲಾ ಕೇಳಿ ತಿಳಿದು

ತನ್ನ ಮಗನನ್ನು ನೋಡಿ. "ಘಟೋತ್ಕಚಾ ! ವನವಾಸ ಕ್ಲೇಶದಲ್ಲಿರುವ ಪತಿಗಳ ಬಳಿಗೆ ಇವರೇಕೆ ಹೋಗಿ ಮತ್ತಷ್ಟು ಕ್ಲೇಶಪಡಿಸಬೇಕು ? ಇವರ ಅಭೀಷ್ಟವನ್ನು ನೆರವೇರಿಸಲು ನಿನ್ನಿಂದ ಸಾಧ್ಯವಿಲ್ಲವೆ ? " ಎಂದು ಕೇಳಿದಳು ಅದಕ್ಕವನು "ತಾಯೀ! ಮಾಯಾಚತುರನಾದ ನನಗೆ ಇದೊಂದು ಲಕ್ಷ್ಯವೆ? ಸ್ವಲ್ಪ ನಿರೀಕ್ಷಿಸಿಕೊಂಡಿರು. ಬಲರಾಮನು ನಿಶ್ಚಯಿಸಿರುವ ಲಗ್ನದಲ್ಲಿಯೇ ಆ ಹುಡುಗಿಯನ್ನು ಕೊಟ್ಟು ಇಲ್ಲಿಯೇ ನಿನ್ನ ಕಣ್ಣೆದುರಿಗೆ ಮದುವೇ ಮಾಡಿಸುವೆನು ನೋಡುತ್ತಲಿರು " ಎಂದು ಅವರನ್ನು ಸಮಾಧಾನ ಪಡಿಸಿ ಕೂಡಲೇ ತನ್ನ ಆಪ್ತ ಜನರನ್ನು ಕರೆದುಕೊಂಡು ದ್ವಾರಕೆಗೆ ಹೋದನು. ಅಲ್ಲಿ ಮಾಯಾ ಶಶಿರೇಖೆಯೊಬ್ಬಳನ್ನು ನಿರ್ಮಿಸಿ, ಪ್ರತ್ಯೇಕ ಮಂಚದ ಮೇಲೆ ಮಲಗಿಸಿ, ನಿಜವಾದ ಶಶಿರೇಖೆಯನ್ನು ಮಂಚದೊಂದಿಗೆ ಹೊರಿಸಿಕೊಂಡು ತನ್ನ ಆಶ್ರಮಕ್ಕೆ ಬಂದು ಸೇರಿ ತಾಯಿ ಹಿಡಿಂಬಿಗೂ ಸುಭದ್ರೆಗೂ ತೋರಿಸಿ, "ಇವಳೇ ನಿಮ್ಮ ಸೊಸೆಯೋ ? ಚೆನ್ನಾಗಿ ನೋಡಿರಿ " ಎಂದು ಕೇಳಿದನು. ಅವರು ಆಶ್ಚರ್ಯಗೊಂಡು ಅವನ ಸಾಹಸವನ್ನು ಹೊಗಳಿದರು. ಸ್ವಲ್ಪ ಹೊತ್ತಿಗೆ ಆ ಹುಡುಗಿ ಎಚ್ಚತ್ತು ನೋಡಿದಳು. ತಮ್ಮ ಅರಮನೆಯಲ್ಲ. ದ್ವಾರಕಾಪುರವೂ ಅಲ್ಲ. ಅರಣ್ಯದ ಗುಹೆಯಲ್ಲಿ ಮಲಗಿದೆನೆಂದು ತಿಳಿದಳು. ಅಷ್ಟರಲ್ಲಿ ಸುಭದ್ರೆ ಮುಂತಾದವರು ಬಂದರು. ಆ ಕನ್ಯೆಯು ನಾಚಿಕೊಂಡು ಮೌನದಿಂದ ಇದ್ದಳು. ಸುಭದ್ರೆಯು ನಡೆದ ವೃತ್ತಾಂತವನ್ನರುಹಿ, ಅವಳನ್ನು ಹೆದರಬೇಡವೆಂದು ಸಂತೈಸಿದಳು. ಬಳಿಕ ವಿವಾಹ ಪ್ರಯತ್ನಗಳನ್ನು ಸಿದ್ಧಪಡಿಸುತ್ತಾ ಲಗ್ನವನ್ನು ನಿರೀಕ್ಷಿಸಿಕೊಂಡಿದ್ದು ಆಪ್ತರನ್ನೂ ಇಷ್ಟಜನರನ್ನೂ ಬರಮಾಡಿಕೊಂಡರು.

ಅತ್ತ ಬಲರಾಮನು ದುರ್ಯೋಧನನ ಮಗ ಲಕ್ಷಣನಿಗೆ ತನ್ನ ಮಗಳನ್ನು ಕೊಟ್ಟು ಮದುವೇ ಮಾಡುವೆನು ಎಂದು ಮುಹೂರ್ತ ನಿಶ್ಚಯ ಮಾಡಿ, ಲಗ್ನಪತ್ರಿಕೆಯನ್ನು ಬರೆದು, ಕೌರವರಿಗೂ ಇತರ ಮಿತ್ರರಾಜರುಗಳಿಗೂ ಕಳುಹಿಸಿಕೊಟ್ಟನು ವೇಳೆಗೆ ಸರಿಯಾಗಿ ಎಲ್ಲರೂ ಬಂದು ಸೇರಿದರು. ಶುಭಕಾರ್ಯಗಳಿಗೆ ಆರಂಭಿಸಬೇಕು ಮಾಯಾ ಶಶಿರೇಖೆಯೇ ಬಲನ ಪುತ್ರಿಯೆಂದು ತಿಳಿದು, ಆ ಕನ್ಯೆಗೆ ಮಂಗಳಸ್ನಾನಾದಿಗ

ಳನ್ನು ನೆರನೇರಿಸಿದರು ಪಟ್ಟಣವೆಲ್ಲಾ ಶೃಂಗರಿಸಲ್ಪಟ್ಟಿತು. ವಿವಾಹ ಮಂಟಪವು ಕುರುಪತಿಯ ವಿಭವಕ್ಕೆ ತಕ್ಕಂತೆ ಒಪ್ಪುತ್ತಿತ್ತು. ರಾಜಧಾನಿಯಲ್ಲೆಲ್ಲಾ ಜನರು ಕಿಕ್ಕಿರಿದು ನೆರೆದಿರುವರು ವೈದಿಕರು ಮುಹೂರ್ತವು ಸಮೀಪಿಸಿದೆ. ತ್ವರೆಪಡಿಸಬೇಕೆಂದು ಆತುರಗೊಳಿಸುತ್ತಿದ್ದರು. ಮಂಗಳವಾದ್ಯಗಳು ಭೋರ್ಗರೆಯುತ್ತಿದ್ದುವು.

ಆ ವೇಳೆಯಲ್ಲಿ ಮಾಯಾ ಶಶಿರೇಖೆಯನ್ನು ಅಲಂಕರಿಸುವುದಕ್ಕೆ ಇಬ್ಬರು ಸುವಾಸಿನಿಯರು ಬಂದರು. ಅವರಲ್ಲಿ ಮೊದಲನೆಯವಳು ವಧುವನ್ನು ನೋಡಿ,—

ಮೊದ:—ಅವ್ಮಾ ಶಶಿರೇಖೆ! ನೀನು ಬಲು ಅದೃಷ್ಟವಂತೆ. ಕುರುಚಕ್ರವರ್ತಿಯು ಸಕಲ ಬಂಧುಮಿತ್ರಪರಿಜನಪರಿವೃತನಾಗಿ ಬಂದಿರುವನು. ವಿವಾಹ ಮಂಟಪವು ಅಲಂಕರಿಸಲ್ಪಟ್ಟಿರುವುದು. ನಿನ್ನ ಪತಿಯಾದ ಲಕ್ಷಣನನ್ನು ಅಲಂಕರಿಸಿರುವರು. ಇನ್ನು ನೀನು ಸಂತೋಷದಿಂದ ಇರಬೇಕು. ಆಹಾ! ಆ ಲಕ್ಷಣನನ್ನು ನೋಡಲಿಕ್ಕೆ ಎರಡು ಕಣ್ಣುಗಳು ಸಾಲವು ಕಾಣೇ

ಎರಡನೆ:—ಅವ್ಮಾ ಶಶಿರೇಖೇ! ಅಭಿಮನ್ಯು ಅಭಿಮನ್ಯುವೆಂದು ಏಕೆ ಬಡರುತ್ತಿರುವೆ? ಇದುವರೆಗೆ ನೀನು ಹುಡುಗಿಯಾಗಿದ್ದುದರಿಂದ ಹೇಗೆ ಆಡಿಕೊಂಡಿದ್ದರೂ ಒಂದು ಆಟವೆಂದು ಜನರು ಗಮನಿಸುತ್ತಿರಲಿಲ್ಲ ಇನ್ನು ಮುಂದೆ ಅಂತಹ ಮಾತುಗಳನ್ನಾಡಬೇಡ. ಆ ತಿರುಕನ ಮಗನಾದ ಅಭಿಮನ್ಯು ಈ ಲಕ್ಷಣನ ಅಂಗರಕ್ಷಕನಿಗೆ ಸುದಾ ಸರಿದೂಗಲಾರನೆಂದು ತಿಳಿ

ಮಾಯಾ ಶಶಿರೇಖೆ:—ನೀವು ಬೇಕಾದ ಹಾಗೆ ಬಡರಿಕೊಳ್ಳಿರಿ. ನಾನು ಮಲಗಿ ಹಾಯಿಯಾಗಿ ನಿದ್ರಿಸುವೆನು (ಎಂದು ಮಲಗಿಬಿಟ್ಟಳು)

ಮೊದ:—ಸಖೀ! ಎಂದಿಗೂ ನಿದ್ದೆಯೇನೇ! ಏಳು. (ಸ್ವಲ್ಪ ಕದಲಿಸುವಳು)

ಮಾ. ಶಶಿ:—(ಗೊಣಗುಟ್ಟುತ್ತಾ ಎದ್ದು) ಏನಿರೆ ಅದು! ನಿಮ್ಮನ್ನಾರು ಕೇಳಿದರು! (ನಿಟ್ಟುಸಿರುಬಿಡುತ್ತಾ) ಸುಖವಾಗಿ ನನ್ನನ್ನು ನಿದ್ದೆ ಹೋಗಗೊಳಿಸರಲ್ಲಾ! ಕಣ್ಣಾರೆ ನಿದ್ದೆಮಾಡುತ್ತಿದ್ದ ನನ್ನನ್ನು

ಎಬ್ಬಿಸಿ ಮದುವೆ ಮದುವೆ ಎಂದು ಬದರುತ್ತಾ ಏನೇನೋ ಕಂತೆ ಪುರಾಣ ಹೇಳುವರು. ಮದುವೆ ಇದ್ದರೆ ನಾಳೆ ನೋಡಿಕೊಳ್ಳೋಣ. ಮುಂಡೆಯರಾ, ಸುಮ್ಮನೆ ಕೂತುಕೊಂಡಿರಲೊಲ್ಲಿರಾ !

ಮೊದಲನೆ:—ಮತ್ತೊಬ್ಬಳೊಂದಿಗೆ ಏನೇ ! ಈ ಶಶಿರೇಖೆಯ ನಡತೆ ನೋಡಿದರೆ ಸೋಜಿಗವಾಗುತ್ತಿದೆ. ಯಾವಾಗಲೂ ಮೃದುವಚನಗಳನ್ನಾಡುತಿದ್ದ ಈ ಹುಡುಗಿಯು ಈ ದಿನ ಹುಚ್ಚು ಹಿಡಿದವಳಂತೆ ಬಿರುನುಡಿಗಳಾಡುತ್ತಿರುವಳಲ್ಲಾ !!

ಎರಡನೆ—ಹಾಗಲ್ಲವೇ. ಅಭಿಮನ್ಯು ವಿಯೋಗದ ಮುನಿಸಿನಿಂದ ಹೀಗೆ ಹುಚ್ಚುಹುಚ್ಚಾಗಿ ಬದರುತ್ತಿರುವಳು.

ಮೊದಲನೆ:—(ಕನ್ಯೆಯನ್ನು ಕುರಿತು) ಶಶಿರೇಖೆ ! ಲಕ್ಷಣನು ಗಂಡನಾಗುತ್ತಿರುವಾಗ ನೀನು ಹೇಗಿರಬೇಕೋ ?

ಮಾಯಾಶಶಿ:—(ಎದ್ದು ಕಿರುನಗೆಯಿಂದ) ಲಕ್ಷಣನು ಇನ್ನೊಂದು ಕ್ಷಣದಲ್ಲಿ ಅವಲಕ್ಷಣನೇ ಆಗುವನು ನೋಡುತ್ತಿರು.

ಎರಡನೆ:—ಅಮ್ಮಾ, ನೀನು ಚಕ್ರವರ್ತಿಯ ಪಟ್ಟದರಸಿಯಾಗಿ ಜಗತನ ಮಾಡಿಕೊಂಡಿರುವಾಗ ನಾನು ಬಂದರೆ ನನಗೆ ತಕ್ಕ ಬಂಧು ಮರ್ಯಾದೆ ಮಾಡುವೆಯಾ ?

ಮಾಯಾಶಶಿ:—ಅದಕ್ಕೆ ಸಂಶಯವೇನು ? ನನ್ನ ಮದುವೆಯಾದ ಮೇಲೆ ಈ ಲಕ್ಷಣನು ಬದುಕಿರುವ ಭಾಗ್ಯ ಪಡೆದರೆ ನಿನ್ನ ಬಯಕೆ ನಡೆಸುವುದು ದೊಡ್ಡದೆ ? ಮೊದಲು ಅದೇ ಮಾಡುವೆನೆಂದು ನಂಬು.

ಮೊದಲನೆ:—ಅಖಂಡೈಶ್ವರ್ಯಸಂಪನ್ನನಾದ ಕುರುಪತಿಯ ಸೊಸೆಯಾಗಿರಲೊಲ್ಲದೆ ಏಕೆ ಕುಂದುವೆ ? ಹುಚ್ಚಮ್ಮಾ ! ಮನೆಮಠಗಳಿಲ್ಲದೆ ಕಾಡುಕಾಡೂ ಅಲೆಯುವ ಅರ್ಜುನನ ಮಗನೇ ಶ್ರೇಷ್ಠನೇನು ?

ಎಂದು ಮಾತನಾಡಿಕೊಳ್ಳುತ್ತಿರುವಾಗ್ಗೆ " ಲಗ್ನವು ಅತಿಕ್ರಮಿಸುವುದು. ಬೇಗ ಬೇಗ ಏಳಿರಿ. ಮದವಣಿಗಿತಿಯನ್ನು ಬೇಗ ಕರಿಸಿರಿ " ಎಂದು ಪುರೋಹಿತರು ಅವಸರಗೊಳಿಸಿದರು. ಆಗ ಮಾಯಾ ಶಶಿರೇಖೆಯನ್ನು ಕರೆದುತಂದು ಹಸೆಯ ಮೇಲೆ ಕುಳ್ಳಿರಿಸಲು ಅವಳು ಹುಚ್ಚುಹುಚ್ಚಾಗಿ ಚೇಷ್ಟೆ ಮಾಡುತ್ತಾ, ಮನಸ್ಸಿಗೆ ಬಂದಂತೆ ಬದರುತ್ತಾ, ಜನ

ರನ್ನು ಬೈದು, ಮಂಗಳವಸ್ತುಗಳನ್ನು ಚೆಲ್ಲಿ ಒಗೆದು ವಿಕಾರವಾಗಿ ವರ್ತಿಸುತ್ತಿದ್ದಳು. ಅದನ್ನು ನೋಡಿ ಬಂಧುಜನರೆಲ್ಲಾ ಬೆರಗಾಗಿ "ಇದೇನು! ರಾತ್ರಿ ಸ್ವಸ್ಥವಾಗಿದ್ದ ಬಾಲೆಗೆ ಈಗ ಹುಚ್ಚು ಹಿಡಿಯಿತೆ? ಮುಂದೇನು ಗತಿ? ಏನೋ ಲಗ್ನಕಾರ್ಯ ಆಗಮಾಡಿಸಿಬಿಡಿರಿ" ಎಂದು ಅವಸರವಸರದಿಂದ ವಿವಾಹ ವಿಧಿಯನ್ನು ನೆರವೇರಿಸಬೇಕೆಂದು ಆತುರಗೊಂಡರು. ಕೌರವರೂ ಕರ್ಣಾದಿ ವೀರರೂ ಹುಡುಗಿಯ ಹುಚ್ಚಿಗೆ ಕಾರಣ ತಿಳಿಯದೆ ಬಗೆಬಗೆಯಾಗಿ ಯೋಚಿಸುತ್ತಿದ್ದರು. ಶ್ರೀ ಕೃಷ್ಣನು ಹೀಗಾಗುವುದೆಂದು ತಿಳಿದು ತಾನು ಯಾವ ಸುದ್ದಿಗೂ ಹೋಗದೆ ಏನೂ ತಿಳಿಯದವನಂತೆ ಇದ್ದನು. ಬಲರಾಮಾದಿಗಳು ವಿವಾಹ ಮಂಟಪದಲ್ಲಿ ಕುಳಿತು ಕನ್ಯೆಯ ಚೇಷ್ಟೆಗಳನ್ನು ನೋಡಿ ಹೆದರಿ ವೈದ್ಯರನ್ನೂ ಮಂತ್ರಜ್ಞರನ್ನೂ ಕರೆಯಿಸಿ ಚಿಕಿತ್ಸೆ ಮಾಡಿಸಿದರು. "ಅಷ್ಟರಲ್ಲಿ ಆ ಮಾಯೆಯ ಹುಡುಗಿಯು ವರನ ಕಾಲುಬೆರಳನ್ನು ತುಳಿದುಬಿಟ್ಟಳು. ಅವನು ಬೆಬ್ಬರಬಿದ್ದು, ಹಲ್ಲುಗಿರಿಯುತ್ತಾ "ಓಹೋ ಸತ್ತೆನು ಸತ್ತೆನು! ಇವಳ ಕಾಲು ಸೋಕಿದಾಗಲಿಂದ ನನಗೆ ಮರಣಕಂಪನವುಂಟಾಗಿದೆ. ಮದುವೆಯು ಸಂತೋಷ ಹಾಗಿರಲಿ. ಪ್ರಾಣಗಳು ದಕ್ಕಿದರೆ ಸಾಕು" ಎಂದು ಕೂಗಿಕೊಂಡನು. ಆಗ ದುರ್ಯೋಧನನು "ಮಗುವೇ! ಏತಕ್ಕೆ ಹೆದರುವೆ! ಈ ಬಾಲೆಗೆ ಸ್ವಲ್ಪ ಪಿತ್ತವಿಕಾರದಿಂದ ಬುದ್ಧಿಭ್ರಮಣವಾಗಿದೆ. ಸ್ವಲ್ಪ ಸೈರಿಸಿಕೋ" ಎಂದು ಸಮಾಧಾನಪಡಿಸುತ್ತಿದ್ದನು.

ಅಷ್ಟರಲ್ಲಿ ಘಟೋತ್ಕಚನ ಮಾಯಾಬಲದಿಂದ ವಿವಾಹಮಂಟಪದ ತುಂಬ ಚೇಳುಗಳೂ ಮಂಡರಗಪ್ಪೆಗಳೂ ಹಾವುಗಳೂ ತುಂಬಿ ನೆರೆದಿದ್ದ ಜನರನ್ನು ಬಾಧಿಸತೊಡಗಿದುವು. ಕೆಲವು ಭೂತಗಳು ಜನರಿಗೆ ಕಾಣಿಸಿಕೊಂಡು ಹೆದರಿಸುತ್ತಿದ್ದುವು. ಇನ್ನೂ ಕೆಲವು ಕಡೆಗಳಲ್ಲಿ ಕೊಳ್ಳಿದೆವ್ವಗಳು ಕಾಣಿಸಿಕೊಂಡು ಭೀತಿಯನ್ನುಂಟುಮಾಡಿದುವು. ಹೈಡಿಂಬನ ಮಾಯೆಯು ಅಷ್ಟಕ್ಕೇನೇ ಮುಗಿಯಲಿಲ್ಲ. ಬಲರಾಮನ ಕೋಶಾಧ್ಯಕ್ಷನಂತೆ ಮಾಯಾವೇಷ ಧರಿಸಿ, ಚಿತ್ರವಿಚಿತ್ರಗಳಾದ ಮಾಯಾವಸ್ತ್ರಗಳನ್ನು ನಿರ್ಮಿಸಿ, ಅವುಗಳನ್ನು ಕೌರವರಿಗೂ ಅವರ ಸಂಗಡ ಬಂದಿದ್ದ ಬಂಧುಬಳಗಗಳಿಗೂ ಉಡುಗೊರೆ ಕೊಟ್ಟು, ಬಲವಂತದಿಂದ ಅವರಿಗೆ ತೊಡಿಸಿ,

ಅವರು ಧರಿಸಿದ್ದ ಹಳೆಯ ಬಟ್ಟೆಗಳನ್ನೆಲ್ಲಾ ಕೂಡಿಸಿ ಇತರರರಿಯದಂತೆ ಸು ಟ್ಟುಬಿಟ್ಟನು. ಸ್ವಲ್ಪ ಹೊತ್ತಿನ ಮೇಲೆ ತನ್ನ ಮಾಯಾವಸ್ತ್ರಗಳನ್ನೆಲ್ಲಾ ತೆಗೆದುಬಿಟ್ಟುದರಿಂದ ಎಲ್ಲರೂ ದಿಗಂಬರರಾಗಿ ನಾಚಿಕೆಯಿಂದ ಮಾನಸಂರ ಕ್ಷಣೆ ಮಾಡಿಕೊಳ್ಳುವುದೇ ಕಷ್ಟವಾಯಿತು. ಬಲರಾಮನು ಇದನ್ನು ತಿಳಿ ದು ಅವರಿಗೆ ಬೇರೆ ವಸ್ತ್ರಗಳನ್ನು ತರಿಸಿಕೊಟ್ಟನು. ಈ ಮಾಯಾಪ್ರ ಯೋಗವು ಶ್ರೀ ಕೃಷ್ಣನೊಬ್ಬನಿಗೆ ಹೊರತು ದ್ವಾರಕೆಯಲ್ಲಿ ಮತ್ತಾ ರಿಗೂ ತಿಳಿಯದು.

ಮಂಟಪದಲ್ಲಿ ಕುಳಿತಿದ್ದ ಜನರೆಲ್ಲರೂ ಗಾಬರಿಯಾದರು ಒಂದು ಕಡೆ ದುಷ್ಟ ಕ್ರಿಮಿಕೀಟಗಳ ಹಾವಳಿ, ಮತ್ತೊಂದು ಕಡೆ ಭೂತಗಳ ಭಯ, ಒಂದು ಕಡೆ ಮದುವೇ ಹೆಣ್ಣಿನ ಹುಚ್ಚುತನ, ಮದವಣಿಗನ ವೈ ರಾಗ್ಯವೊಂದು ಕಡೆ. ಮುಂದೆ ಏನು ಮಾಡಬೇಕೆಂಬುದೇ ನಿರ್ಧರವಾಗ ಲಿಲ್ಲ ಆಗ ಬಲಭದ್ರನು ಖಿನ್ನಮನಸ್ಕನಾಗಿ "ಅಯ್ಯೋ ದೈವವೇ! ಎಂತ ಹ ಕಷ್ಟವನ್ನು ತಂದಿಟ್ಟೆ! ಈ ವಿಪತ್ಸಮುದ್ರದಿಂದ ಉತ್ತೀರ್ಣನಾಗುವ ಮಾರ್ಗವು ಯಾವುದು? (ತಲೆ ತಗ್ಗಿಸಿಕೊಂಡು) ಈ ಮಾಯೆಯೆಲ್ಲಾ ನಮ್ಮ ಶ್ರೀ ಕೃಷ್ಣನಿಗೆ ತಿಳಿಯದೆ ಇರದು. ಅವನು ಈ ವಿವಾಹ ಕಾಲ ದಲ್ಲಿ ಯಾವ ಸಂಬಂಧವನ್ನೂ ಹತ್ತಿಸಿಕೊಳ್ಳದೆ ತಟಸ್ಥನಾಗಿರುವುದೇ ಅದ ಕ್ಕೆ ಸಾಕ್ಷ್ಯವು (ಎಂದು ಪಕ್ಕದಲ್ಲಿ ನೋಡಿ) ಸೇವಕಾ! ಕೃಷ್ಣನನ್ನು ಕರೆದುಕೊಂಡು ಬಾರೆಂದು ಹೇಳಿಕಳುಹಿ ಕರೆಸಿಕೊಂಡು, ಆತುರದಿಂದ ಅಪ್ಪಿಕೊಂಡು ರಹಸ್ಯವಾಗಿ ಇಂತೆಂದನು

' ಕೃಷ್ಣಾ! ಏಕೆ ಹೀಗೆ ಉದಾಸೀನ ಮಾಡಿದೆ! ನನ್ನನ್ನು ಒಂಟಿಯಾ ಗಿ ಬಿಟ್ಟು ನೀನು ತಟಸ್ಥನಾಗಬಹುದೇ? ನನಗೆ ದಿಕ್ಕಾರು? ಶತ್ರುಭಯ ದಿಂದ ಪ್ರಾಣಗಳು ದಕ್ಕುವುವೋ ಇಲ್ಲವೋ ಎಂಬ ಹೆದರಿಕೆಯಿಂದ ನಾ ನು ಸಂಕಟಪಡುತ್ತಿದ್ದರೂ ನೀನು ಬಂದು ವಿಚಾರಿಸಿಕೊಳ್ಳಬೇಡವೆ? ವಿವಾಹ ಮಂಟಪದಲ್ಲಿ ನಡೆಯುತ್ತಿರುವ ವಿಚಿತ್ರಗಳನ್ನು ನೋಡು. ನಮ್ಮ ಶಶಿರೇಖೆಗೆ ಉನ್ಮಾದವಿಕಾರವಾದ ಚೇಷ್ಟೆಗಳೆಲ್ಲಾ ಕಾಣುತ್ತಿವೆ. ಅವ ಳನ್ನು ಕಂಡರೆ ವರನು ಹೆಬ್ಬುಲಿಯನ್ನು ಕಂಡ ಮೃಗದಂತೆ ನಡುಗಿ ಓಡು ತ್ತಿದ್ದಾನೆ. ಸಿಂಹವ್ಯಾಘ್ರಾದಿ ಕ್ರೂರಜಂತುಗಳು ಬಂದು ಕಡೆಯೂ

ಹಾವು, ಚೇಳು, ಮುಂತಾದ ಪ್ರಾಣಿಗಳೊಂದು ಕಡೆಯೂ, ದೆವ್ವಗಳೊಂದು ಕಡೆಯೂ ಕಾಣಿಸಿಕೊಂಡು ಬೀಗರ ಕಡೆಯುವರನ್ನು ಹೆದರಿಸುತ್ತಲಿವೆ. ಹೋಮಕುಂಡದಲ್ಲಿ ರಕ್ತವೂ ಮಲಮೂತ್ರಗಳೂ ಆಕಾಶದಿಂದ ಬಿದ್ದು ಅಶುದ್ಧಿಗೊಳಿಸುತ್ತಿವೆ. ಲಗ್ನಸಾಧನೆಯಾಗುವ ಭರವಸೆ ನನಗೆ ತೋರ ಲಿಲ್ಲ. ಇದೇನು ವಿಪರೀತ! ಈ ಉತ್ಪಾತಗಳಿಗೆ ಕಾರಣವೇನು ? ಈ ಮಾಯಾಪ್ರಯೋಗ ಮಾಡಿರುವವನಾವನು ? ಇವೆಲ್ಲವನ್ನೂ ತಿಳಿಸು. ಸಂಕೋಚಪಡಬೇಡ.

ಶ್ರೀ ಕೃಷ್ಣ:—(ಏನೂ ತಿಳಿಯದವನಂತೆ ಮೌನವಾಗಿ ಕುಳಿತಿರುವನು)

ಬಲ:—ಎಲಾ ಕೃಷ್ಣಯ್ಯಾ ? ನಿನಗೆ ಸ್ವಲ್ಪವೂ ಕರುಣವಿಲ್ಲವೆ ? ನಾವು ಇಷ್ಟು ಬಗೆಯ ಕಷ್ಟಗಳಿಗೆ ಸಿಕ್ಕಿ ದುಃಖಪಡುತ್ತಿರುವಾಗ ನೀನು ಸ್ವಲ್ಪವೂ ಚಿಂತಿಸದೆಯೂ, ನಮಗೆ ಸಮಾಧಾನದ ಮಾತುಗಳನ್ನಾ ಡದೆಯೂ ಇರುವುದು ಧರ್ಮವೇ ? ಲೋಕದ ಜನರು ಮೆಚ್ಚು ವರೆ ?

ಕೃಷ್ಣ:—(ಸ್ವಲ್ಪ ಕೋಪವೂ ಮುಸಿಮುಸಿ ನಗುವೂ ಕೃಷ್ಣವರ್ಣದ ಮುಖಕ್ಕೆ ಹೊಸ ಬಗೆಯ ಕಾಂತಿಯನ್ನು ಬೀರುತ್ತಿರಲು ಓರೆ ನೋಟದಿಂದ) ಅಣ್ಣಯ್ಯಾ! ಎಷ್ಟಾದರೂ ನೀನು ಜ್ಯೇಷ್ಠನು. ನಿನಗೆ ತಿಳಿದಷ್ಟು ಧರ್ಮಗಳು ನನಗೆ ತಿಳಿಯುವುವೆ ? ಮನೆಯಲ್ಲಿ ಬೆಳೆಯು ತ್ತಿರುವ ತಂಗಿಯ ಮಗನು ಸುಂದರನಾಗಿಯೂ, ಪ್ರತಾಪಶೀಲನಾ ಗಿಯೂ, ಅನುರೂಪ ವರನಾಗಿಯೂ ಇರುವಾಗ ಅವನನ್ನು ಬಿಟ್ಟು ಅನ್ಯನಿಗೆ ಕನ್ಯೆಯನ್ನು ಕೊಡುವುದು ಯಾವ ಧರ್ಮವೋ ತಿಳಿಯ ದು. ಜನರು ಇಂಥ ಕಾರ್ಯವನ್ನು ಮೆಚ್ಚಬಹುದೇನೋ ಕಾಣೆನು.

ಬಲ:—(ತಲೆತಗ್ಗಿಸಿಕೊಂಡು) ಗಾಯದ ಮೇಲೆ ಉಪ್ಪು ಸುರಿದಂತೆ ನನ್ನ ಅವಸ್ಥೆಯಲ್ಲಿ ಮತ್ತಷ್ಟು ನೋಯಿಸುವ ಮಾತನಾಡುವುದಕ್ಕೆ ನಿನ್ನ ನ್ನಿಲ್ಲಿಗೆ ಕರಿಸಲಿಲ್ಲ. ಈ ವಿಷಯವೇನಾದರೂ ನಿನಗೆ ತಿಳಿದಿದ್ದರೆ ಹೇಳಬಹುದು. ತಿಳಿಯದಿದ್ದರೆ ಬಿಡಬಹುದು ಸುಮ್ಮನೆ ತಿವಿತಿವಿ ದು ಏಕೆ ನೋಯಿಸುವೆ ?

ಕೃಷ್ಣ:—ಸರಿಯೇ, ನನಗೆ ತಿಳಿದುದನ್ನು ಹೇಳುವೆನು ಕೇಳು. ನೀನಾಡಿದ ಬಿರುನುಡಿಗಳನ್ನು ಕೇಳಿ ಆ ರಾತ್ರಿಯೇ ಅಭಿಮನ್ಯು ಕುಮಾರನು ತಾಯಿಯನ್ನು ಕರೆದುಕೊಂಡು ತನ್ನ ತಂದೆಗಳಿರುವ ಸ್ಥಳಕ್ಕೆ ಹೋಗುತ್ತಿರುವಾಗ ಮಾರ್ಗದಲ್ಲಿ ಭೀಮಪುತ್ರನಾದ ಘಟೋತ್ಕಚನ ವನವು ಸಿಕ್ಕಿತು. ಅಲ್ಲಿ ಅವರಿಬ್ಬರಿಗೂ ಘೋರಯುದ್ಧ ನಡೆಯಿತು. ಆ ವೇಳೆಗೆ ಸರಿಯಾಗಿ ವ್ಯಾಸಮಹರ್ಷಿಗಳು ಅಲ್ಲಿಗೆ ಬಂದು ಅವರ ಬಾಂಧವ್ಯವನ್ನು ತಿಳುಹಿ ಪರಸ್ಪರ ಸಂಧಿಮಾಡಿ ಹೋದರು.

ಬಲ:—(ತನ್ನಲ್ಲಿ) ಅಯ್ಯೊ! ಈ ಪಾಪಿ ಸನ್ಯಾಸಿಯು ಅಲ್ಲಿಗೇಕೆ ಬಂದನು? ಇವನು ಬಾರದಿದ್ದರೆ ಚೆನ್ನಾಗಿತ್ತು. ವಿಧಿವಿಲಾಸ. (ಪ್ರಕಾಶವಾಗಿ) ಉಂ, ಆಗಲಿ. ಅ ಬಳಿಕ ?

ಶ್ರೀಕೃಷ್ಣ:—ಬಳಿಕ ಅವರಿಬ್ಬರೂ ಸ್ನೇಹಮಾಡಿಕೊಂಡರು. ಇಲ್ಲಿ ನಡೆದ ವಿಷಯಗಳನ್ನೆಲ್ಲಾ ಘಟೋತ್ಕಚನು ಕೇಳಿ, ಬಹು ಕೋಪಗೊಂಡು ಆಗಲೆ ಇಲ್ಲಿಗೆ ಬಂದು ಮಾಯಾ ಶಶಿರೇಖೆಯನ್ನು ಕಲ್ಪಿಸಿ ಇಲ್ಲಿಟ್ಟು ನಮ್ಮ ಹುಡುಗಿಯನ್ನು ಕೊಂಡೊಯ್ದು ತನ್ನ ಆಶ್ರಮದಲ್ಲಿ ಸೇರಿಸಿಕೊಂಡನು. ಈ ಚೇಷ್ಟೆಗಳೆಲ್ಲವೂ ಅವನ ಮಾಯಾ ಕಲ್ಪಿತಗಳೇ ಎಂದು ತಿಳಿ.

ಬಲ:—ಕೃಷ್ಣಾ! ನಾನು ಮಗಳನ್ನು ಕೊಡುವುದಿಲ್ಲವೆಂದೆನೇ ಹೊರತು ಅರ್ಧರಾತ್ರಿ ವೇಳೆ ಅಡವಿಗೆ ಹೋಗಿರೆಂದು ಅಟ್ಟಿದೆನೆ? ಸುಮ್ಮನೆ ಖಣನಿಷ್ಠುರ ಕಟ್ಟಿಕೊಂಡು ಮಗನಿಗೆ ಇದ್ದದ್ದು ಕೆಲವು, ಇಲ್ಲದ್ದು ಕೆಲವು ಸುದ್ದಿಗಳನ್ನು ಹೇಳಿ ನಮ್ಮ ಸುಭದ್ರೆಯೇ ಇಷ್ಟರ ಕಷ್ಟಕ್ಕೆ ಗುರಿಮಾಡಿದಳು ಆಗಲಿ, ಆ ಭೀಮನ ಮಗನು ಬಲು ಶೂರನೆಂದು ಅವನನ್ನಿಲ್ಲಿಗೆ ಕಳುಹಿದರೇನೋ? ನನ್ನೆದುರಿಗೆ ಬಂದರೆ ಅವನ ಶೌರ್ಯವನ್ನು ಕಾಣಿಸುತ್ತಿದ್ದೆನು. ಈಗ ತಾನೇ ಮಿಂಚಿ ಹೋದುದೇನು? ಅಲ್ಲಿಗೆ ಹೋಗಿ ಆ ಮಾಯಾವಿ ರಕ್ಕಸನನ್ನು ಕೊಂದು ಹುಡುಗಿಯನ್ನು ತಂದು ಇನ್ನೇ ಲಕ್ಷಣನಿಗೇನೇ ಧಾರೆಯೆರೆ

ಯುವೆನು. ಇಗೋ ಹೊರಟೆನು (ಎಂದು ನೇಗಿಲನ್ನೂ ಒನಕೆಯನ್ನೂ ಕೈಯಲ್ಲಿ ಹಿಡಿದುಕೊಂಡು ನಡೆದನು.)

ಆಗ ಅಂತರಿಕ್ಷದಲ್ಲಿ "ಮಾವೈಯಾ! ನಿನ್ನ ಮಗಳು ಶಶಿರೇಖೆಯನ್ನು ವಿಜಯ ಪುತ್ರನಾದ ಅಭಿಮನ್ಯುವಿಗೆ ಕೊಟ್ಟು ಲಗ್ನಮಾಡಿಸಬೇಕೆಂದು ಇಂದ್ರಾದಿ ದೇವತೆಗಳು ನಿರ್ಣಯಿಸಿರುವರು. ನೀನೇಕೆ ಬಿಂಕವನ್ನು ಕೆಡಿಸಿಕೊಳ್ಳುವೆ? ಗಂಭೀರವಾಗಿರು" ಎಂಬ ಶಬ್ದವು ಕೇಳಬಂತು. ಆಗ ಶ್ರೀ ಕೃಷ್ಣನು ಅಡ್ಡವಾಗಿ ನಿಂದು:—

ಅಣ್ಣಾ! ನಿನಗೂ ಹುಚ್ಚು ಹಿಡಿಯಿತೆ! ಅಯ್ಯೋ! ತಂಗಿಯು ಅರ್ಧರಾತ್ರಿಯು ಹೊತ್ತಿನಲ್ಲಿ ಮಗನನ್ನು ಜತೆಮಾಡಿಕೊಂಡು ಕಾಡುಪಾಲಾಗಿ ಹೋದುದಕ್ಕೆ ನೀನು ಸ್ವಲ್ಪವಾದರೂ ಚಿಂತಿಸಲಿಲ್ಲ. ಪಾಪ! ಅವಳೇನು ತಪ್ಪು ಮಾಡಿದಳು? ಇದು ನಾಚಿಕೆಗೇಡಲ್ಲವೆ? ಮತ್ತು ನೀನೀಗ ಶಶಿರೇಖೆಯನ್ನು ತರಲಿಕ್ಕೆ ಹೋದರೆ ಸುಭದ್ರೆಯ ಮಗನು ಹಸಿದ ಹೆಬ್ಬುಲಿಗೆ ಆಡಿನ ಮರಿ ಸಿಕ್ಕಿದಂತೆ ನಿನ್ನನ್ನು ಹೀರಿ ಹಿಪ್ಪೆಮಾಡಿಬಿಡುವನು. ಅವನು ಒಬ್ಬನೇ ಎಂದು ತಿಳಿಯಬೇಡ. ನಾರದನ ಮೂಲಕ ಈ ವಿಷಯವು ಪಂಚಪಾಂಡವರಿಗೆಲ್ಲಾ ತಿಳಿದು, ಅವರು ಬಂದು ನಿನ್ನ ಮೇಲೆ ಬಿದ್ದರೆ ಪರಿಣಾಮವೇನಾಗುವುದು. ಬಲ್ಲೆಯಾ? ಕಾಡಿನಲ್ಲಿ ಭೀಮಾರ್ಜುನರು ತಕ್ಕ ಯುದ್ಧಗಳು ಸಿಕ್ಕದ್ದರಿಂದ ತಮ್ಮ ತೋಳು ತೀಟೆ ಹೇಗೆ ಅಡಗುವುದೆಂದು ನಿರೀಕ್ಷಿಸುತ್ತಿರುವಾಗ ನೀನಾಗಿ ಹೋಗಿ ಏಕೆ ಸಿಕ್ಕಿಕೊಳ್ಳುವೆ!

ಬಲ:—(ತನ್ನಲ್ಲಿ) ಅಯ್ಯೋ! ನನ್ನದೇ ತಪ್ಪು. ನಾನು ಅಭಿಮನ್ಯುವನ್ನೂ ಪಾಂಡವರನ್ನೂ ದೂರಿದ್ದೂ ನಿಜವೆ. ಸುಯೋಧನನನ್ನು ಹೊಗಳಿದ್ದೂ ನಿಜವೇ. ಮಾಡತಕ್ಕುದೇನು? ಕೋಪಕ್ಕೆ ವೇಳೆಯಲ್ಲ. ಸಾಮೋಪಾಯದಿಂದಲೇ ಕಾರ್ಯಸಾಧನೆಯಾಗಬೇಕಾಗಿದೆ. (ಪ್ರಕಾಶ) ಕೃಷ್ಣಾ! ನಿನ್ನ ಮಾತು ಸಹಜ. ಆದುದಾಯಿತು. ನನ್ನ ಮಗನನ್ನು ತಂಗಿಯ ಮಗನಿಗೇ ಕೊಡುವೆನು. ನಿನ್ನ ಇಷ್ಟಬಂದಂತೆ ಮಾಡಿ, ಈ ಇಕ್ಕಟ್ಟನಿಂದ ನನ್ನನ್ನು ತಪ್ಪಿಸಿ ನೆಮ್ಮದಿಗೊಳಿಸು.

ಎಂದು ಹೇಳಿ ಹಿಡಿಂಬೀಪುತ್ರನಾದ ಘಟೋತ್ಕಚನ ಸಾಹಸಕ್ಕೆ ಮೆಚ್ಚಿ ಬಹಳವಾಗಿ ಹೊಗಳಿದನು ಅಷ್ಟರಲ್ಲಿ ಮಾಯಾಚತುರನಾದ ಆ ಹೈಡಿಂಬಿಯು ಕಾಣಿಸಿಕೊಂಡು ಬಲರಾಮ ಕೃಷ್ಣರಿಗೆ ವಂದಿಸಿ, ನಿಲ್ಲಲು "ಭಲೇ ಹುಡುಗಾ! ನೀನು ಬಲು ಗಟ್ಟಿಗನು. ಶೂರನಾದ ಆ ಭೀಮಸೇನನಿಗೆ ತಕ್ಕ ಮಗನೇ ಸರಿ. ನಿನ್ನೊಂದಿಗೆ ಸ್ನೇಹಮಾಡಿಕೊಳ್ಳಲಪೇಕ್ಷಿಸುತ್ತೇನೆ" ಎಂದನು ಅದಕ್ಕವನು "ಮಾವಾ! ನಿನ್ನ ವಾಕ್ಯಗಳು ಹೃದಯಂಗಮವಾಗಿವೆ. ನನ್ನ ಸ್ನೇಹ ಬೇಕಾದರೆ ಗೌರವವಂತರಾದ ಕೌರವರನ್ನು ಹೊರಡಿಸಿಬಿಡು" ಎಂದನು. ಬಲರಾಮನು ಹಿಂದು ಮುಂದು ನೋಡುತ್ತಾ ಏನು ಮಾಡಬೇಕೆಂದು ತೋರದೆ ಯೋಚಿಸುತ್ತಿರಲು ಸಾತ್ಯಕಿಯು "ಅಣ್ಣಾ! ಏಕೆ ಚಿಂತಿಸುತ್ತೀಯೆ? ಆ ಕೆಲಸ ನಾನು ಪೂರಯಿಸುತ್ತೇನೆ. ನೀನು ಸುಮ್ಮನೆ ನೋಡುತ್ತಿರು" ಎಂದು ಹೇಳಿ "ಎಲಾ ದುರ್ಯೋಧನಾ, ಎಲಾ ಶಕುನೀ, ದುಶ್ಶಾಸನಾ, ಸೈಂಧವಾ, ಕರ್ಣಾ, ಅಶ್ವತ್ಥಾಮಾದಿಗಳಿರಾ, ಪೂರ್ವ ಸುವಾಸಿನಿಯರ ಹಿಂಡಿನಂತೆ ಗರ್ವಹೀನರಾಗಿ ಗೋಳಿಡುತ್ತಾ ನಮ್ಮೂರಿನ ಮನೆಗಳ ಮರೆಗಳಲ್ಲಿ ಏಕೆ ಅಲೆಯುವಿರಿ? ನಿಮಗೆ ಆ ಹೆಣ್ಣು ದಕ್ಕುವುದೆಂಬ ಆಶೆಯನ್ನು ಬಿಟ್ಟುಬಿಡಿರಿ. ನಿಮಗೆ ಆಯುಸ್ಸು ಉಳಿದಿರುವುದರಿಂದ ಜೀವಿಸಿಕೊಂಡು ನಿಮ್ಮ ಊರಿಗೆ ಹೋಗಿ ಕೆಲ ಕಾಲ ಸುಖವಾಗಿರಿ. ತಾನು ಕೆಡುವ ಕೋಡಗ ವನವೆಲ್ಲಾ ಕೆಡಿಸಿತೆಂಬ ಗಾದೆಯಂತೆ ನೀವು ಹೊಕ್ಕ ಮನೆ ಹಾಳೆಂಬುದು ನಿಮಗೆ ತಿಳಿಯದೆ ಹೋಯಿತೆ? ಮಾನದಿಂದ ಹೊರಡಿರಿ. ಜೀವದಾಸೆ ಇಲ್ಲದಿದ್ದರೆ ಎದುರಿಗೆ ನಿಂತು ಕಾದಬಹುದು" ಎಂದು ಕೂಗಿ ಹೇಳಿದನು. ಆ ಕೌರವವೀರರು ಶ್ರೀ ಕೃಷ್ಣನ ತಂತ್ರಕ್ಕೂ, ಘಟೋತ್ಕಚನ ಮಾಯಾಸಾಮರ್ಥ್ಯಕ್ಕೂ, ಸಾತ್ಯಕಿಯ ಪುರುಷವಾಕ್ಯಗಳಿಗೂ ಹೆದರಿ, ಹೆಣ್ಣಿನ ಆಸೆಯನ್ನು ಬಿಟ್ಟು ಸೊಟ್ಟಮೋರೆ ಹಾಕಿಕೊಂಡು ನೆಟ್ಟಗೆ ಊರುದಾರಿ ಹಿಡಿದರು. ಬಲರಾಮನು ಈ ಸುದ್ದಿ ಕೇಳಿ, ಘಟೋತ್ಕಚನನ್ನು ನೋಡಿ "ಮಗುವೇ! ಶಶಿರೇಖೆಯನ್ನೂ ಅಭಿಮನ್ಯುವನ್ನೂ ಬೇಗ ಇಲ್ಲಿಗೆ ಬರಮಾಡು. ನಿಶ್ಚಿತ ಮುಹೂರ್ತದಲ್ಲಿಯೇ ಲಗ್ನವನ್ನು ನೆರವೇರಿಸೋಣ" ಎಂದನು. "ಅದಕ್ಕಾ ಭೀಮಪುತ್ರನು ಮಾವೈಯಾ! ನೀವು

ನನ್ನ ಆಶ್ರಮವನ್ನು ನೋಡಲಿಕ್ಕೆ ಬೇರೆ ಸಮಯವೆಲ್ಲಿ ಸಿಕ್ಕುವುದು ? ದಯಮಾಡಿ ಬಂದ ಸುಭದ್ರೆಯನ್ನು ಸಂತೈಸಿ ವಧೂವರರನ್ನು ಕರೆದು ಕೊಂಡು ಬರಬೇಕೆಂದು ಪ್ರಾರ್ಥಿಸುವೆನು '' ಎಂದು ರಾಮಕೃಷ್ಣರನ್ನು ತನ್ನ ಆಶ್ರಯಕ್ಕೆ ಕರೆದುಕೊಂಡು ಹೋದನು. ಅಷ್ಟು ಹೊತ್ತಿಗೆ ದೇವೇಂದ್ರನೂ, ಗುರುವಾದ ಬೃಹಸ್ಪತಿಯೂ, ನಾರದಾದಿ ಋಷಿಗಳೂ ಅಲ್ಲಿಗೆ ಬಂದು ಸೇರಿದರು. ಬಲರಾಮನು ತನ್ನ ಮಗಳನ್ನೂ ಸೋದರಳಿಯನನ್ನೂ ನೋಡಿ ಸಂತೋಷದಿಂದ ಅಪ್ಪಿಕೊಂಡು ಸುಭದ್ರೆಯ ಮನಸ್ಸು ನೋಯಿಸಿದುದಕ್ಕಾಗಿ ಸಾಂತ್ವವಚನಗಳನ್ನು ಹೇಳಿ, ಎಲ್ಲರೂ ಲಗ್ನಕ್ಕೆ ದಯಮಾಡಿಸಬೇಕೆಂದು ಪ್ರಾರ್ಥಿಸಿದನು. ವತ್ತು ಪಾಂಡವರು ಸಂಕೇತದಂತೆ ವನವಾಸದಲ್ಲಿರುವುದರಿಂದ ಪುರಪ್ರವೇಶ ಮಾಡಲಾರರು. ನೀವೇ ಬೀಗರಾಗಿ ಯಾಜಮಾನ್ಯವನ್ನು ವಹಿಸಿ ವಿವಾಹ ಸಮಾರಂಭವನ್ನು ನೆರವೇರಿಸಬೇಕೆಂದು ಇಂದ್ರನನ್ನು ಬೇಡಿಕೊಂಡನು. ಸುರಪತಿಯು ಅವನ ಇಷ್ಟದಂತೆ ಆಗಲೆಂದು ಒಪ್ಪಿ, ಕೂಡಲೇ ಮಾತಲಿಗೆ ಹೇಳಿ ರಥವನ್ನು ಸಿದ್ಧಪಡಿಸಿ, ಸರ್ವರನ್ನೂ ಕುಳ್ಳಿರಿಸಿಕೊಂಡು ದ್ವಾರಕಾಪುರಕ್ಕೆ ಬಂದು ಸೇರಿದನು

ಶ್ರೀ ಕೃಷ್ಣ ಪರಮಾತ್ಮನ ಅನುಗ್ರಹದಿಂದ ಸುಮುಹೂರ್ತದಲ್ಲಿ ಬಲರಾಮನ ಮಗಳು ಶಶಿರೇಖೆಗೂ, ಸುಭದ್ರೆಯ ಮಗನಾದ ಅಭಿಮನ್ಯುವಿಗೂ ವಿವಾಹಲಗ್ನವು ಸಾಂಗವಾಗಿ ನೆರವೇರಿತು. ಸಕಲರೂ ಸಂತೋಷಪಟ್ಟರು ದೇವತೆಗಳು ಪುಷ್ಪವೃಷ್ಟಿಯನ್ನು ವಧೂವರರ ಮೇಲೆ ಸುರಿಸಿ ದೇವದುಂದುಭಿಯನ್ನು ಮೊಳಗಿಸಿದರು.

ಈ ಶುಭ ಸಮಾಚಾರವು ನಾರದ ಮಹರ್ಷಿಯ ಮೂಲಕ ವನದಲ್ಲಿರುವ ಪಾಂಡವರಿಗೆ ತಿಳಿಯಿತು. ಯುಧಿಷ್ಠಿರಾದಿಗಳು ನಮ್ಮ ಕಷ್ಟ ಸುಖಗಳಿಗೆ ಬಾಧ್ಯನಾಗಿ ಭಾರವಾಹಕನಾದ ಶ್ರೀ ಕೃಷ್ಣನಿರುವಾಗ ನಮಗೆ ಯಾವ ಚಿಂತೆಯೂ ಇಲ್ಲವೆಂದು ಆ ಪರಮಾತ್ಮನ ಧ್ಯಾನ ಮಾಡುತ್ತಾ ಸುಖದಿಂದಿದ್ದರು.

---

## ಹನ್ನೊಂದನೆಯ ಸಂಧಿ.

ಸೂಚನೆ:—ಕಾಡಿನಲ್ಲಿ ಅಲೆಯುತ್ತಿರುವ ಪಾಂಡವರಿಗೆ ತನ್ನ ಸಿರಿಯ ಹೆಮ್ಮೆಯನ್ನು ತೋರಿಸಿ ಅವಮಾನಗೊಳಿಸಬೇಕೆಂದು ಮೂರ್ಖನಾದ ದುರ್ಯೋಧನನು ಸಕಲ ಪರಿವಾರದೊಡನೆ ಹೋಗಿ, ಅಲ್ಲಿ ಚಿತ್ರರಥನೆಂಬ ಗಂಧರ್ವನೊಡನೆ ಸೆಣಸಿ ಸೋತು ಸೆರೆ ಸಿಕ್ಕಿದನು. ಆಗ ಭಾನುಮತಿಯು ಬಂದು ಯುಧಿಷ್ಠಿರನನ್ನು ಪ್ರಾರ್ಥಿಸಲು ಆತನ ಅನುಜ್ಞೆಯಿಂದ ಅರ್ಜುನನು ಹೋಗಿ ಕಾದಿ ಆ ಕೌರವರನ್ನು ಬಿಡಿಸಿ, ಕಳುಹಿದನು.

ಬಂದಾನೊಂದು ದಿನ ಹಸ್ತಿನಾಪುರದ ಬ್ರಾಹ್ಮಣನೊಬ್ಬನು ಪಾಂಡವರಿದ್ದ ಅರಣ್ಯಕ್ಕೆ ಬಂದು ಯುಧಿಷ್ಠಿರನಿಂದ ಸತ್ಕೃತನಾಗಿ ಆತನ ಆಶ್ರಯದಲ್ಲಿ ಕೆಲವು ದಿನಗಳಿದ್ದು, ತರುವಾಯ ಹಿಂದಿರುಗಿ ರಾಜಧಾನಿಗೆ ಹೋದನು. ಅವನು ಧೃತರಾಷ್ಟ್ರರಾಯನನ್ನು ಕಂಡು ಪಾಂಡವರು ಕಾಡಿನಲ್ಲಿ ತುಂಬ ಕಷ್ಟಪಡುತ್ತಿರುವರೆಂತಲೂ, ರಾಜಭೋಗಗಳನ್ನು ಅನುಭವಿಸುತ್ತಿದ್ದ ಅವರಿಗೆ ದುರ್ದೈವದಿಂದ ಬಹು ತೊಂದರೆಯುಂಟಾಯಿತೆಂತಲೂ ತಿಳಿಸಿದನು. ಅದನ್ನು ಕೇಳಿ "ಆ ರಾಜನು ಅಯ್ಯೋ! ಹತವಿಧಿಯೇ! ಧರ್ಮಾತ್ಮರಾದ ಪಾಂಡವರಿಗೆ ಎಂತಹ ಕಷ್ಟವನ್ನು ತಂದಿಟ್ಟೆ! ಈ ದುರ್ವಾರ್ತೆಯನ್ನು ಕೇಳುತ್ತಿರುವ ನನಗೆ ಸಾವು ಬಾರದಲ್ಲ! ನಮಗೆ ಎಷ್ಟು ಐಶ್ವರ್ಯವಿದ್ದರೇನು? ಈ ನನ್ನ ಮಕ್ಕಳ ದೆಸೆಯಿಂದ ಪಾಂಡುಪುತ್ರರಿಗೆ ಎಂತಹ ವಿಪತ್ತುಗಳು ಸಂಭವಿಸಿತು? ಪಾಪ! ಸುಕುಮಾರಾಂಗಿಯಾದ ಪಾಂಚಾಲಿಯು ಕಾಡಿನಲ್ಲಿ ಎಷ್ಟು ನವೆಯುತ್ತಿರುವಳೋ? ಆ ಮಕ್ಕಳು ನನ್ನನ್ನು ಎಷ್ಟು ಶಪಿಸುತ್ತಿರುವರೋ? ಅವರನ್ನು ಕಷ್ಟಕ್ಕೆ ಸಿಕ್ಕಿಸಿ ನಾವು ಎಷ್ಟು ಸುಖಪಟ್ಟರೆ ಏನು ಫಲ?" ಎಂದು ಚಿಂತಿಸುತ್ತಿದ್ದನು. ಕರ್ಣದುರ್ಯೋಧನಾದಿಗಳು ಪಾಂಡವರ ದುಸ್ಥಿತಿಯನ್ನು ಕೇಳಿ ಸಂಭ್ರಮದಿಂದ ಅರಮನೆಗೆ ಬಂದು ಧೃತರಾಷ್ಟ್ರನನ್ನು ಕಂಡು "ಪ್ರಭುವೇ! ಪಾಂಡವರ ಗತಿಯನ್ನು ಕೇಳಿದೆಯಾ? ತಮಗೆ ಸಮಾನರಿಲ್ಲವೆಂದು ಬೆರೆಯುತ್ತಿದ್ದ ಅವರಿಗೆ ದೇವರು ತಕ್ಕ ಪ್ರತಿಫಲವನ್ನೇ ಕೊಟ್ಟನಲ್ಲವೇ?" ಎಂದು ಸಂತೋಷದಿಂದ ಹೇಳಿದರು. ಮೊದ್ದು

ಲೇ ಅವರ ವಿಯೋಗದಿಂದ ಕೊರಗುತ್ತಿದ್ದ ಆ ಧೃತರಾಷ್ಟ್ರನಿಗೆ ಈ ಮಾತುಗಳು ಶೂಲದಿಂದ ಇರಿದಂತಾದವು. ಆತನು "ಅಯ್ಯೋ! ಏಕೆ ನನ್ನನ್ನು ಉರಿಸುವಿರಿ? ನನ್ನ ಹೊಟ್ಟೆ ಬೆಂದುಹೋಯಿತು. ಸೂರ್ಯನಂತೆ ತೇಜಸ್ವಿಗಳಾದ ಆ ಪ್ರತಾಪಶಾಲಿಗಳು ಕಷ್ಟದಿಂದ ನರಳುತ್ತಿರುವಾಗ ನಮ್ಮ ಐಶ್ವರ್ಯವು ಎಷ್ಟಿದ್ದರೇನು ಫಲ!" ಎಂದು ನಿಟ್ಟುಸಿರುಬಿಟ್ಟನು.

ಆಗ ಶಕುನಿಯು:—ಭಾವಾ! ಏಕೆ ಅಳುತ್ತೀಯೆ! ನಿನ್ನ ಮಕ್ಕಳು ಸುಖದಿಂದಿರುವಾಗ ಹೆರರ ಮಕ್ಕಳ ಕಷ್ಟಕ್ಕಾಗಿ, ನೀನೇಕೆ ಕೊರಗಬೇಕು? ನಮ್ಮ ಕುರುರಾಜನಲ್ಲಿ ಸ್ವಲ್ಪವೂ ಅನ್ಯಾಯವಿಲ್ಲ. ಧರ್ಮದ್ಯೂತವಾಡುವುದರಲ್ಲಿ ದೋಷವೇನು? ಆ ಪಾಂಡವರು ಜೂಜಿನ ವ್ಯಸನಕ್ಕೆ ಸಿಕ್ಕಿ ರಾಜ್ಯವನ್ನೊಡ್ಡಿ ಸೋತುಹೋದರೆ ನಿನ್ನ ಮಕ್ಕಳ ತಪ್ಪೇನು? ಆ ಪಾಂಡವರು ಸತ್ಯಪ್ರತಿಜ್ಞಾಪರಿಪಾಲನೆಗೋಸ್ಕರ, ಅರಣ್ಯಕ್ಕೆ ಹೋಗಿ, ತಮ್ಮ ಅಪರಾಧ ಫಲವನ್ನು ಅನುಭವಿಸುತ್ತಿರುವರು. ಇದಕ್ಕಾಗಿ ನೀನೇಕೆ ಚಿಂತಿಸಬೇಕು? ಅವರು ಎಂದಿಗಾದರೂ ನಿನ್ನ ಮಕ್ಕಳನ್ನು ಕೆಡಿಸದೆ ಬಿಡರು. ಭೀಮಾರ್ಜುನರು ಸಭೆಯಲ್ಲಿ ಮಾಡಿದ ಪ್ರತಿಜ್ಞೆಗಳನ್ನು ಮರೆತುಬಿಟಿರಾ? ಅವರು ಸಜ್ಜನರೆಂತಲೂ, ನಿನ್ನ ಮಕ್ಕಳು ದುಷ್ಟರೆಂತಲೂ ಜನರು ಆಡಿಕೊಳ್ಳುತ್ತಿರುವುದರಿಂದ ನೀನೂ ಆ ಮಾತು ನಿಜವೆಂದು ನಂಬಿರುವೆಯೇನು? ಭೀಮನು ಹರಟೆಯಮಲ್ಲನು. ಅರ್ಜುನನು ದುರಹಂಕಾರಿ. ಯುಧಿಷ್ಠಿರನೊಬ್ಬನು ಮಾತ್ರವೇ ಅವರಲ್ಲಿ ಯೋಗ್ಯನೆನ್ನಬಹುದು. ಆದರೂ ಒಡಹುಟ್ಟಿದವರ ಸಹವಾಸದಿಂದಲೂ, ಹೆಂಡತಿಯ ದುರ್ಬೋಧನೆಯಿಂದಲೂ ಅಜಾತಶತ್ರುವಾದ ಆತನ ಮನಸ್ಸು ಕೂಡ ಕ್ಷಣೇ ಕ್ಷಣೇ ಬದಲಾಯಿಸುತ್ತಲಿರುವುದು. ಅವರು ಅರಣ್ಯವಾಸಿಳಾಗಿರುವ ಪರ್ಯಂತ ನಿನ್ನ ಮಕ್ಕಳು ಎಷ್ಟು ಸುಖಪಟ್ಟರೆ ಅಷ್ಟೇ ಲಾಭವೆಂದು ತಿಳಿ. ಆ ಅವಧಿಯನ್ನು ಕಳೆದು ಅವರು ರಾಜ್ಯಕ್ಕೆ ಬಂದ ಕೂಡಲೇ ನಮ್ಮ ದುರ್ಯೋಧನನ ಸಕಲ ಸಾಮ್ರಾಜ್ಯವನ್ನೂ ಕಸಿದುಕೊಳ್ಳದೆ ಇರರು. ಆ ಪಾಂಡವರಿಗಾಗಿ ನೀನು ಚಿಂತಿಸಬೇಡ. ನಿನ್ನವರ ಪರಿಣಾಮ ನೋಡಿಕೋ.

ಕರ್ಣ:—ಎಲೈ ರಾಜಾಧಿರಾಜನೇ, ನಮ್ಮ ಶಕುನಿಯು ಮಾತಿನಲ್ಲಿ ಸ್ವಲ್ಪವೂ ಅಸತ್ಯವಿಲ್ಲ. ಆ ಪಾಂಡವರು ಬಂಧುದ್ರೋಹಿಗಳು, ಕಪಟಗಳು, ಶೂರರು. ಮತ್ತು ಶತ್ರುಭಯಂಕರರು. ವನವಾಸದ ಅವಧಿಯು ತೀರಿದ ಕೂಡಲೇ ಅವರಿಲ್ಲಿಗೆ ಬಂದು ನಿಮಗೆ ಕೇಡು ಮಾಡುವುದರಲ್ಲಿ ಸಂಶಯವಿಲ್ಲ. ನಿನ್ನವರು ಸುಖದ ಸುಗ್ಗಿಯಲ್ಲಿರುವಾಗ ಅವರನ್ನು ನೋಡಿ ಹಿಗ್ಗದೆ ಆ ಪಾಂಡವರು ಕಾಡಿನಲ್ಲಿ ಕಷ್ಟಪಡುತ್ತಿರುವರೆಂದು ನೀನೇಕೆ ಮನಸ್ಸಿನಲ್ಲಿ ಚಿಂತೆ ಹತ್ತಿಸಿಕೊಂಡು ಕುಗ್ಗುತ್ತಿರುವೆ? ಅವರ ಸ್ಥಿತಿಗಾಗಿ ಚಿಂತಿಸಬೇಡ.

ದುರ್ಯೋ:—ಅಪ್ಪಾಜೀ! ನಿನ್ನ ಮಕ್ಕಳ ಚಿಂತೆಯೇ ನಿನಗಿಲ್ಲ. ನೀನು ಯಾವಾಗಲೂ ನಮ್ಮ ಪಾಂಡವರು, ನಮ್ಮ ಪಾಂಡವರು ಎಂದು ಅವರಿಗೋಸ್ಕರ ಪ್ರಾಣಬಿಡುತ್ತಿರುವೆ. ಬಾಲ್ಯದಿಂದಲೂ ಅವರು ನಮಗೆ ಮಾಡಿದ ಕೆಡಕುಗಳು ಮರೆತುಹೋದುವೆ? ಎಷ್ಟು ಸಾರಿ ಆ ಭೀಮನ ಕೈಯಿಂದ ನಾನು ಪೆಟ್ಟು ತಿಂದಿಲ್ಲ. ಈಗ ತಾನೇ ಹತ್ತು ವರುಷಗಳಿಂದ ನೆಮ್ಮದಿಯಾಗಿದ್ದೇವೆ. ಮುಂದೆ ಅವರು ಹಿಂದಿರುಗಿ ಬಂದರೆ ಏನುಮಾಡಿ ಬಿಡುವರೋ? ಅವರು ಬಾರದಂತೆ ಹೇಗೆ ತಡೆಗಟ್ಟಲು ಯೋಚಿಸುವುದನ್ನು ಬಿಟ್ಟು, ಅವರ ಕಷ್ಟವನ್ನು ಕೇಳಿ ಮರುಗುವುದು ಹುಚ್ಚುತನವಲ್ಲವೆ? ಸಾಕು ಈ ಚಿಂತೆಯನ್ನು ಬಿಡು.

ಹೀಗೆ ಹೇಳುತ್ತಾ ಬರಲು ಆ ಧೃತರಾಷ್ಟ್ರನು ಆದುದಾಗಲಿ. ಭಗವದ್ವಿಲಾಸಕ್ಕೆ ಯಾರ ಯತ್ನವೇನಿದೆ? ಎಂದು ಹೇಳಿ ಸುಮ್ಮನಾದನು. ಅವರೂ ತಮ್ಮ ಮನೆಗಳಿಗೆ ಹೋದರು.

ಮತ್ತೊಂದು ದಿನ ದುರ್ಯೋಧನನು ಶಕುನಿ ಕರ್ಣಾದಿ ಆಪ್ತಜನರನ್ನು ಸೇರಿಸಿ ಒಂದು ಸಭೆಮಾಡಿ, ಆ ಪಾಂಡವರಿಗೆ ತಮ್ಮ ಐಶ್ವರ್ಯವನ್ನು ತೋರಿಸಿ ಅವರನ್ನು ಅವಮಾನಗೊಳಿಸಿ ಬರಬೇಕೆಂದು ಯೋಚನೆಯಿದೆ. ಇದಕ್ಕೆ ಯಾವ ಉಪಾಯವನ್ನು ಹೇಳುವಿರಿ? ಎಂದು ಸಭಾಸದರನ್ನು ಕೇಳಿದನು. ಅದಕ್ಕೆ ಕರ್ಣನಿಂತೆಂದನು.

ಕರ್ಣ:—ಜೀಯಾ! ಪಾಂಡವರು ಇಳಿದುಕೊಂಡಿರುವ ದ್ವೈತವನದಲ್ಲಿ ನಮ್ಮ ಅರಮನೆಯ ಹಸುಗಳು ಬಣ್ಣಕ್ಕೆ ಹತ್ತು ಸಾವಿರದಂತೆ

ಮೇದುಕೊಂಡು ಜೀವಿಸುತ್ತಿವೆ. ಅವುಗಳನ್ನು ನೋಡಿ ಬರುವ ನೆವವಿಟ್ಟುಕೊಂಡು ಘೋಷಯಾತ್ರೆಗೆ ಹೋಗಿ ಬರೋಣ. ನಮ್ಮ ವೈಭವವನ್ನು ಕಂಡು ಆ ಪಾಂಡವರು ಹೊಟ್ಟೆಕಿಚ್ಚಿನಿಂದ ಮತ್ತ ಷ್ಟು ಕುದಿಯಲಿ.

ದುರ್ಯೋ:—ಅಂಗರಾಜನೇ, ನನ್ನ ಮನಸ್ಸಿನಲ್ಲಿ ಮೊದಲೇ ಈ ಯೋಚ ನೆ ಹೊಳೆಯಿತು. ನಮ್ಮ ತಂದೆಯು ಇದಕ್ಕೆ ಒಪ್ಪಲಾರನು. ಆತನನ್ನು ಸಮ್ಮತಿಗೊಳಿಸುವ ಉಪಾಯವು ಯಾವುದು ?

ಶಕು:—ಕರ್ಣನು ಹೇಳಿದ ಮಾರ್ಗದಿಂದಲೇ ಈ ಕಾರ್ಯಸಾಧನೆಯಾಗ ಬಹುದು. ನಮ್ಮ ಹಸುಗಳ ಸ್ಥಿತಿಯನ್ನು ನೋಡಿ ಹಲವು ವರು ಷಗಳಾದುವು. ಈಗ ಅವುಗಳನ್ನು ಪ್ರತ್ಯಕ್ಷದಲ್ಲಿ ನೋಡಿಕೊಂಡು, ಅವುಗಳಿಗೆ ಕ್ರೂರಮೃಗಗಳಿಂದ ಬಾಧೆ ಸಂಭವಿಸದಂತೆ ಬೇಟೆ ಗಾರರನ್ನು ಅಲ್ಲಿಟ್ಟು ಬರುವೆನೆಂದು ಹೇಳಿದರೆ ಭಾವನು ಒಪ್ಪ ದೆ ಏನುಮಾಡುವನು ? ಹೇಗಾದರೂ ಆತನಿಗೆ ಸಮ್ಮತಿ ಹೇಳಬ ಹುದು.

ಇದನ್ನು ಕೇಳಿ ದುರ್ಯೋಧನನು ಇದೇ ತಕ್ಕ ಉಪಾಯವು. ಹೀಗೆಯೇ ಮಾಡೋಣವೆಂದು ನಿಶ್ಚಯಿಸಿ, ತಂದೆಯ ಬಳಿಗೆ ಹೋಗಿ, ವಿನಯ ಭಯಭಕ್ತಿಗಳಿಂದ ಕೈಮುಗಿದುಕೊಂಡು ಇಂತೆಂದನು

ದುರ್ಯೋ:—ಆರ್ಯನೇ ! ದ್ವೈತವನದಲ್ಲಿರುವ ನಮ್ಮ ಅಮೃತಮಹಲ್' ಕಾವಲಿನಿಂದ ಗೋಪಾಲಕನೊಬ್ಬನು ನಿನ್ನೆ ತಾನೇ ಇಲ್ಲಿಗೆ ಬಂದ ನು. ಅಲ್ಲಿ ಬಿಟ್ಟಿರುವ ನಮ್ಮ ಹಸುಗಳು ಚೆನ್ನಾಗಿವೆಯಂತೆ ! ಆದರೂ ಅವುಗಳಿಗೆ ದುಷ್ಟಮೃಗಗಳ ಬಾಧೆ ಹೆಚ್ಚಾಗಿರುವು ದೆಂದು ತಿಳಿಸಿದನು. ಅದನ್ನು ಪರಿಹರಿಸಿ ಅವುಗಳನ್ನು ರಕ್ಷಿಸುವುದು ಅತ್ಯಾವಶ್ಯಕವಲ್ಲವೇ ? ಇದಕ್ಕಾಗಿ ಅಡವಿಗೆ ಹೋಗಿ ಬರಬೇಕೆಂ ದಿದ್ದೇನೆ. ದಯಮಾಡಿ ಅಪ್ಪಣೆ ಕೊಡಬೇಕು.

ಧೃತ:—ಯುವರಾಜಾ ! ನಮ್ಮ ಗೋವುಗಳ ಕ್ಷೇಮವನ್ನು ವಿಚಾರಿಸಿ ಕೊಂಡು ಬರುವುದು. ನಮಗೆ ಕರ್ತವ್ಯವೇ ಸರಿ. ಆದರೆ ಆ ದ್ವೈ ತವನದಲ್ಲಿಯೇ ಪಾಂಡವರು ವಾಸಮಾಡಿಕೊಂಡಿರುವರಂತೆ !

ನೀವು ಅಲ್ಲಿಗೆ ಹೋದರೆ ಸುಮ್ಮನೆ ನೋಡಿಕೊಂಡು ಬರತಕ್ಕವರಲ್ಲ. ಅವರನ್ನು ಕೆಣಕಿ ಕೋಪವೆಬ್ಬಿಸಿ ಮತ್ತಾವವಿಪತ್ತನ್ನು ತಂದುಕೊಳ್ಳುವಿರೋ ಎಂದು ಹೆದರುತ್ತೇನೆ.

ದುರ್ಯೋ:—ಅಯ್ಯಾ! ನಾವು ಆ ಪಾಂಡವರ ಗೊಡವೆಗೆ ಹೋಗುವುದೇ ಇಲ್ಲ. ಕಾಡಿಗೆ ಹೋಗಿ ನಮ್ಮ ಹಸುಗಳನ್ನು ನೋಡಿಕೊಂಡು ಬಂದುಬಿಡುತ್ತೇವೆ. ಬಹುದಿನಗಳಿಂದ ರಾಜಧಾನಿಯಲ್ಲಿಯೇ ಇದ್ದುಕೊಂಡು, ಹೊರಕ್ಕೆ ಹೊರಡದೆ ಇರುವುದರಿಂದ ಮನಸ್ಸಿಗೆ ಬಹು ಬೇಸರವಾಗಿದೆ. ವಿನೋದಾರ್ಥವಾಗಿ ರಾಣಿವಾಸದವರನ್ನೂ ಪರಿಜನರನ್ನೂ ಕರೆದುಕೊಂಡು ಹೋಗಿ ನೋಡಿ ಬರುವೆವು.

ಧೃತ:—ಪಾಂಡವರೊಂದಿಗೆ ಕಲಹಮಾಡದೆ ಹೊರಟುಬರುವುದಾದರೆ ಹೋಗಿಬನ್ನಿರಿ. ಅಪ್ರಮತ್ತರಾಗಿ ನಿಮ್ಮ ಕೆಲಸ ಮಾತ್ರ ನೋಡಿಕೊಂಡು ಬಂದುಬಿಡಿರಿ

ದುರ್ಯೋಧನನು ತಂದೆಯ ಅನುಮತಿ ಪಡೆದು ಪುರೋಹಿತರಿಂದ ಘೋಷಯಾತ್ರೆ ಹೊರಡಲಿಕ್ಕೆ ಒಂದು ಶುಭಲಗ್ನವನ್ನು ನಿಶ್ಚಯಿಸಿ, ಪಟ್ಟಣದಲ್ಲೆಲ್ಲಾ ಸಾರಿಸಿದನು. ದುಶ್ಶಾಸನಾದಿ ತಮ್ಮಂದಿರನ್ನೂ, ಶಕುನಿ ಕರ್ಣಾದಿ ವೀರರನ್ನೂ, ಸೇನಾಪತಿಗಳನ್ನೂ ಆಪ್ತಜನರನ್ನೂ, ಅವರವರ ಅಂತಃಪುರ ಸ್ತ್ರೀಯರೊಡನೆ ಹೊರಡಬೇಕೆಂದು ಏರ್ಪಡಿಸಿ ತಕ್ಕ ಅನುಕೂಲತೆಗಳನ್ನು ಮಾಡಿಕೊಟ್ಟನು ಭೀಷ್ಮದ್ರೋಣವಿದುರಾದಿಗಳು ಈ ಸುದ್ದಿಯನ್ನು ಕೇಳಿ, ತಮ್ಮ ಮನಸ್ಸಿನಲ್ಲಿ ವಿಚಾರಗೊಂಡು ಅವನನ್ನು ಕರಿಸಿ "ಎಲೈ ಯುವರಾಜನೇ! ಈಗಿನ ಸಂದರ್ಭದಲ್ಲಿ ನೀನು ಘೋಷಯಾತ್ರೆ ಹೊರಡುವುದು ಉಚಿತವಾಗಿ ಕಾಣುವುದಿಲ್ಲ. ಭೀಮನು ಬಹುದುಷ್ಟನು. ಅರ್ಜುನನೂ ಕೋಪಗೊಂಡೇ ಇರುವನು. ನೀವಾದರೋ ಬಹುಮಂದಿ, ಚತುರಂಗ ಸೈನ್ಯದೊಂದಿಗೆ ಅದೇ ವನಕ್ಕೆ ಹೊರಡಬೇಕೆಂದು ಹೇಳುವುದರಿಂದ ನಿಮ್ಮ ಉದ್ದೇಶವು ಅವರನ್ನು ಕೆಣಕಲಿಕ್ಕೋಸ್ಕರವೇ ಪ್ರಯಾಣಮಾಡಿರುವಿರೆಂದು ಗೊತ್ತಾಗುವುದು. ಈ ನಿಮ್ಮ ಸೈನಿಕರು ತಪೋವನವನ್ನೆಲ್ಲ ತುಳಿದು ಋಷಿಗಳನ್ನು ಕೆಣಕುವರು. ಅವರು ಅಸಮಾಧಾನಪಟ್ಟು ಪಾಂಡವರಲ್ಲಿ ದೂರುವರು. ನಿಮಗೂ

ಪಾಂಡವರಿಗೂ ಈ ಮೂಲಕ ಕಲಹ ಸಂಭವಿಸುವುದು ಆದುದರಿಂದ ಈ ಪ್ರಯಾಣವನ್ನು ಈ ವೇಳೆಯಲ್ಲಿ ಮಾನಸಿಕ ಮಾಡುವುದು ಉತ್ತಮ ವೆಂದು ನಮಗೆ ತೋರುತ್ತದೆ. ನಿಮಗೆ ಪಟ್ಟಣವಾಸದಲ್ಲಿ ಬೇಸರ ತೋರಿದರೆ ಮತ್ತೊಂದು ಕಡೆಗೆ ಹೋಗಿ ಕೆಲವು ದಿನಗಳಿದ್ದು ಬರಬಹುದು " ಎಂದರು. ಅದಕ್ಕೆ ದುರ್ಯೋಧನನು " ಆರ್ಯರೇ ! ನಿಮ್ಮ ಮಾತಿಗೆ ಎದುರುತ್ತರ ಕೊಡುವೆನೆಂದು ಕೋಪಿಸಬೇಡಿರಿ. ನಾವು ನಿಮಗೆ ಯಾವ ದೂರನ್ನೂ ತರತಕ್ಕವರಲ್ಲ. ನಾವೂ ಹದ್ದು ಮೀರಿ ಹೋಗತಕ್ಕವರಲ್ಲವೆಂದು ತಿಳಿಯಿರಿ ನಿಮಗೆ ಸೂಕ್ತವಾಗಿ ತೋರಿದರೆ ನಮ್ಮ ಸಂಗಡ ದಯಮಾಡಿ ನೋಡಿಕೊಂಡು ಬರಬಹುದು. ಇಲ್ಲದಿದ್ದರೆ ನಮಗೆ ಅಪ್ಪಣೆ ಕೊಟ್ಟು ಕಳುಹಬಹುದು " ಎಂದು ವಿನಯದಿಂದ ಪ್ರಾರ್ಥಿಸಿದನು. ಅದಕ್ಕವರು " ಅಯ್ಯಾ ಕುರುಪತಿಯೇ ! ನಮಗೆ ತೋರಿದ ಮಾತನ್ನು ಹೇಳಿದೆವು. ನಿನ್ನ ಬುದ್ಧಿಗೆ ತೋರಿದಂತೆ ನಡೆದುಕೋ. ಕೊನೆಯಲ್ಲಿ ನಮ್ಮನ್ನು ನಿಷ್ಠುರಗೊಳಿಸಬೇಡ. ನಿನಗೆ ಸಾರಿ ಸಾರಿ ಹೇಳಿದ್ದೇವೆ. ನಿಮ್ಮ ಸಂಗಡ ನಾವು ಬರತಕ್ಕವರಲ್ಲ. ಅಲ್ಲಿಯ ಶುಭಾಶುಭ ಫಲಗಳು ನಿಮ್ಮವೇ. ಇದರ ಫಲವನ್ನು ಮುಂದೆ ನೀವು ಕಾಣುವಿರಿ " ಎಂದು ದ್ರೋಣಾದಿ ಹಿರಿಯರು ಹೇಳಿಬಿಟ್ಟರು. ದುರ್ಯೋಧನನು ಅವರು ಮಾತನ್ನು ಗಣನೆಗೆ ತಾರದೆ ಇದರಿಂದ ಆದುದಾಗಲಿ. ಹೋಗಿಯೇ ಬರುವೆನೆಂದು ಪ್ರಯಾಣವನ್ನು ನಿಶ್ಚಯಿಸಿದನು.

ಆ ಮರುದಿನ ಸುಮುಹೂರ್ತದಲ್ಲಿ ಆನೆ, ಕುದುರೆ, ರಥ, ಪಾಲಕಿ ಮುಂತಾದ ವಾಹನಗಳನ್ನು ಸಿದ್ಧಗೊಳಿಸಿ, ರಾಣಿವಾಸದವರು, ಆಪ್ತರು, ಭೃತ್ಯರು, ಬಂಧುಬಳಗದವರು, ಪುರಜನರು ಮುಂತಾದವರೆಲ್ಲ ತಮಗೆ ತಕ್ಕಂತೆ ಅನುಕೂಲಗೊಳಿಸಿಕೊಂಡು ಪ್ರಯಾಣ ಹೊರಟು ಆ ಸುಯೋಧನನ ಸಂಗಡ ಎಂಟು ಸಾವಿರ ರಥಗಳೂ, ಮೂವತ್ತು ಸಾವಿರ ಆನೆಗಳೂ, ಕೋಟಿ ಸಂಖ್ಯೆಯ ಕುದುರೆಗಳೂ, ಹತ್ತು ಲಕ್ಷ ಕಾಲಾಳುಗಳೂ ಹಿಂಬಾಲಿಸಿ ನಡೆದರು. ಶಂಖ, ಕಹಳೆ, ಭೇರಿ ಮೊದಲಾದ ವಾದ್ಯಧ್ವನಿಗಳು ಮೊಳಗುತ್ತಿದ್ದುವು. ಆ ಸೈನಿಕರು ಹೊರಡುವಾಗ ಮಾರ್ಗದಲ್ಲಿ ಅವರಿಗೆ ಹಲವು ದುಶ್ಶಕುನಗಳು ಕಾಣಬಂದುವು. ಅವುಗಳನ್ನವರು ಪರಿಗಣಿ

ಸದೆ ಪ್ರಯಾಣ ಮಾಡಿದರು. ಅವರು ಅರಣ್ಯದಲ್ಲಿ ಕೈಗೆ ಸಿಕ್ಕಿದ ಮೃಗ ಗಳನ್ನು ಬೇಟೆಯಾಡುತ್ತಾ ದ್ವೈತವನ ಪ್ರಾಂತದಲ್ಲಿದ್ದ ತಮ್ಮ ಗೋಗಣ ಗಳನ್ನು ನೋಡಿ ಆನಂದದಿಂದ ಅಲ್ಲಿ ಒಂದು ರಮಣೀಯವಾದ ಪ್ರದೇಶ ದಲ್ಲಿ ತಮ್ಮ ಸೈನ್ಯಗಳನ್ನಿಳಿಸಿ, ಅವರವರ ತಾರತಮ್ಯಾನುಗುಣವಾಗಿ ಡೇರೆ ಗಳನ್ನು ಹಾಕಿಸಿ, ಅವುಗಳಲ್ಲಿ ವಾಸಮಾಡಿಕೊಂಡು, ಮೃಷ್ಟಾನ್ನಪಾನಗ ಳನ್ನು ಮಾಡಿಸಿ, ಯಥೇಷ್ಟವಾಗಿ ಉಂಡು ಕುಣಿದು ಗಂಧ ಪುಷ್ಪ ತಾಂ ಬೂಲಗಳಿಂದ ಸಂತೃಪ್ತರಾಗಿ ಗಾಯಕರಿಂದ ಹಾಡಿಸುತ್ತಲೂ, ನರ್ತಕ ರಿಂದ ಕುಣಿಸುತ್ತಲೂ ನಾನಾ ವಿನೋದಗಳಿಂದ ಕಾಲಹರಣ ಮಾಡುತ್ತಿ ದ್ದರು. ಅಲ್ಲಿರುವ ದೊಡ್ಡ ಸರೋವರದಲ್ಲಿ ಜಲಕ್ರೀಡೆಯಾಡಬೇಕೆಂದ ಪೇಕ್ಷಿಸಿ ಸೇವಕರಿಗೆ ಅಪ್ಪಣೆ ಮಾಡಲು ಅವರು ಅಲ್ಲಿದ್ದ ದೊಡ್ಡ ಮರ ಗಳ ಕೊಂಬೆಗಳನ್ನು ಮುರಿದು ದೊಡ್ಡದಾದ ಒಂದು ಕ್ರೀಡಾಗೃಹವನ್ನು ಕಟ್ಟಿ ಅದರ ಮೇಲೆ ಎಳೆಯ ಚಿಗುರುಗಳನ್ನು ಹೊದಿಸಿದರು. ಪಾಂಡ ವರು ಪರ್ಣಶಾಲೆಗಳನ್ನು ಕಟ್ಟಿಕೊಂಡು ವಾಸಮಾಡುತ್ತಿದ್ದ ಪ್ರದೇಶವು ಅಲ್ಲಿಗೆ ಬಹು ಸಮೀಪದಲ್ಲಿಯೇ ಇದ್ದಿತು. ಕೌರವರ ರಾಣಿಯರೂ, ಅವರ ಸಖಿಯರೂ ಆ ಆಶ್ರಮಗಳಲ್ಲಿದ್ದ ಹೂಗಿಡಗಳನ್ನು ಮುರಿದು ಎಳೆಬಳ್ಳಿಗ ಳನ್ನು ಕಡಿದು ಹಾಳುಮಾಡುತ್ತಿದ್ದರು. ಮುನಿಜನರು ಇರಿಸಿದ್ದ ಪರಿಶು ದ್ಧ ವಸ್ತುಗಳನ್ನು ಕೆಡಿಸುತ್ತಾ ಬಂದರು. ಅವರ ಧೌತವಸ್ತ್ರಗಳಲ್ಲಿ ತಮ್ಮ ತಂಬೂಲವನ್ನು ಉಗುಳಿ ಕಟ್ಟಿಟ್ಟರು. ಕೆಲವರು ದುರುಳರು ವೃದ್ಧಬ್ರಾಹ್ಮ ಣರ ಮುಖಗಳನ್ನು ನೋಡಿ ಅಣಕಿಸುತ್ತಾ, ನಗುತ್ತಾ ತಮ್ಮ ಬೆರಳು ಗಳನ್ನು ತೋರಿಸಿ ಹಾಸ್ಯಮಾಡುತ್ತಿದ್ದರು. ಕೆಲವು ಸ್ತ್ರೀಯರು ದೀಕ್ಷಿ ತರ ಜುಟ್ಟುಗಳನ್ನು ಹಿಡಿದು ಜಗ್ಗುತ್ತಿದ್ದರು. ಬ್ರಹ್ಮಚಾರಿಗಳ ತಲೆಗಳ ಮೇಲೆ ತಮ್ಮ ಕೈಗಳಿಂದ ಮೊಟ್ಟುತ್ತಿದ್ದರು. ಈ ದುಶ್ಚೇಷ್ಟೆಗಳನ್ನು ನೋಡಿ ಆ ಮುನಿಜನರು ಗಾಬರಿಯಾಗಿ "ಅಯ್ಯೋ! ಇದೇನು ಕೇಡು ಗಾಲಬಂತು? ಈ ವನಕ್ಕೆ ರಕ್ಷಕರೇ ಇಲ್ಲವೆ? ನಮ್ಮ ವೈದಿಕ ಕೃತ್ಯಗ ಳಿಗೆ ಈ ನೀಚರು ವಿಘ್ನಮಾಡುತ್ತಿರುವರಲ್ಲಾ! ನಮ್ಮ ಅಧ್ಯಯನಕ್ಕೆ ವಿಘ್ನವು ಬಂದೊದಗಿತು. ಪರಿಶುದ್ಧ ವಸ್ತುಗಳೆಲ್ಲವೂ ಅಶುಚಿಯಾದುವು. ನಮ್ಮ ಯಜ್ಞೋಪವೀತಗಳನ್ನು ಈ ದುಷ್ಟರು ಕಿತ್ತುಹಾಕಿಬಿಟ್ಟರು.

ಮುಂದೇನು ಗತಿ ? ” ಎಂದು ಗೋಳಿಡುತ್ತಿದ್ದರು. ಕೆಲವರು “ ಎಲಾ ಏಕೆ ಹೆದರುವಿರಿ ? ಇಗೋ. ಇಲ್ಲಿಯೇ ಶೂರರಾದ ಪಾಂಡವರಿರುವರು. ಅವರಿಗೆ ಹೇಳಿ ತಕ್ಕ ಶಿಕ್ಷೆ ಮಾಡಿಸೋಣ ನಡೆಯಿರಿ ” ಎಂದರು. ಅದನ್ನು ಕೇಳಿ ಆ ಸ್ತ್ರೀಯರು “ ಎಲ ಎಲಾ ! ಪಾಂಡವರಿಗೆ ಹೇಳಿದರೆ ಅವರು ನಮ್ಮನ್ನೇನು ಮಾಡಬಲ್ಲರು ? ನಮ್ಮ ದೊರೆಯಾದ ಕೌರವನು ಬೇಕಾದಷ್ಟು ಸೈನ್ಯವನ್ನು ತಂದಿರುವನು. ಭೀಮಾರ್ಜುನರ ಹೆಸರುಗಳನ್ನು ಕೇಳಿದ ಮಾತ್ರದಿಂದ ನಾವು ಹೆದರುವೆನೆಂದು ತಿಳಿದುಕೊಂಡಿರುವಿರೇನು ? ನಿಮಗೆ ಬೇಕಾದ ಕಡೆಗೆ ಹೋಗಿ ದೂರಿಕೊಳ್ಳಿರಿ ” ಎಂದು ಗದರಿಸುತ್ತಿದ್ದರು. ಆ ಋಷಿಗಳು ಓಡಿಹೋಗಿ, ತಮ್ಮ ಆಶ್ರಮಗಳಿಗೆ ಉಂಟಾದ ಕಷ್ಟಗಳನ್ನೂ, ತಮಗೆ ಸಂಭವಿಸಿದ ನಷ್ಟಗಳನ್ನೂ ಆ ಪಾಂಡವರ ಎದುರಿಗೆ ವಿಸ್ತರಿಸಿ ಹೇಳಿದರು.

ಅದನ್ನು ಕೇಳಿ ಧರ್ಮರಾಯನು “ ಪೂಜ್ಯರೇ ! ಕೋಪಿಸಿಕೊಳ್ಳಬೇಡಿರಿ. ಕುರುಪತಿಯು ಕಡೆ ಪರಿವಾರದ ಜನರು ಬಹು ಮಂದಿ ಬಂದಿರುವರಂತೆ ! ಅವರು ತಮ್ಮ ಆಕಳುಗಳನ್ನು ನೋಡುವ ಉದ್ದೇಶದಿಂದ ಇಲ್ಲಿಗೆ ಬಂದಿರಬಹುದು. ಅವರು ತಮ್ಮ ವಿನೋದಾರ್ಥವಾಗಿ ಸ್ತ್ರೀಜನರನ್ನೂ ಕರೆದುಕೊಂಡು ಬಂದಿರುವರು. ನೀವು ಗಾಬರಿಗೊಳ್ಳಬೇಡಿರಿ. ನಮ್ಮವರಿಗೆ ಹೇಳಿ ಸಮಾಧಾನ ಮಾಡೋಣ. ಸ್ವಲ್ಪ ಸೈರಿಸಿಕೊಂಡಿರಿ ” ಎಂದು ಸಂತೈಸುತ್ತಿದ್ದನು. ಆಗ ಭೀಮಸೇನನು ಬಲು ರೋಷದಿಂದ ಔಡುಗಳನ್ನು ಕಚ್ಚುತ್ತಾ, ಆ ದುಷ್ಟನಾದ ಕುರುಪತಿಯು ಸಂಗಡ ಹೊಡೆದಾಡಿ, ಅವನನ್ನು ಓಡಿಸಿ ಬರುವೆನೆಂದು ತನ್ನ ಗದೆಯನ್ನು ತೆಗೆದುಕೊಂಡನು. ಆಗ ಯುಧಿಷ್ಠಿರನು ಸವಿನುಡಿಗಳಿಂದ ಭೀಮನ ಕೋಪವನ್ನು ತಗ್ಗಿಸಿ ಅವನನ್ನು ತಡೆದನು.

ಸ್ವಲ್ಪ ಹೊತ್ತಿಗೆ ಅರಸರೂ ರಾಣಿವಾಸದವರೂ ಜಲಕ್ರೀಡೆಗೆ ಸಿದ್ಧರಾದರು. ಅದನ್ನು ನೋಡಿ ಆ ವನಪಾಲಕರಾಗಿದ್ದ ಗಂಧರ್ವರು “ ಎಲ ಎಲಾ ! ಇದು ಗಂಧರ್ವ ರಾಜನ ಕ್ರೀಡಾವನವು. ಈ ಸರೋವರದ ನೀರನ್ನು ಆತನು ಬಹು ಶುಚಿಯಾಗಿಟ್ಟಿರುವನು. ಇದನ್ನು ಕೆಡಿಸಬೇಡಿರಿ. ಗಂಧರ್ವರಿಗೆ ಇದು ತಿಳಿದರೆ ನಿಮ್ಮನ್ನು ಶಿಕ್ಷಿಸದೆ ಬಿಡರು. ನಿಮ್ಮ

ನೀರಾಟಕ್ಕೆ ಬೇರೆ ಕಡೆಗಳಲ್ಲಿ ಎಷ್ಟೋ ಕೊಳಗಳಿರುವುವು. ಅಲ್ಲಿಗೆ ಹೋಗಿ ಈಸಾಡಿಕೊಳ್ಳಿರಿ " ಎಂದು ಒತ್ತಿ ಹೇಳಿದರು. ಅದಕ್ಕೆ ಕೌರವಭಟರು ಲಕ್ಷ್ಯಕೊಡದೆ ಛೀ ಛೀ! ತೊಲಗಿಹೋಗಿರಿ. ಗಂಧರ್ವರ ಹೆಸರು ಹೇಳಿದರೆ ನಾವು ಹೆದರಿಕೊಳ್ಳುವೆವೋ? ಅವರಿಗೆ ಕೋಡುಗಳು ಮೂಡಿರುವುವೋ? ನಮ್ಮ ಜಲಕ್ರೀಡೆಗೆ ಅಡ್ಡಿಮಾಡಿದರೆ ನಿಮ್ಮ ರಕ್ತವನ್ನು ಸುರಿಸಿ ಆ ನೀರಿನಲ್ಲಿ ಜಲಕ್ರೀಡೆಯಾಡುವೆವು ನೋಡಿರಿ " ಎಂದು ಅವರನ್ನು ಹೊಡೆದು ಬಡಿದು ಓಡಿಸಿದರು. ಅವರು ಓಡಿಹೋಗಿ ಈ ಸುದ್ದಿಯನ್ನು ಗಂಧರ್ವ ರಾಜನಿಗೆ ತಿಳಿಸಿದರು. ಆತನು ಕೆಲವು ಗಂಧರ್ವರನ್ನು ಕಳುಹಿ ಅವರನ್ನು ಶಿಕ್ಷಿಸಿ ಓಡಿಸಿರೆಂದು ಆಜ್ಞಾಪಿಸಿದನು. ಅವರು ಆಯುಧಪಾಣಿಗಳಾಗಿ ಬಂದರು. ಅವರಿಗೂ ಕೌರವರ ಸೈನ್ಯಕ್ಕೂ ದೊಡ್ಡ ಯುದ್ಧವೇ ಆಯಿತು. ಉಭಯ ಸೈನ್ಯಗಳಲ್ಲಿಯೂ ಹಲವು ಜನರು ಮಡಿದರು. ಕರ್ಣಾದಿ ವೀರರೊಂದಿಗೆ ಕಾದುವ ಸಾಹಸವು ಸಾಮಾನ್ಯರಿಗೆ ಸಾಧ್ಯವೆ? ಗಂಧರ್ವ ಸೇನೆಯು ಪರಾಜಯ ಹೊಂದಿತೆಂದು ಕೇಳಿ, ಅವರ ದೊರೆಯಾದ ಚಿತ್ರಸೇನನು "ದೇವತೆಗಳಾದ ನಮ್ಮ ಎದುರಿಗೆ ಮನುಷ್ಯರು ನಿಂತು ಯುದ್ಧಮಾಡುತ್ತಿರುವರೆ? ಅವರ ಸೊಕ್ಕನ್ನು ಮುರಿದು ಬುದ್ಧಿ ಕಲಿಸಬೇಕು. ನೀವು ಹೋಗಿ ಅವರನ್ನೊಕ್ಕಲಿಕ್ಕಿ ಬನ್ನಿರಿ " ಎಂದು ಹಲವು ವೀರರನ್ನು ಕಳುಹಿದನು. ಅವರು ಬಂದು ಕುರುಸೇನೆಯಲ್ಲಿ ಬಹು ಮಂದಿಯನ್ನು ಕೊಂದುಬಿಟ್ಟರು. ಆಗ ಕರ್ಣ, ದುರ್ಯೋಧನ, ಶಕುನಿ, ಮೊದಲಾದ ಶೂರರೆಲ್ಲರೂ ಗಂಧರ್ವವೀರರನ್ನೆದುರಿಸಿ ನಿಂತು ಬಲವಾಗಿ ಕಾದಿದರು. "ಇವರ ಕೈ ಬಲವಾಗಿದೆ ಇವರನ್ನು ಜಯಿಸುವುದು ನಮ್ಮಿಂದ ಸಾಧ್ಯವಿಲ್ಲವೆಂದು ಕೆಲವರು ಚಿತ್ರಸೇನನ ಬಳಿಗೆ ಹೋಗಿ ದೂರಿದರು. ಅವನು ಅತ್ಯಾಗ್ರಹಗೊಂಡು ಅಧಿಕ ಬಲದೊಡನೆ ಹೊರಟುಬಂದನು. ಉಭಯ ಸೈನ್ಯಕ್ಕೂ ಬಲವಾದ ಕಾಳಗ ನಡೆಯಿತು. ಕೆಲವರು ಗಾಯಪಡೆದು ಬಿದ್ದರು. ಕೆಲವರು ಪ್ರಾಣಭಯದಿಂದ ಕಂಬಿಕಿತ್ತರು. ಕೆಲವರು ಹೇಳದೆ ಕೇಳದೆ ಬಂಡಿಬಿಟ್ಟರು ಕೆಲವರು ಕಂಠಗತಪ್ರಾಣರಾಗಿ ಕುಟುಕುಜೀವದಿಂದ ಇದ್ದರು. ಆಗ ವೀರಾಗ್ರಣಿಯಾದ ಕರ್ಣನು ಚಿತ್ರಸೇನನನ್ನು ಎದುರಿಸಿ ಯುದ್ಧಕೆ

ನಿಂತನು. ಉಭಯ ವೀರರೂ ರೋಷದಿಂದ ಪರಸ್ಪರ ಮೂದಲೆ ಮಾತು ಗಳನ್ನಾಡುತ್ತಾ ಬಾಣಪ್ರಯೋಗ ಮಾಡುತ್ತಿದ್ದರು. ಗಂಧರ್ವನು ಕರ್ಣ ನನ್ನು ಕುರಿತು "ಎಲೈ ಅಂಗರಾಜನೇ, ನೀನು ಕುರುಪತಿಯ ಪ್ರಾಣಾ ಪ್ತನೆನಿಸಿ ಅವನನ್ನೀವನಕ್ಕೆ ಕರೆದುತಂದು ನನ್ನ ವನವನ್ನು ಹಾಳುಮಾಡಿ ದೆಯಾ? ಇದಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡುವೆನು. ಇಗೋ ಸೈರಿ ಸಿಕೋ" ಎಂದು ಒಂದು ದಿವ್ಯಾಸ್ತ್ರವನ್ನು ಪ್ರಯೋಗಿಸಿದನು. ಅದನ್ನ ವನು ಮಧ್ಯದಲ್ಲಿಯೇ ಕತ್ತರಿಸಿ, ಅವನನ್ನು ಕುರಿತು "ಎಲಾ ಗಾಯಕ ನೇ! ನಿನಗೆಷ್ಟು ಕೊಬ್ಬಿನ ನುಡಿಗಳು! ಎಲ್ಲಿಯೋ ಸಭೆಗಳಲ್ಲಿ ಹಾಡಿ ಕೊಂಡು ಬಹುಮಾನ ದ್ರವ್ಯದಿಂದ ಜೀವನ ಮಾಡಿಕೊಂಡಿರದೆ ಈ ಯು ದ್ಧವಿದ್ಯಾಭ್ಯಾಸಕ್ಕೆ ನೀನೇಕೆ ಬಂದೆ? ಇಲ್ಲಿ ಸಪ್ತಸ್ವರಗಳಾಗಲಿ, ವೀಣೆ ಮೃದಂಗಾದಿ ವಾದ್ಯಗಳಾಗಲಿ ಇಲ್ಲ. ಇಲ್ಲಿರುವ ಹೊಸ ಬಾಣಗಳನ್ನೂ ಅಸ್ತ್ರವಿಶೇಷಗಳನ್ನೂ ನೋಡು" ಎಂದು ಅವನ ಮೇಲೆ ಕ್ರೂರಾಸ್ತ್ರ, ನ್ನು ಪ್ರಯೋಗಿಸಿದನು. ಗಂಧರ್ವನು ಅದನ್ನು ನಡುವೆ ಕಡಿದು ಕರ್ಣನ ಮೇಲೆ ಮತ್ತೊಂದು ಅಮೋಘವಾದ ಬಾಣವನ್ನು ಚೆಲ್ಲಿ ಅವನನ್ನು ನೋಯಿಸಿದನು. ಹೀಗೆ ಆ ವೀರರಿಬ್ಬರೂ ಗಾಯಗಳಿಂದ ನೊಂದು, ಹಿಮ್ಮೆಟ್ಟದೆ ದಿವ್ಯಾಸ್ತ್ರಗಳನ್ನು ಪ್ರಯೋಗಿಸುತ್ತ ಸರಿಸಮರೆನಿಸಿ ಯುದ್ಧ ಮಾಡುತ್ತಲಿದ್ದರು.

ಗಂಧರ್ವರ ಸೇನೆಯಲ್ಲಿ ಕಿನ್ನರರು, ಕಿಂಪುರುಷರು, ಯಕ್ಷರು ಮುಂತಾದ ದೇವಗಣವು ಹೆಚ್ಚಾಗಿದ್ದಿತು. ಕರ್ಣನ ಹಿಂದೆ ದುಶ್ಶಾಸ ನಾದಿಯಾದ ಕೌರವರ ದಳವಿದ್ದಿತು. ಕರ್ಣನೇನು ಸಾಮಾನ್ಯ ಬಲನಲ್ಲ. ಸಮುದ್ರಕ್ಕೆ ಬಡಬಾಗ್ನಿಯು ಮುಸಿಯುವ ಮುಸಿಸಿನಿಂದ ಗಂಧರ್ವಬಲದ ಮೇಲೆ ನುಗ್ಗಿ ಬಂದೊಂದು ಬಾಣದಿಂದ ಸಾವಿರಾರು ಮಂದಿಯನ್ನು ಕೆಡಹುತ್ತಾ ಶತ್ರುಸೈನ್ಯವನ್ನು ಹಾಳುಮಾಡುತ್ತಾ ಬಂದನು. ಚಿತ್ರಸೇ ನನೂ ಕರ್ಣನಿಗಿಂತ ಹೆಚ್ಚಾಗಿ ಸಾಹಸವನ್ನು ತೋರಿಸಿ, ಕುರುಸೇನೆ ಯನ್ನು ಮುಟ್ಟವಿಡುತ್ತಾ ಬಂದನು. ಆ ಉಭಯ ಸೈನ್ಯಗಳ ಅಬ್ಬರಕ್ಕೆ ನೆಲ ವು ಬಿರಿಯಿತು ದಿಕ್ಕುಗಳ ಗೋಡೆಗಳು ಒಡೆದುಹೋದುವು. ಭೀಮಾದಿ ಗಳು ಈ ಶಬ್ದವನ್ನು ಕೇಳಿ, ಕುತೂಹಲದಿಂದ ಸಮೀಪದಲ್ಲಿದ್ದ ಬೆಟ್ಟದ

ಮೇಲೆ ಹತ್ತಿ ಆ ವೀರರ ಯುದ್ಧಕೌಶಲ್ಯವನ್ನು ನೋಡುತ್ತಲಿದ್ದರು ಕುರುಪತಿಯಾದ ದುರ್ಯೋಧನನೂ ಕರ್ಣನಿಗೆ ಬೆಂಬಲವಾಗಿ ನಿಂತು ಕಾದುತ್ತಿದ್ದನು. ಒಂದು ಸಾರಿ ಕರ್ಣನು ಗೆದ್ದನೆಂದು ವಂದಿಮಾಗಧರು ಹೊಗಳುವರು. ಮತ್ತೊಂದು ನಿಮಿಷದಲ್ಲಿಯೇ ಓಹೋ ಕರ್ಣನ ಆಟ ಮುಗಿಯಿತು. ಜಯವು ಚಿತ್ರಸೇನನ ಪಾಲಾಯಿತೆಂದು ಭಟ್ಟರು ಕೂಗಿಡುತ್ತಿದ್ದರು.

ಬಳಿಕ ಕರ್ಣನು ಚಿತ್ರಸೇನನನ್ನು ನೋಡಿ “ಎಲಾ ದೇವಗಾಯಕಾ! ನಟ್ಟುವನಿಗೆ ಯುದ್ಧಕೌಶಲ್ಯವೇನು ತಿಳಿಯುವುದು? ನಿನಗೇಕೆ ಈ ಶಸ್ತ್ರಾಸ್ತ್ರಗಳು? ಎಲ್ಲಿಯಾದರೂ ವಾದ್ಯಗಳನ್ನು ಹುಡುಕಿಕೋ ಹೋಗು” ಎಂದು ಅವನ ಮೇಲೆ ಅತಿ ಕ್ರೂರವಾದ ಬಾಣಗಳನ್ನು ಪ್ರಯೋಗಿಸಿದನು. ಆಗ ಚಿತ್ರಸೇನನು ಅವುಗಳನ್ನು ಖಂಡಿಸಿ “ಎಲಾ ಬಗುಳುವ ಭಟ್ಟಾ! ಮೀನು ಹಿಡಿದು ಜೀವಿಸುವವರ ಕುಲದಲ್ಲಿ ಹುಟ್ಟಿದ ನಿನಗೆ ಇಷ್ಟರ ಕೆಚ್ಚಿದೆಯೆ? ನಿನ್ನ ಕೊಬ್ಬು ಎಷ್ಟಿದೆ? ನೋಡೋಣ, ಇವುಗಳನ್ನು ಸೈರಿಸಿಕೋ” ಎಂದು ಹೇಳಿ ಅವುಗಳಿಗಿಂತ ಭಯಂಕರಗಳಾದ ಬಾಣಗಳನ್ನು ಪ್ರಯೋಗಿಸಿದನು. ತರುವಾಯ ಅವರು ಪರಸ್ಪರ ಅಸ್ತ್ರಪ್ರತ್ಯಸ್ತ್ರಗಳಿಂದ ತಮ್ಮ ತಮ್ಮ ಯುದ್ಧಕಲಾಕೌಶಲ್ಯವನ್ನು ಪ್ರದರ್ಶಿಸುತ್ತಿದ್ದರು. ಕರ್ಣನು ಬಿಟ್ಟ ಪರ್ವತಾಸ್ತ್ರವನ್ನು ಗಂಧರ್ವನು ವಜ್ರಾಸ್ತ್ರದಿಂದ ಕತ್ತರಿಸಿದನು. ಮತ್ತು ನಾಗಾಸ್ತ್ರವನ್ನು ಗಾರುಡಾಸ್ತ್ರದಿಂದಲೂ, ಮೇಘಾಸ್ತ್ರವನ್ನು ವಾಯ್ವಸ್ತ್ರದಿಂದಲೂ, ಆಗ್ನೇಯಾಸ್ತ್ರವನ್ನು ವಾರುಣಾಸ್ತ್ರದಿಂದಲೂ ತಿಮಿರಾಸ್ತ್ರವನ್ನು ಸೂರ‍್ಯಾಸ್ತ್ರದಿಂದಲೂ, ಸಿಂಹಾಸ್ತ್ರವನ್ನು ಶರಭಾಸ್ತ್ರದಿಂದಲೂ ಕಡಿದಿಳುಹುತ್ತಾ ಬಂದನು. ಕಡೆಗೆ ಚಿತ್ರಸೇನನು ಬಹು ಕೋಪದಿಂದ ಕರ್ಣನ ಸಾರಥಿಯನ್ನು ಕಡಿದು ರಥವನ್ನು ಮುರಿದುಹಾಕಿದನು. ಮತ್ತು ಅವನ ಮೈಬಿರಿಯುವ ಹಾಗೆ ಬಲವಾಗಿ ಹೊಡೆದನು. ಕರ್ಣನು ಆ ಗುರಿಯನ್ನು ತಪ್ಪಿಸಿಕೊಂಡು, ವಿಕರ್ಣನ ರಥಕ್ಕೆ ಹಾರಿ, ಅದರಲ್ಲಿ ಕುಳಿತು ಯುದ್ಧಮಾಡುತ್ತಾ ಬಂದನು. ಚಿತ್ರಸೇನನ ಕೈಬಲವು ಹೆಚ್ಚುತ್ತಾ ಬರಲು ಕರ್ಣನು ತಾನು ಪರಾಜಿತನಾಗಿ ಅವಮಾನ ಪಡಬೇಕಾಗುವುದೆಂದು ಹೆದರಿ ಯಾರಿಗೂ ಹೇಳದೆ, ಕೇಳದೆ,

ಯುದ್ಧಭೂಮಿಯಿಂದ ಓಡಿಹೋದನು. ಕೂಡಲೆ ದುರ್ಯೋಧನನ ತಮ್ಮಂದಿರಾದ ದುಶ್ಶಾಸನಾದಿಗಳು ಆ ಗಂಧರ್ವರಾಜನನ್ನು ಎದುರಿಸಿ ನಿಂತರು. ಅವರಿಗೆ ಬಲವಾದ ಯುದ್ಧವು ನಡೆದು ಕ್ಷಣಕಾಲದಲ್ಲಿಯೇ ಭಂಗಿತರಾಗಿ ರಣಭೂಮಿಯಿಂದ ಓಡಿಹೋಗಿ ತಲೆ ತಪ್ಪಿಸಿಕೊಂಡರು. ಬಳಿಕ ದುರ್ಯೋಧನನೇ ಯುದ್ಧಕ್ಕೆ ಬಂದು ನಿಂತನು. ಶೂರನಾದ ಚಿತ್ರಸೇನನನ್ನೆದುರಿಸಿ ಅವನು ಉಳಿಯಬಲ್ಲನೆ? ಹಲವು ಸಾರಿ ಅವನ ಬಾಣದ ಪೆಟ್ಟಿನಿಂದ ನೊಂದು, ಓಡಿಹೋಗುವುದಕ್ಕೆ ಸಮಯವನ್ನು ನೋಡುತ್ತಿದ್ದನು. ಆಗ ಚಿತ್ರಸೇನನು ಬಂದು ಕ್ರೂರಾಸ್ತ್ರದಿಂದ ಅವನನ್ನು ಮೂರ್ಛೆಗೊಳಿಸಿ, ಬಲವಾದ ಪಾಶಗಳಿಂದ ಹಿಂಗಟ್ಟುಮುರಿಕಟ್ಟಿ, ಅವನ ತಮ್ಮಂದಿರಲ್ಲಿ ಕೈಗೆ ಸಿಕ್ಕಿದ ಇಪ್ಪತ್ತೈದು ಮಂದಿಯನ್ನು ಬಿಗಿದು, ಅವರೆಲ್ಲರನ್ನೂ ಅಮರಾವತಿಗೆ ಎಳೆದೊಯ್ಯುತ್ತಿದ್ದನು. ಬೆಟ್ಟದ ಮೇಲೆ ನಿಂತು ನೋಡುತ್ತಿದ್ದ ಅರ್ಜುನನಿಗೆ ಮನಸ್ಸಂಕೋಚದಿಂದ ಮುಖವು ಚಿಕ್ಕದಾಯಿತು. ಭೀಮನಿಗೆ ಅತ್ಯಾನಂದ. ಮಾದ್ರೀಪುತ್ರರು ಕೇಕೆಹಾಕಿ ನಗುತ್ತಿದ್ದರು. ಅಲ್ಲಿದ್ದ ಮುನಿಜನರೆಲ್ಲರೂ ಸಂತೋಷದಿಂದ "ಇನ್ನೇನು ನಮ್ಮ ಪಾಂಡವರಿಗೇನೇ ರಾಜ್ಯವು ಸಿಕ್ಕುವುದು. ನಾವೆಲ್ಲರೂ ಸುಖಪಡಬಹುದು" ಎಂದು ಹಿರಿಹಿಗ್ಗಿದರು. ಯುಧಿಷ್ಠಿರನು ಈ ಸುದ್ದಿಯನ್ನು ಕೇಳಿ ತನ್ನ ತಮ್ಮಂದಿರಾದ ಕೌರವರಿಗೆ ಈ ಗತಿ ಸಂಭವಿಸಿತಲ್ಲ! ಈ ಅಪಕೀರ್ತಿಯನ್ನು ಹೋಗಲಾಡಿಸುವುದು ಹೇಗೆ? ಎಂದು ಕಳವಳದಿಂದ ಚಿಂತಿಸುತ್ತಾ ಕುಳಿತಿದ್ದನು.

ಕೌರವೇಶ್ವರನು ಗಂಧರ್ವರಾಜನ ಕೈಗೆ ಸಿಕ್ಕಿ, ಕಟ್ಟುಪಡೆದುದನ್ನು ನೋಡಿ ಅವನ ಸೇನೆಯೆಲ್ಲವೂ ಗಾಬರಿಗೊಂಡು ದಿಕ್ಕುಪಾಲಾಗಿ ಓಡಿಹೋಯಿತು. ಕುದುರೆಗಳೆಲ್ಲಾ ಚೆಲ್ಲಾಪಿಲ್ಲಿಯಾಗಿ ಸರಿದುವು. ಆನೆಯ ಮಾವಟಿಗರು ಕಾಲಿಗೆ ಬುದ್ಧಿ ಹೇಳಿದರು. ಕರ್ಣಾದಿ ವೀರರು ತಲೆತಪ್ಪಿಸಿಕೊಂಡು ಅದೃಶ್ಯರಾದರು. ರಾಣೀವಾಸದವರನ್ನು ವಿಚಾರಿಸತಕ್ಕವರೇ ಇರಲಿಲ್ಲ. ಆಗ ದುರ್ಯೋಧನನ ಹೆಂಡತಿಯಾದ ಭಾನುಮತಿಯೇ ಮೊದಲಾದ ಸ್ತ್ರೀಜನರು ತಮ್ಮ ತಲೆಗಳನ್ನು ಕೆದರಿಕೊಂಡು ಗೋಳಾಡುತ್ತಾ "ಅಯ್ಯೋ! ನಮಗೆ ಎಂತಹ ಕಷ್ಟ ಸಂಭವಿಸಿತು! ಶಕುನಿ ಕ

ರ್ಣಾದಿ ವೀರರು ಮಹಾರಾಜನನ್ನು ಗಂಧರ್ವರಾಜನಿಗೆ ಒಪ್ಪಿಸಿ, ನಮ್ಮ ನ್ನು ಕಾಡುಪಾಲಾಗಿ ಮಾಡಿಬಿಟ್ಟು ಓಡಿಹೋದರಲ್ಲಾ ! ದ್ರೋಣಭೀಷ್ಮಾದಿ ಹಿರಿಯರಿದ್ದರೆ ಹೀಗೆ ಆಗುತ್ತಲಿತ್ತೆ ? ಧರ್ಮಾತ್ಮನಾದ ಯುಧಿಷ್ಠಿರನ ಆಶ್ರಮವು ಯಾವುದು ? ಆತನ ಮರೆ ಹೊಕ್ಕಾದರೂ ನಮ್ಮ ಪತಿಯನ್ನು ಬಿಡಿಸಿಕೊಳ್ಳುವ ಪ್ರಯತ್ನ ಮಾಡೋಣ'' ಎಂದು ಒದರುತ್ತಾ ಸಖಿಯರನ್ನೂ, ಕುಮಾರಿಯರನ್ನೂ, ಓರಗಿತ್ತಿಯರನ್ನೂ ಕರೆದುಕೊಂಡು, ಧರ್ಮರಾಯನಿದ್ದ ತಪೋವನವನ್ನು ಹುಡುಕಿಕೊಂಡು ಬಂದು ಆ ಮಹಾತ್ಮನ ಕಾಲುಗಳಲ್ಲಿ ಬಿದ್ದು, ''ಭಾವಾಜೀ ! ಶರಣಾಗತಳಾಗಿ ಅನಾಥಳಾಗಿ ಬಂದಿರುವ ನನ್ನನ್ನು ರಕ್ಷಿಸು. ನಾನು ಕೆಟ್ಟುಹೋದೆನು. ನನ್ನ ಪತಿಯೇ ಮೊದಲಾದ ಕೌರವರು ಅತಿ ದುಷ್ಟರು. ನೀನು ಸಜ್ಜನ ಶಿರೋಮಣಿಯು. ಅಜಾತಶತ್ರುವೆಂದು ಹೆಸರುಗೊಂಡಿರುವೆ. ಧರ್ಮಜ್ಞನಾದ ನಿನಗೆ ತಿಳಿಯದ ವಿಷಯವು ಯಾವುದಿದೆ ? ನಾವು ನಿಮ್ಮವರಿಗೆ ಮಾಡಿರುವ ಅಪರಾಧಗಳು ಲೋಕಪ್ರಸಿದ್ಧವಾಗಿರುವುದರಿಂದ ಅವುಗಳನ್ನೀಗ ಹೇಳಲಿಕ್ಕೆ ಸಮಯವಿಲ್ಲ. ಹಾಲು ಹುಳಿಗೆ ಹೊರುವಂತೆ ಕ್ಷೀರಸಮುದ್ರವು ಅಂಜುವುದೆ ? ನಮ್ಮವರನ್ನು ಗಂಧರ್ವರು ಸೆರೆಹಿಡಿದು ಸೆಳೆದೊಯ್ಯುತ್ತಿರುವರು. ಅವರನ್ನು ಬಿಡಿಸಿಕೊಟ್ಟು ನನ್ನ ಮಾಂಗಲ್ಯವನ್ನುಳಿಸಬೇಕೆಂದು ಮೊರೆಯಿಟ್ಟಳು.'' ಮತ್ತು ಅವಳು ಯುಧಿಷ್ಠಿರನ ಪಾದಗಳನ್ನು ತನ್ನ ಕಣ್ಣೀರಿನಿಂದ ತೊಳೆದು, ತನ್ನ ಹಣೆಯ ತಿಲಕದ ಗಂಧವನ್ನೊತ್ತಿ ಬೈತಲೆಯ ಮುತ್ತಿನಲ್ಲಿರುವ ಹೊಸ ಹೂವುಗಳಿಂದ ಅರ್ಚಿಸಿ ರೋದನಧ್ವನಿಗಳೆಂಬ ಮಂತ್ರಗಳಿಂದ ಆ ಮಹಾತ್ಮನ ಪಾದಪೂಜೆ ಮಾಡುವಳೋ ಎಂಬಂತೆ ಕಾಣುತ್ತಲಿದ್ದಿತು.

ಬಳಿಕಲಾ ಭಾನುಮತಿಯು ದ್ರೌಪದಿಯನ್ನು ನೋಡಿ, ಆಕೆಗೆ ಕೈಮುಗಿದು ಪಾದಗಳಿಗೆ ನಮಸ್ಕರಿಸಿ, ''ಭಾವನವರಿಗೆ ನನ್ನ ಮೊರೆಯನ್ನು ಅರಿಕೆಮಾಡಿ ನನ್ನ ಮಾಂಗಲ್ಯವನ್ನು ರಕ್ಷಿಸು. ನನ್ನ ಪತಿಯೂ, ಮೈದುನನೂ ನಿನಗೆ ಬಹು ತೊಂದರೆಗಳನ್ನು ಕೊಟ್ಟರೆಂಬುದನ್ನು ಚೆನ್ನಾಗಿ ಬಲ್ಲೆನು. ಅವುಗಳನ್ನು ನಿನ್ನ ಮನಸ್ಸಿನಲ್ಲಿಡಬೇಡವಮ್ಮಾ ! ಶ್ರೀಗಂಧವನ್ನು ನೋಯಿಸಿದಷ್ಟೂ ಅದರ ಗುಣವು ಹೆಚ್ಚುತ್ತಿರುವುದೇ

ಹೊರತು ತಗ್ಗುವುದಿಲ್ಲವಷ್ಟೆ! ಈ ವಿಪತ್ಕಾಲದಲ್ಲಿ ಅನಾಥಳಾದ ನನ್ನ ನ್ನು ರಕ್ಷಿಸಬೇಕು. ತಾಯಿ!” ಎಂದು ಬಹು ದೈನ್ಯದಿಂದ ಬೇಡಿಕೊಳ್ಳುತ್ತಲಿದ್ದಳು.

ಆಗ ಯುಧಿಷ್ಠಿರನ ಕಣ್ಣುಗಳಿಂದ ಅಶ್ರುಧಾರೆಗಳು ಧಾರಾಳವಾಗಿ ಸುರಿಯುತ್ತಲಿದ್ದುವು. ಮೈಯೆಲ್ಲಾ ಪುಳಕದಿಂದ ರೋಮಾಂಚವುಂಟಾಯಿತು. ಆಗಲಾ ಮಹಾತ್ಮನು ಭಾನುಮತಿಯನ್ನು ನೋಡಿ “ಮಗಳೇ ಚಿಂತಿಸಬೇಡ. ಸಮಾಧಾನ ತಂದುಕೋ. ನಿನ್ನ ಪತಿಯು ನನಗೆ ತಮ್ಮನಲ್ಲವೆ? ಅವನನ್ನು ಸೆರೆಯಿಂದ ಬಿಡಿಸದೆ ಸುಮ್ಮನೆ ನೋಡಿಕೊಂಡಿದ್ದರೆ ನಮ್ಮ ದೊಡ್ಡಪ್ಪನು ಏನೆಂದಾನು? ನಿನ್ನ ಪತಿಯು ಬಂಧನವನ್ನು ಬಿಡಿಸಿ ಇಲ್ಲಿಗೆ ಕರೆತರಿಸುವೆನು. ಏಳಮ್ಮಾ” ಎಂದು ಸಂತೈಸಿದನು, ಬಳಿಕ ಭೀಮನ ಕಡೆಗೆ ತಿರುಗಿ ನೋಡಿ ಇಂತೆಂದನು.

ತಮ್ಮಾ! ಕುರುಪತಿಯ ಅವಸ್ಥೆಯನ್ನು ಕೇಳಿದೆಯಾ? ನಮ್ಮ ಆಶ್ರಮದಲ್ಲಿಯೇ ಅವರಿಗೆ ಇಂತಹ ಕಷ್ಟ ಸಂಭವಿಸಿರುವುದನ್ನು ಕೇಳಿಕೊಂಡು ನಾವು ಸ್ಥೈರಣೆಯಿಂದ ಸುಮ್ಮನಿರಬಹುದೇ? ನೀನು ಬೇಗ ಹೋಗಿ ರಾಜಾಧಿರಾಜನಾದ ಸುಯೋಧನನನ್ನು ಬಂಧನದಿಂದ ಬಿಡಿಸಿ ಕರೆದುಕೊಂಡು ಬಾ.

ಭೀಮ:—ಅಣ್ಣಯ್ಯಾ, ಬಲು ಚೆನ್ನಾಗಿ ಹೇಳಿದೆ! ನೀತಿಶಾಸ್ತ್ರದ ಮರ್ಯಾದೆ ತಪ್ಪದೆ ವಿಚಾರ ಮಾಡಿ ನಡೆಯಬಲ್ಲವರೇ ಪ್ರಾಜ್ಞರೆನಿಸುವರು. ನಮಗೆ ಪರಮ ದ್ರೋಹಿಯಾದ ಆ ದುರ್ಯೋಧನನನ್ನು ನಾವೇ ಹುಡುಕಿಕೊಂಡು ಹೋಗಿ ಶಿಕ್ಷಿಸಬೇಕಾಗಿದ್ದಿತು. ನಾವು ಮಾಡಬೇಕಾಗಿದ್ದ ಕೆಲಸವನ್ನು ಗಂಧರ್ವರೇ ಮಾಡಿಬಿಟ್ಟರು. ನಮಗೆ ಈ ಕಷ್ಟವೇ ತಪ್ಪಿತು. ಇದಕ್ಕಾಗಿ ನಾವು ಸಂತೋಷ ಪಟ್ಟು ಆ ಗಂಧರ್ವ ರಾಜನಿಗೆ ಕೃತಜ್ಞತೆಯನ್ನು ತೋರಿಸಬೇಕು. ಆ ಖೂಳನನ್ನು ಅವರು ಬಂದಿಯಾಗಿ ಹಿಡಿದುಕೊಂಡು ಹೋದುದರಿಂದ ನಮಗೆ ಸಂಭವಿಸಿದ ನಷ್ಟವೇನು? ಇದಕ್ಕೆ ನಾವೇನೂ ಚಿಂತಿಸಬೇಕಾಗಿಲ್ಲ. ‘ಸಂಕಟ ಬಂದಾಗ ವೆಂಕಟರಮಣ’ ಎಂಬ ಗಾಥೆಯಂತೆ ಈ ಹೆಂಗಸರು ತಮ್ಮ ಕಷ್ಟಕಾಲದಲ್ಲಿ ಬಂದು ಕಾಲಿಗೆ ಬಿದ್ದಮಾತ್ರದಿಂದಲೇ ಇವರು ನಿಷ್ಕಪಟಗಳೆಂದು

ತಿಳಿದೆಯಾ? ಸ್ವಲ್ಪಹೊತ್ತಿಗೆ ಮುಂಚೆ ಇದೇ ಹೆಂಗಸರು ಮಾಡಿದ ಚೇಷ್ಟೆಗಳೆಲ್ಲವೂ ನಿನ್ನ ಕಿವಿಯಲ್ಲಿ ಬಿದ್ದಿರಲಿಲ್ಲವೇ? ಅವುಗಳನ್ನು ಇಷ್ಟು ಬೇಗನೆ ಮರೆತುಬಿಟ್ಟೆಯಾ? ಅವರು ತಮ್ಮ ದುಷ್ಕೃತ್ಯದ ಫಲವನ್ನು ತಾವೇ ಅನುಭವಿಸಲಿ. ನಮಗೆ ನಮ್ಮ ಭೂಮಿಯಲ್ಲಿಯೇ ಭಾಗವಿಲ್ಲವೆಂದು ಅವರು ಹೇಳುತ್ತಿರುವಾಗ ಅವರ ಕಷ್ಟಸುಖಗಳಿಗೆ ನಾವು ಭಾಗಿಗಳಾಗುವುದು ಯಾವ ನ್ಯಾಯವು? ಈ ಸುದ್ದಿ ಬಿಡಿರಿ.

ಯುಧಿ:—ತಮ್ಮಾ, ಹಾಗಲ್ಲ, ಕೇಳು. ತಮಗೆ ಅಪಕಾರ ಮಾಡಿದವರಿಗೆ ಉಪಕಾರ ಮಾಡುವುದೂ, ಗುಣಹೀನರಲ್ಲಿ ಗುಣವನ್ನು ತೋರಿಸುವುದೂ ಉತ್ತಮ ಪುರುಷರ ಲಕ್ಷಣವು ಕಲ್ಲಿನಿಂದ ಹೊಡೆದವರನ್ನು ಬೆಣ್ಣೆಯಿಂದ ಹೊಡೆಯಬೇಕು ಕುರುರಾಜನಾದ ಸುಯೋಧನನು ಅನ್ಯನೇ! ಅವನೂ ನಿನ್ನಂತೆಯೇ ನಮ್ಮ ತಮ್ಮನಲ್ಲವೇ? ಅವನು ನಮಗೆ ಶತಾಪರಾಧಗಳನ್ನು ಮಾಡಿದ್ದರೂ ಈ ವೇಳೆಯಲ್ಲಿ ಅವುಗಳನ್ನು ನಾವು ಸ್ಮರಿಸಲೇ ಬಾರದು. ನಾವೆಲ್ಲರೂ ಒಂದೇ ಭರತವಂಶದಲ್ಲಿ ಹುಟ್ಟಿದವರು. ಅವರ ಮಾನವೇ ನಮ್ಮ ಮಾನವು. ಅವರ ಪರಾಜಯವೇ ನಮ್ಮ ಪರಾಜಯವು. ವೀರರಾದ ಶತ್ರುಗಳ ಸಂಗಡ ಕಾದಬೇಕಾಗಿದ್ದರೆ ನಾವು ನೂರಯ್ದು ಮಂದಿಯೂ ಒಂದಾಗಿ ಸೇರಿ ಹೋಗಿ ಶತ್ರುನಿಗ್ರಹ ಮಾಡಬೇಕು. ನಮ್ಮ ನಮ್ಮಲ್ಲಿ ಪರಸ್ಪರ ಕಾದಬೇಕಾದರೆ ಅವರು ನೂರು ಮಂದಿ ಬೇರೆ—ನಾವು ಅಯ್ವರೇ ಬೇರೆ ಎಂದು ತಿಳಿಯತಕ್ಕದು. ಯಾವನೇ ಆಗಲಿ ದೈನ್ಯದಿಂದ ಬಂದು ಬೇಡಿದರೆ ಅವನಿಗೆ ನೀಡುವುದೇ ಧರ್ಮವು. ಶತ್ರುವಾಗಲಿ ಮಿತ್ರನೇ ಆಗಲಿ, ಬಂದು ಸೆಣಸಿದರೆ ಅವನೊಂದಿಗೆ ಕಾದುವುದೇ ರಾಜನೀತಿಯು. ಮರೆಹೊಕ್ಕವನು ಎಂತವನೇ ಆಗಿರಲಿ, ಅವನನ್ನು ರಕ್ಷಿಸುವುದೇ ಕ್ಷಾತ್ರಧರ್ಮವು. ನಮ್ಮ ದುಷ್ಕರ್ಮ ಫಲದಿಂದ ನಾವು ವನವಾಸ ಕ್ಲೇಶಗಳನ್ನು ಅನುಭವಿಸಬೇಕಾಗಿ ಬಂದಿತು. ಇದರಲ್ಲಿ ಕುರುಪತಿಯ ದೋಷವೇನೂ ಇಲ್ಲವು ಭೀಮಣ್ಣಾ! ನೀನು ಹೋಗಿ ಸುಯೋಧನಾದಿಗಳನ್ನು ಸೆರೆಯಿಂದ ಬಿಡಿಸಿ ಬಾ.

ಈ ಮಾತುಗಳನ್ನು ಕೇಳಿ ಭೀಮಸೇನನು ಯಾವ ಉತ್ತರವನ್ನೂ ಹೇಳದೆ ಮುಖವನ್ನು ಬೇರೆ ಕಡೆಗೆ ತಿರುಗಿಸಿಕೊಂಡನು ಅದನ್ನು ಕಂಡು ಯುಧಿಷ್ಠಿರನು ಅರ್ಜುನನ ಕಡೆ ತಿರುಗಿ—

ಯುಧಿ:—ತಮ್ಮಾ ಅರ್ಜುನಾ! ಭೀಮಸೇನನಿಗೆ ಕ್ರೋಧಾಗ್ನಿಯು ಇನ್ನೂ ಆರಲಿಲ್ಲ. ನೀನಾದರೂ ಬೇಗ ಹೋಗಿ ಕುರುರಾಜನನ್ನು ಬಿಡಿಸಿಕೊಂಡು ಬರುವೆಯಾ? ಆತನನ್ನು ಇಲ್ಲಿಗೆ ಕರೆದು ತಂದ ಹೊರತು ನಾನು ಭೋಜನಾ ಮಾಡಲೊಲ್ಲೆನು. ನಿನ್ನ ಅಭಿಮತವೇನು?

ಅದನ್ನು ಕೇಳಿ ಅರ್ಜುನನು ಮಹಾಪ್ರಸಾದವೆಂದು ಹಿರಿಯಣ್ಣನ ಆಜ್ಞೆಯನ್ನು ಶಿರಸಾ ವಹಿಸಿ, "ಆರ್ಯರೇ! ಭೀಮಣ್ಣನ ಬಿರುನುಡಿಗಳಿಗೆ ಕೋಪಿಸಿಕೊಳ್ಳಬೇಡಿರಿ ಅವನ ಸ್ವಭಾವವೇ ಒರಟಾದುದು. ಮನ್ನಿಸಿರಿ. ನಾನೇ ಹೋಗಿ ಬರುವೆನು."

ಎಂದು ಹೇಳಿ ಧನುರ್ಬಾಣಗಳನ್ನು ಧರಿಸಿ, ಬೇಗ ಬೇಗ ನಡೆದು ಆ ಗಂಧರ್ವ ರಾಜನ ಬೆಂಬತ್ತಿ ಹೋದನು. ದಾರಿಯಲ್ಲಿ ಆ ವೀರನನ್ನು ತಡೆಯ ಬಂದ ಗಂಧರ್ವರೆಲ್ಲಾ ಯಮಲೋಕದ ಆತಿಥ್ಯವನ್ನು ಪಡೆಯಲಿಕ್ಕೆ ಹೋದರು. ಚಿತ್ರಸೇನನು ಆ ಕುಂತೀಪುತ್ರನಿಗೆ ಎದುರಾಗಿ ನಿಂತು ಇಂತೆಂದನು.

ಚಿತ್ರ:—ಎಲೈ ಅರ್ಜುನನೇ, ನಿನಗೇನು ಹುಚ್ಚು ಹಿಡಿದಿದೆಯೋ. ನೀನು ಎಂತಹ ಮೂರ್ಖನು! ಹುಲಿಯನ್ನು ಕೊಂದುಹಾಕಿದರೆ ಹಸುಗಳೇತಕ್ಕೆ ಚಿಂತಿಸಬೇಕು? ಕಾಗೆಗಳಿಗೆ ನೋವಾದರೆ ಕೋಗಿಲೆ ವ್ಯಸನಪಡಬೇಕೆ? ದುಷ್ಟರನ್ನು ಶಿಕ್ಷಿಸಿದರೆ ಸಜ್ಜನರಿಗೆ ತಲೆನೋವು ಬರುವುದೆ? ನಾವು ಕೌರವರನ್ನು ಕಟ್ಟಿ ಕರೆದೊಯ್ದರೆ ನಿಮಗೆ ಹೊಟ್ಟೆಶೂಲೆಯುಂಟಾಯಿತೆ? ಛೀ ಛೀ! ಎಂತಹ ಅಪ್ರಬುದ್ಧರಯ್ಯಾ ನೀವು! ದಾರಿಯಲ್ಲಿ ಹೋಗುತ್ತಿರುವ ಮಾರಿಯನ್ನು ಯಾರಾದರೂ ತಮ್ಮ ಮನೆಗೆ ಬಾರೆಂದು ಕರೆಯುವರೇ? ನೀರಿನಲ್ಲಿ ನೆನೆದು ಆರುತ್ತಿರುವ ಕೆಂಡವನ್ನು ಉರಿಗೊಳಿಸಿ ತಲೆಯಲ್ಲಿ ಮುಡಿದುಕೊಳ್ಳುವ ಹೆಡ್ಡರುಂಟೆ? ಬಲು ಚೆನ್ನಾಯಿತು! ಶತ್ರುವಿನ ಆಯುಧವು ಮುರಿದುಹೋಗಿ ರಿಕ್ತಹಸ್ತನಾಗಿರುವಾಗ ತನ್ನ ಕೈಯ್ಯಲ್ಲಿರುವ ಆಯುಧವನ್ನು ಅವನ ಕೈಗೆ ಕೊಟ್ಟು ಅವನಿಂದ ತಲೆ ಹೊಡಿಸಿಕೊಳ್ಳಬಹುದೆ? ಈ ಕೌರವನು ಹೋದರೆ ನಿಮಗೆ ಸುಖವೇ ಅಲ್ಲವೇ? ಸಾಕು ಸಾಕು. ಸುಮ್ಮನೆ ನಿಮ್ಮ ಆಶ್ರ

ಮಕ್ಕೆ ಹಿಂದಿರುಗಿ ಹೋಗು. ಮನೆಯಲ್ಲಿ ಕಾಡುತ್ತಿರುವ ಹಾವನ್ನು ಹದ್ದು ಬಂದು ಎತ್ತಿಕೊಂಡು ಹೋದರೆ ಅದಕ್ಕಾಗಿ ಅಳುವವರುಂಟೆ?

ಅರ್ಜು:—ಎಲೈ ಚಿತ್ರಸೇನನೇ. ನೀನು ನಟ್ಟುವನಲ್ಲವೆ? ನಿಮ್ಮ ಜನರು ಮಾತಿನಲ್ಲಿ ಬಲು ಜಾಣರು. ಆ ಕುಲದಲ್ಲಿ ಹುಟ್ಟಿದ ನೀನೂ ಬಳ್ಳಿಯ ಚತುರನೆಂದು ತೋರುತ್ತಿದೆ. ಈ ರಾಜನನ್ನು ಬಿಡಿಸಿಕೊಂಡು ಬರಬೇಕೆಂದು ನಮ್ಮಣ್ಣನ ಆಜ್ಞೆಯಾಗಿರುವುದರಿಂದ ಅದರಂತೆ ಬಂದಿರುವೆನು. ಇದು ಧರ್ಮಾಧರ್ಮ ಪ್ರಸಂಗವಲ್ಲ. ಆ ವಿಚಾರವೂ ನನಗೆ ತಿಳಿಯದು. ಈ ಕಾರ್ಯವು ಧರ್ಮವೇ ಆಗಿರಲಿ, ಅಧರ್ಮವೇ ಆಗಿರಲಿ. ಜ್ಯೇಷ್ಠಭ್ರಾತೃವಿನ ಆಜ್ಞೆಯೇ ನನಗೆ ವೇದೋಕ್ತ ಧರ್ಮವಾಗಿಯೂ, ಅನುಷ್ಠೇಯವಾಗಿಯೂ ಇರುವುದು. ಅಯ್ಯಾ, ಇನ್ನು ಹೆಚ್ಚಾಗಿ ಹರಟಿ ಬಾಯಿ ನೋಯಿಸಿಕೊಳ್ಳಬೇಡ. ಈ ಕುರುರಾಜನನ್ನು ಇಲ್ಲಿಯೇ ಬಿಟ್ಟು ಬಿಟ್ಟು ನಿನ್ನ ಪಟ್ಟಣಕ್ಕೆ ಹೋಗು. ಬಿಡದೆ ತಪ್ಪಿದರೆ ನಿನ್ನನ್ನು ಜೀವದೊಂದಿಗೆ ಇಲ್ಲಿಂದ ಬಿಡಲಾರೆನೆಂದು ನಿಶ್ಚಯವಾಗಿ ತಿಳಿ. (ಎಂದು ಆ ಗಂಧರ್ವನ ಮೇಲೆ ಬಾಣಗಳನ್ನು ಪ್ರಯೋಗಿಸಿದನು)

ಚಿತ್ರ:—ಅಯ್ಯಾ ವೀರನೆ! ಶ್ರೇಷ್ಠವಾಗಿರುವ ಈ ಬಾಣಗಳನ್ನು ವ್ಯರ್ಥವಾಗಿ ಏತಕ್ಕೆ ಹಾಳು ಮಾಡಿಕೊಳ್ಳುವೆ? ನಾನು ವಿನೋದಾರ್ಥವಾಗಿ ಈ ಕೆಲಸ ಮಾಡಿರುವೆನೆಂದು ತಿಳಿಯಬೇಡ. ಇವನ ದುಷ್ಕೃತಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಬೇಕೆಂತಲೂ, ಇವನನ್ನು ಪಾಶಬದ್ಧನನ್ನಾಗಿ ಮಾಡಿ ತನ್ನ ಬಳಿಗೆ ತರಬೇಕೆಂತಲೂ ತ್ರಿಲೋಕಾಧಿಪತಿಯಾದ ದೇವೇಂದ್ರನ ಅಪ್ಪಣೆಯಾದುದರಿಂದ ಹಿಡಿದು ಕಟ್ಟಿಕೊಂಡೊಯ್ಯುತ್ತಿರುವೆನು. ನಿಮ್ಮ ತಂದೆಯ ಆಜ್ಞೆಯು ನಿನಗೆ ಮಾನ್ಯವೇ ಅಲ್ಲವೆ?

ಅರ್ಜು:—ಅಯ್ಯಾ ಚಿತ್ರಸೇನಾ! ಕುರುಪತಿಯನ್ನು ಕಟ್ಟಿ ಕರೆದು ತರಬೇಕೆಂದು ನಿಮ್ಮೊಡೆಯನಾದ ಇಂದ್ರನು ನಿನಗೆ ಆಜ್ಞೆ ಮಾಡಿದನು. ಇವನನ್ನು ಬಂಧನದಿಂದ ಬಿಡಿಸಿ ಕರೆದುಕೊಂಡು ಬರಬೇಕೆಂದು ನಮ್ಮ ಅಣ್ಣಯ್ಯನು ನನಗೆ ಅಪ್ಪಣೆ ಕೊಟ್ಟಿರುವನು. ನಿನ್ನ ಕಾ

ರ್ಯ ನೆರವೇರಿಸಿ ನೀನು ಕೃತಾರ್ಥನಾದೆ. ಇನ್ನು ನನ್ನ ಕಾರ್ಯವು ನೆರವೇರಿದರೆ ಅಲ್ಲವೇ ನಾನು ಕೃತಾರ್ಥನಾಗತಕ್ಕದ್ದು?

ಚಿತ್ರ:—ಮಿತ್ರನೇ. ನಿನ್ನ ಮಾತು ವಾಸ್ತವವೇ ಸರಿ. ಯೋಗ್ಯರಿಗೆ ಉಪಕಾರ ಮಾಡುವುದೇ ಪರಮಧರ್ಮವು. ಪರಪೀಡನವು ಪಾಪಹೇತುವೇ ಸರಿ. ಆದರೆ ಧರ್ಮಸೂಕ್ಷ್ಮವನ್ನು ಹೇಳುವೆನು ಕೇಳು. ಹುಲಿಯನ್ನು ಮನೆಗೆ ಕರೆದೊಯ್ದು ಮಗ್ಗುಲಲ್ಲಿ ಮಲಗಿಸಿಕೊಳ್ಳುವುದು ಹೆಡ್ಡತನವಲ್ಲವೆ? ಹಾವಿಗೆ ಹಾಲೆರೆದು ಸಾಕಿದರೆ ವಿಷವು ಹೆಚ್ಚದೆ ತಗ್ಗುವುದೆ? ಎಲೈ ವೀರನೆ, ದುಷ್ಟರಿಗೆ ಕಷ್ಟಬಂದಾಗ ಉಪಕಾರ ಮಾಡಬಾರದು. ಪ್ರಾಜ್ಞನಾದ ನಿನಗೆ ಹೆಚ್ಚಾಗಿ ಹೇಳಬೇಕಾದುದಿಲ್ಲ. ನೀನು ಸುಮ್ಮನೆ ಮನೆಗೆ ಹೋಗು.

ಅರ್ಜು:—ಅಯ್ಯಾ! ನಿನಗೆ ಬೇಕಾದ ಹಾಗೆಲ್ಲಾ ಹೇಳಿಕೋ. ನಾನು ಎಂದಿಗಾದರೂ ಅಣ್ಣನ ಆಜ್ಞೆಯನ್ನು ಮೀರತಕ್ಕವನೇ ಅಲ್ಲ. ನೀನು ಈ ರಾಜನನ್ನು ಸೆರೆಯಿಂದ ಬಿಡುವುದಾದರೆ ಧರ್ಮಮಾರ್ಗದಿಂದ ಬಿಟ್ಟುಬಿಡು. ಹಾಗೆ ಬಿಡದೆ ಹೋದರೆ ನಿನ್ನ ಉಸಿರಿನ ಸೆರೆಯನ್ನು ನಿನ್ನ ದೇಹದಿಂದ ಬಿಡಿಸಿ ತರುವಾಯ ಈ ಕುರುಪತಿಯ ಸೆರೆಯನ್ನು ಬಿಡಿಸುವೆನು. ಇದಕ್ಕೆ ತಪ್ಪುವುದಿಲ್ಲ. ನೋಡುತ್ತಿರು.

ಎಂದು ಆ ಚಿತ್ರಸೇನನ ಮೇಲೆ ಕ್ರೂರವಾದ ಬಾಣಗಳನ್ನು ಪ್ರಯೋಗಿಸಿದನು. ಅವನೂ ದಿವ್ಯಾಸ್ತ್ರಗಳಿಂದ ಅರ್ಜುನನ ಬಾಣಗಳನ್ನು ಖಂಡಿಸಿ, ಅಮೋಘವಾದ ಬಾಣಗಳನ್ನು ಅವನ ಮೇಲೆ ಪ್ರಯೋಗಿಸಿ, ಸ್ವರ್ಗಲೋಕದ ಕಡೆಗೆ ಹೊರಟನು. ಅರ್ಜುನನು ಅವನು ಅಲ್ಲಿಂದ ಮುಂದಕ್ಕೆ ಹೊರಡದಂತೆ ಶರಪಂಜರವನ್ನು ಬಿಗಿದು ಕಟ್ಟಿದನು. ಆಗ ಚಿತ್ರಸೇನನು ಅರ್ಜುನನನ್ನು ನೋಡಿ, ಅಯ್ಯಾ ವೀರಾಗ್ರಣಿಯೇ ನೀನು ಸುಮ್ಮನೆ ಏಕೆ ಗಾಸಿಮಾಡಿಕೊಳ್ಳುವೆ? ಇವನನ್ನು ನಾನೇ ತಂದು ಯುಧಿಷ್ಠಿರನಿಗೆ ಒಪ್ಪಿಸಿ ಹೋಗುವೆನು. ಆತನ ಇಷ್ಟಬಂದಂತೆ ಮಾಡಿಕೊಳ್ಳಲಿ. ಎಂದು ಹೇಳಿ ಅವರನ್ನೆಲ್ಲಾ ಕರೆದುಕೊಂಡು ಪಾಂಡವರ ಆಶ್ರಮಕ್ಕೆ ಬಂದನು. ಅವನು ಯುಧಿಷ್ಠಿರನ ಬಳಿಗೆ ಬಂದು ಆತನಿಗೆ ವಂದಿ

ಸಿ, “ ಎಲೈ ಮಹಾರಾಜನೇ ! ನಿನ್ನ ತಮ್ಮನೇ ಯುದ್ಧದಲ್ಲಿ ಮೇಲುಗೈ ಯವನಾಗಿ ನನ್ನನ್ನು ಸೋಲಿಸಿ. ವಿಜಯನೆಂಬ ಹೆಸರನ್ನು ಸಾರ್ಥಕಗೊಳಿಸಿದನು. ಇಗೋ ಈ ಕುರುಪತಿಯು ನನ್ನ ಕೈಗೆ ಸೆರೆ ಸಿಕ್ಕಿದ್ದನು. ಇವನನ್ನು ನಿನ್ನ ವಶಕ್ಕೆ ಒಪ್ಪಿಸಿದ್ದೇನೆ. ಇವನೂ, ಇವನ ತಮ್ಮಂದಿರೂ ಮೂರ್ಖಾಗ್ರೇಸರರು. ಕೈಗೆ ಸಿಕ್ಕಿರುವ ಇವರನ್ನು ಹಿಂದಕ್ಕೆ ಬಿಟ್ಟು ಬಿಟ್ಟರೆ ನಿಮಗೆ ಇವನು ಮತ್ತೆಷ್ಟು ಕೇಡುಮಾಡದೆ ಬಿಡನು. ಇಷ್ಟರ ಮೇಲೆ ನಿಮ್ಮ ಚಿತ್ತ ಬಂದಂತೆ ಮಾಡಬಹುದು” ಎಂದು ಹೇಳಿದನು. ಅದಕ್ಕೆ ಯುಧಿಷ್ಠಿರನು “ ಅಯ್ಯಾ ಗಂಧರ್ವರಾಜನೇ, ಕೈಸೆರೆ ಸಿಕ್ಕಿದ್ದ ಈತನನ್ನು ಕೊಂದುಹಾಕದೆ ಜೀವದೊಂದಿಗೆ ಕಾಪಾಡಿದುದಕ್ಕಾಗಿ ನಿನಗೆ ವಂದಿಸುವೆನು. ಈ ಕೌರವರಿಂದ ನಮಗೆ ಹಿತವೇ ಆಗಲಿ, ಅಹಿತವೇ ಆಗಲಿ, ಏನು ಸಂಭವಿಸಿದರೂ ಅದನ್ನು ಗಣಿಸದೆ ರಕ್ಷಿಸಬೇಕಾಗಿದೆ. ಶರಣಾಗತರನ್ನು ಪಾಲಿಸುವುದೇ ರಾಜರ ಪ್ರಥಮ ಧರ್ಮವು. ಈ ರಾಜಕುಮಾರರನ್ನು ಬಿಡಿಸಿ ಬಿಡುವೆನು. ಮುಂದೆ ತಮ್ಮ ಇಷ್ಟದಂತೆ ಮಾಡಿಕೊಳ್ಳಲಿ.

ಹೀಗೆ ಹೇಳಿ, ಯುಧಿಷ್ಠಿರನು ಆ ಚಿತ್ರಸೇನನಿಗೆ ಸನ್ಮಾನಗಳನ್ನು ಮಾಡಿ ಕಳುಹಿದನು. ಅವನು ಸ್ವರ್ಗಲೋಕಕ್ಕೆ ಹೋಗಿ ದೇವೇಂದ್ರನಿಗೆ ಇಲ್ಲಿ ನಡೆದ ಸಮಾಚಾರವನ್ನೆಲ್ಲ ಶ್ರುತಪಡಿಸಲು ಇಂದ್ರನು ಯುಧಿಷ್ಠಿರನ ಧರ್ಮಬುದ್ಧಿಗೆ ಸಂತೋಷಿಸಿ ಹೊಗಳಿದುದಲ್ಲದೆ ಯುದ್ಧದಲ್ಲಿ ಸತ್ತುಬಿದ್ದಿದ್ದ ಗಂಧರ್ವರನ್ನೆಲ್ಲಾ ಅಮೃತದಿಂದ ಬದುಕಿಸಿದನು.

ಯುಧಿಷ್ಠಿರನ ಪಾದಗಳ ಮೇಲೆ ಬಿದ್ದಿದ್ದ ಕೌರವನ ತೋಳುಗಳು ಹಿಂದಕ್ಕೆ ಬಿಗಿಸಲ್ಪಟ್ಟಿದ್ದುವು. ಮುಖವು ಕಪ್ಪಾಗಿ ತಲೆಯು ಕರ್ಕಶವಾಗಿತ್ತು. ಕಣ್ಣಿನಿಂದ ನೀರು ಸುರಿಯುತ್ತಿತ್ತು. ಅವನ ತಮ್ಮಂದಿರ ಗತಿಯೂ ಹೀಗೆಯೇ ಆಗಿತ್ತು. ಅದನ್ನು ನೋಡಿ ಧರ್ಮರಾಯನು ಬಹಳವಾಗಿ ಮರುಗಿ, ದ್ರೌಪದಿಯನ್ನು ಕರೆದು “ಎಲೌ ಪಾಂಚಾಲೀ, ಕುರುರಾಯನ ದುರವಸ್ಥೆಯನ್ನು ನೋಡಿದೆಯಾ ? ಹಂಸತೂಲಿಕಾತಲ್ಪದ ಮೇಲೆ ರಾಣಿವಾಸದವರ ಸರಸಸಲ್ಲಾಪಗಳನ್ನು ಕೇಳುತ್ತಾ ಸುಖವಾಗಿ ನಿದ್ರಿಸುತ್ತಿದ್ದ ಮಹಾರಾಜನಿಗೆ ಎಷ್ಟರ ಕಷ್ಟಬಂತು ? ಇವನ ಕಟ್ಟುಗಳನ್ನು

ಬಿಚ್ಚಿ ಬಿಟ್ಟುಬಿಡು'' ಎಂದು ನಿಯಮಿಸಿದನು. ಆಗ ಪಾಂಚಾಲಿಯು ಸುಯೋಧನನ ಅವಸ್ಥೆಯನ್ನು ನೋಡಿ ಬಹಳವಾಗಿ ನೊಂದುಕೊಂಡು, “ಅಯ್ಯೋ! ಏನಿದು! ಹಾಳುವಿಧಿಗೆ ಸ್ವಲ್ಪವಾದರೂ ವಿವೇಕಬೇಡವೆ ? ಚಕ್ರವರ್ತಿಗಳಿಗೆ ಬಂಧನವನ್ನು ತಂದುಹಾಕಿತಲ್ಲ !'' ಎಂದು ಬೆರಗಿನಿಂದ ಬಲಗೈಯನ್ನು ಗಲ್ಲದ ಮೇಲೆ ಇಟ್ಟುಕೊಂಡು ಎಡಗೈಯಿಂದ ಸುಯೋಧನನ ಭುಜಗಳಿಗೆ ಕಟ್ಟಿದ್ದ ಕಟ್ಟುಗಳನ್ನು ಬಿಚ್ಚಿ, ದುಶ್ಶಾಸನನ ಬಂಧನವನ್ನೂ ಹೀಗೆಯೇ ಬಿಚ್ಚಿಬಿಟ್ಟಳು. ಉಳಿದ ಮೈದುನರ ಬಂಧನಗಳನ್ನು ಆ ಸಾಧ್ವಿಯು ತನ್ನ ಸಖಿಯರ ಕೈಯಿಂದ ಬಿಚ್ಚಿಸಿ, ಕುರುಪತಿಯನ್ನು ನೋಡಿ ನಗುತ್ತಾ ಇಂತೆಂದಳು.

“ಅಯ್ಯೋ ! ಎಂತಹ ಕಷ್ಟವಿದು ! ಚಿತ್ರಸೇನನು ನಿಮಗೆ ಈ ರೀತಿ ತೊಂದರೆಪಡಿಸಿದನೆ? ಆ ದುರಾತ್ಮನನ್ನು ಕೊಲ್ಲಿಸದೆ ಯುಧಿಷ್ಠಿರನು ಬಿಡಬಾರದಾಗಿತ್ತು. ಅಯ್ಯಾ ಸಾರ್ವಭೌಮನೇ! ನೀನು ಬಹು ನೊಂದಿರುವೆ. ನಿಮಗೆ ಉಪಚರಿಸಲು ನಮ್ಮಲ್ಲಿ ತಕ್ಕ ಸಹಾಯಗಳಿಲ್ಲ. ಮರ್ದನಕ್ಕೆ ಇಲ್ಲಿ ಜಟ್ಟಿಗಳಿಲ್ಲ. ಒತ್ತಬೇಕಾದರೆ ಕಲ್ಲುಹರಳು ಹೊರತು ಬೇರೆ ಏನೂ ಇಲ್ಲ. ಸ್ನಾನಕ್ಕೆ ಸರೋವರದ ತಣ್ಣೀರೇ ಗತಿ. ಜಿಂಕೆ, ಹುಲಿ ಮುಂತಾದವುಗಳ ಚರ್ಮಗಳೇ ನಮಗೆ ಪಟ್ಟುಪೀತಾಂಬರಗಳು. ರುದ್ರಾಕ್ಷಿಗಳೇ ನಮ್ಮ ರತ್ನಾಭರಣಗಳು. ಆಲದ ಮರದ ಕೊಂಬೆಗಳೇ ಕುದುರೆಗಳು. ಬೆಟ್ಟಗಳೇ ನಮ್ಮ ಭದ್ರಗಜಗಳು. ಕಾಡುಮರಗಳ ನೆರಳೇ ಛತ್ರಗಳು. ಎಳೆಯ ಚಿಗುರುಗಳೇ ಚಾಮರಗಳು. ಸಣ್ಣ ಮೊರಡಿಯೇ ಸಿಂಹಪೀಠವು. ಹೊಸ ಮೆಳೆಯಹೊದರೇ ನಮ್ಮ ಅರಮನೆ. ಭಾವನವರೇ, ಇಂತಹ ವಿಪತ್ತನ್ನು ಅನುಭವಿಸುತ್ತಿರುವ ನಾವು ನಿಮ್ಮನ್ನು ಗೌರವದಿಂದ ಸತ್ಕರಿಸಲಿಕ್ಕೆ ತಕ್ಕ ಸೌಭಾಗ್ಯವನ್ನು ಹತವಿಧಿಯು ಕರುಣಿಸದೆ ಹೋದನು. ನಮ್ಮ ಬಾಳು ಏತರ ಬಾಳು! ಯುಧಿಷ್ಠಿರನು ಧರ್ಮರಾಯನಾಗಿ ಕುಳಿತಿರುವನು. ಯುಕ್ತಾಯುಕ್ತ ವಿಮರ್ಶೆ ಮಾಡುವ ಭಾರ ನಿಮ್ಮದೇ ಆಗಿದೆ. ಸರ್ವವೂ ನಿಮ್ಮ ಮನಸ್ಸಿಗೆ ವೇದ್ಯವಿದೆ. ಅಬಲೆಯಾದ ನನಗೇನು ತಿಳಿಯುವುದು ?

ಹೀಗೆ ನುಡಿದ ದ್ರೌಪದಿಯ ಕಪಟನುಡಿಯನ್ನು ಕೇಳಿ ದುರ್ಯೋಧನನಿಗೆ ಎದೆಯಲ್ಲಿ ಶೂಲದಿಂದ ಇರಿದಂತೆ ಆಯಿತು. ಅದನ್ನವನು ಬಹಿರಂಗ ಪಡಿಸದೆ ತನ್ನ ಮನಸ್ಸಿನಲ್ಲಿ ಏನೇನೋ ಯೋಚಿಸುತ್ತಾ ಮೌನವಾಗಿ ತಲೆ ತಗ್ಗಿಸಿಕೊಂಡಿದ್ದನು. ಆಗ ಭಾನುಮತಿಯು ಧರ್ಮರಾಯನ ಪಾದಗಳಿಗೆ ನಮಸ್ಕಾರ ಮಾಡಿ "ಧರ್ಮಾತ್ಮನೇ! ಈ ಕಿವಿಯೋಲೆಗಳನ್ನೂ, ಮಾಂಗಲ್ಯಸೂತ್ರವನ್ನೂ ನೀನು ದಯಮಾಡಿ ಉಳಿಸಿದೆ. ನಿನ್ನ ಉಪಕಾರವನ್ನೆಂದಿಗೂ ಮರೆಯುವುದಿಲ್ಲ" ಎಂದು ಪಾದಗಳ ಮೇಲೆ ಬಿದ್ದಳು. ಆಗ ಯುಧಿಷ್ಠಿರನು ಭಾನುಮತಿಯನ್ನು ಮೇಲಕ್ಕೆತ್ತಿ, "ತಾಯೀ! ಚಿಂತಿಸಬೇಡ. ನಿನ್ನ ಭಾಗದ ದೇವರು ನಿನ್ನ ವಿಪತ್ತನ್ನು ಪರಿಹರಿಸಿದನು. ಸಮಾಧಾನ ತಂದುಕೋ" ಎಂದು ಸಂತೈಸಿ, ಕೌರವೇಶನನ್ನು ನೋಡಿ ಇಂತೆಂದನು.

ಎಲೈ ರಾಜನೇ, ಚಿಂತಿಸುವುದೇಕೆ? ನಿನಗೆ ಬಂದ ಆಪತ್ತು ನಮ್ಮದಲ್ಲವೇ? ನಮ್ಮ ಕಷ್ಟಗಳಿಗೆ ನೀವು ಬಾಧ್ಯರಲ್ಲವೇ? ಗಾಂಧಾರಿದೇವಿಯೇ ನಮ್ಮನ್ನು ಹೆತ್ತ ತಾಯಿಯೆಂದು ತಿಳಿದುಕೊಂಡಿರುವೆವು. ನೀನು ದುಶ್ಚಿತ್ತನಾಗಿರಬೇಡ. ನಿನಗೆ ಒಂದೆರಡು ಮಾತುಗಳನ್ನು ಹೇಳುವೆನು ಗ್ರಹಿಸಿ ನಡೆದುಕೊಂಡರೆ ನಿನಗೆ ಸುಖವುಂಟಾಗುವುದು. ನೀನು ದ್ರೋಣಾಚಾರ್ಯರು ಹೇಳಿದಂತೆ ಮಾಡುವುದಿಲ್ಲ. ಭೀಷ್ಮಾಚಾರ್ಯರ ಮಾತೆಂದರೆ ನೀನು ವಿಷಕ್ಕೆ ಸಮವಾಗಿ ತಿಳಿಯುತ್ತೀಯೆ. ವಿದುರನಂತು ನಿನಗೆ ವೈರಿಯೆಂತಲೇ ಭಾವಿಸಿಕೊಂಡಿರುವೆ. ಕೃಪಾಶ್ವತ್ಥಾಮರ ಹೆಸರು ಹೇಳಿದರೆ ನಿನಗೆ ಲಕ್ಷ್ಯವೇ ಇಲ್ಲ. ಇವರೈವರೂ ರಾಜಕಾರ್ಯಕ್ಕೆ ಪ್ರಾಣವಾಯುಗಳಂತೆ ಇರುವರು. ಇವರ ಉಪದೇಶದಂತೆ ನಡೆವವರಿಗೆ ಯಾವ ಕೆಡಕುಗಳೂ ಸಂಭವಿಸಲಾರವು. ಅವರನ್ನು ತಿರಸ್ಕರಿಸಿ, ಸ್ವೇಚ್ಛೆಯಾಗಿ ನಡೆದುದರಿಂದ ನಿನಗೆ ಈ ಅವಮಾನವುಂಟಾಯಿತು. ಕಳೆದುಹೋದುದನ್ನು ಒತ್ತಿಹೇಳಿ ಏಕೆ ತಲೆಗುತ್ತಬೇಕು? ಮುಂದೆಯಾದರೂ ನೀನು ಮಾಡುವ ಕಾರ್ಯದ ಮಂತ್ರಾಲೋಚನೆಗೆ ದುಷ್ಟರನ್ನು ಸೇರಿಸಿಕೊಳ್ಳದೆ, ಹಿರಿಯರ ಉಪದೇಶವನ್ನು ಪಡೆದು, ಅವರ ಇಷ್ಟಾನುಸಾರವಾಗಿ ಕೆಲಸ ಮಾಡಿದರೆ ನಿನಗೆ ಶ್ರೇಯಸ್ಸು ಉಂಟಾಗುವುದು. ಬುದ್ಧಿಯಿಂದ ನಡೆಯುತ್ತಿರು.

ಈ ಉಪದೇಶ ವಾಕ್ಯವನ್ನು ಕೇಳಿ ದುರ್ಯೋಧನನು ನಿರುತ್ತರನಾಗಿ ತಲೆಬಾಗಿಸಿಕೊಂಡನು. ಬಗೆಬಗೆಯ ಚಿಂತೆಗಳಿಂದ ಮನಸ್ಸು ಕಲುಷಿತವಾಯಿತು. ಧರ್ಮರಾಯನ ಅಪ್ಪಣೆ ಪಡೆದು ಹಸ್ತಿನಾವತಿಗೆ ಪ್ರಯಾಣ ಮಾಡಿದನು. ರಾಣಿಯರೂ ಚತುರಂಗ ಸೇನೆಯೂ ಸಂಗಡ ಹೊರಟಿತು. ಸ್ವಲ್ಪ ದೂರ ಹೋಗುವಷ್ಟರಲ್ಲಿ ಕರ್ಣಶಕುನಿಗಳೂ ಅಲ್ಲಿಗೆ ಬಂದು ಸೇರಿದರು. ಎಲ್ಲರೂ ರಾತ್ರಿ ವೇಳೆ ನಿಶ್ಶಬ್ದವಾಗಿ ಪುರಪ್ರವೇಶ ಮಾಡಿದರು. ಹಗಲು ಹೊತ್ತಿನಲ್ಲಿ ಮುಖ ತೋರಿಸಲಿಕ್ಕೆ ನಾಚಿಕೆ. ಭಟರ ಆರ್ಭಟಗಳು ಅಡಗಿಹೋದುವು ವಂದಿಮಾಗಧರ ಬಾಯಿಮುಚ್ಚಿಹೋದವು. ಪಟಹ ಮೃದಂಗಾದಿ ವಾದ್ಯಗಳು ಮೌನದೀಕ್ಷೆಯನ್ನು ವಹಿಸಿದುವು. ಆನೆ, ಕುದುರೆ, ರಥ ಇವುಗಳ ಸವಾರರು ಸ್ವಲ್ಪವೂ ಸದ್ದುಮಾಡದೆ ಸುಮ್ಮನೆ ಬರುತ್ತಿದ್ದರು.

ಆಗ ದುರ್ಯೋಧನನು ಎಲ್ಲರನ್ನೂ ರಾಜಧಾನಿಗೆ ಕಳುಹಿಬಿಟ್ಟು ತಾನೊಬ್ಬನೇ ಯಮುನಾನದಿಯ ತೀರದಲ್ಲಿ ಚಿಂತಿಸುತ್ತಾ ಕುಳಿತುಕೊಂಡನು. ಅವನು ತಲೆಯನ್ನು ನೆಲಕ್ಕೆ ಬಗ್ಗಿಸಿ, ಸಕಲೇಂದ್ರಿಯಗಳೂ ಅರೋಚಕವಾಗಿ ತೋರಲು ನಿಟ್ಟುಸಿರುಬಿಡುತ್ತಾ ಯೋಚಿಸಿದನು. " ಅಯ್ಯೋ ! ನಾನು ಮಾಡಿದ ದುಷ್ಕೃತ್ಯಗಳಿಗೆ ತಕ್ಕ ಫಲವನ್ನೆಲ್ಲಾ ಅನುಭವಿಸಿದೆನು. ದುರ್ದೈವಿಯಾದ ನಾನು ಈ ಭೂಮಿಯ ಮೇಲೆ ಬದುಕಿದ್ದು ಫಲವೇನು ? ಪ್ರಾಯೋಪವೇಶ ಮಾಡಿ ಪ್ರಾಣಗಳನ್ನು ಪರಿತ್ಯಜಿಸುವೆನು " ಎಂದು ನಿಶ್ಚಯಿಸಿ, ಗಂಗಾನದಿಯ ನೀರನ್ನು ತಂದು ನೆಲವನ್ನು ಸಾರಿಸಿ, ದರ್ಭೆಯ ಹುಲ್ಲನ್ನು ತಳಕ್ಕೆ ಹಾಸಿಕೊಂಡು, ನಿರಶನ ವ್ರತದಿಂದ ಪ್ರಾಣಪರಿತ್ಯಾಗ ಮಾಡುವೆನೆಂದು ಸಂಕಲ್ಪಮಾಡಿ ಮಲಗಿಬಿಟ್ಟನು. ತನ್ನ ಕಡೆಯ ಬೇಹಿನವರಿಗೆ " ಕರ್ಣಾದಿ ಮಿತ್ರರು ಬಂದರೂ ಒಳಕ್ಕೆ ಪ್ರವೇಶಗೊಳಿಸಬೇಡಿರಿ. ಗವಾಕ್ಷರಂಧ್ರಗಳಿಂದಲೇ ನೋಡುತ್ತಿದ್ದು ಕಾವಲು ಕಾಯುತ್ತಿರಿ. ದರ್ಶನಕ್ಕೆ ಬಂದವರೆಲ್ಲರೂ ಹೊರಗೆ ನೋಡಿ ಹೊರಟು ಹೋಗಲಿ" ಎಂದು ಆಜ್ಞಾಪಿಸಿದ್ದನು. ಆ ರಾಜನ ಪರಿವಾರದ ಜನರು ಬಂದು ಹೊರಗೆ ನೋಡಿ, ಒಳಹೊಗಲು ಅವಕಾಶವಿಲ್ಲದೆ ಹೊರಟು ಹೋಗುತ್ತಿದ್ದರು. ಪಟ್ಟಮಹಿಷಿಯಾದ ಭಾನುಮತಿ

ಯು ಬಂದಳು. ಒಳಕ್ಕೆ ಹೋಗಕೂಡದೆಂದು ಭಟರು ತಡೆದರೂ ಕೇಳದೆ ಅವರನ್ನು ನೂಕಿ ಒಳಹೊಕ್ಕಳು. ದುರ್ಯೋಧನನು ಆಕೆಯನ್ನು ನುಡಿಸಲೇ ಇಲ್ಲ. ಅವಳು ಪತಿಯನ್ನು ನೋಡಿ "ರಾಯನೇ! ಇದೇನು? ನಿನ್ನ ಸಂಕಲ್ಪವೇನು? ನಿನಗೆ ನಾನು ಅನ್ಯಳೇ? ಬೆಂಕಿಯಲ್ಲಿ ಬೀಳಬೇಕೆನ್ನುವೆಯಾ? ಅಗ್ನಿಪ್ರವೇಶ ಮಾಡೋಣ ಏಳು. ಯಮುನಾನದಿಯ ಮಡುವಿನಲ್ಲಿ ಧುಮುಕೋಣವೆ? ಅಥವಾ ಬೇಕಾದ ವಿಷಗಳನ್ನು ತರಿಸುವೆನು. ಕುಡಿದು ಪ್ರಾಣಗಳನ್ನು ಪರಿತ್ಯಜಿಸೋಣ. ಈ ನಿರಶನ ಮರಣವೇತಕ್ಕೆ? ನನ್ನೊಂದಿಗೆ ಮಾತನಾಡಬಾರದೆ?" ಎಂದು ವಿನಯದಿಂದ ಕೇಳಿಕೊಂಡಳು. ಅದಕ್ಕೆ ದುರ್ಯೋಧನನು "ಸತಿಯೇ! ನೀನು ಹೇಳಿದವುಗಳೆಲ್ಲಾ ದುರ್ಮರಣಸಾಧನಗಳು. ಈ ದರ್ಭಾಸ್ತರಣದಲ್ಲಿ ಕುಳಿತು ಪ್ರಾಯೋಪವೇಶ ಮಾಡುವುದು ಶ್ರೇಷ್ಠವಾದುದು. ಹೀಗೆಯೇ ದೇಹವನ್ನು ಪರಿತ್ಯಜಿಸುವೆನು. ಈ ರಾಜ್ಯಭಾರದ ಸುಖವು ಸುಟ್ಟುಹೋಗಲಿ ನನಗಿದು ಬೇಕಾಗಿಲ್ಲ. ಪಾಂಡವರ ಕರುಣದಿಂದ ಕಲುಷಿತವಾದ ಈ ದೇಹವನ್ನು ಇಟ್ಟುಕೊಂಡಿರಲೊಲ್ಲೆನು" ಎಂದು ಹೇಳಿದನು. ಅದಕ್ಕಾಭಾನುಮತಿಯು "ಪ್ರಾಣಕಾಂತನೇ! ಈ ಅನಶನವ್ರತವು ನಿರರ್ಥಕವಾದುದು. ಮುರಿದುಹೋದ ಸ್ನೇಹವು ಬೆಸೆದರೆ ನಿಲ್ಲುವುದೇ? ನಮಗೆ ಬಂದ ಅಪಕೀರ್ತಿಯು ಏನು ಮಾಡಿದರೂ ಹೋಗತಕ್ಕದ್ದಲ್ಲ. ವಿದುರ ಭೀಷ್ಮಾದಿಗಳ ಉಪದೇಶವನ್ನು ತಿರಸ್ಕರಿಸಿ ಹೋದುದಕ್ಕೆ ಈ ಫಲವಾಯಿತು. ಈಗಲೂ ನನ್ನ ಬಿನ್ನಹವನ್ನು ಲಾಲಿಸು. ಹೆಂಗಸಿನ ಮಾತು, ಇವಳಿಗೇನು ತಿಳಿಯುವುದೆಂದು ನಿರಾಕರಿಸಬೇಡ. ಯುದ್ಧದಲ್ಲಿ ಕೈಸೆರೆ ಸಿಕ್ಕಿದ್ದ ನಮ್ಮನ್ನು ಆ ಪಾಂಡವರು ಬಿಡಿಸಿ ರಕ್ಷಿಸಿದರು. ನೀನು ಯುಧಿಷ್ಠಿರನನ್ನು ಕರಿಸಿ, ಹಿಂದೆ ನಾವು ಮಾಡಿದ ದುರ್ಗುಣಗಳನ್ನು ಮರೆತುಬಿಡೆಂದು ಪ್ರಾರ್ಥಿಸಿ, ಅವರ ರಾಜ್ಯವನ್ನು ಅವರಿಗೆ ಒಪ್ಪಿಸಿದರೆ ಲೋಕದ ಜನರು ಮೆಚ್ಚುವರು. ನಮಗೆ ಅಪಕೀರ್ತಿಯು ತಪ್ಪುವುದು. ನೀವು ಈಗ ಕರಿಸಿದರೂ ಸತ್ಯಪ್ರತಿಜ್ಞರಾದ ಅವರು ಹದಿಮೂರು ವರುಷಗಳು ತೀರುವ ತನಕ ಪುರಪ್ರವೇಶಮಾಡುವುದಿಲ್ಲ. ಅವರು ಬಂದ ಮೇಲೆ ತಮ್ಮ ಸೇಡು ತೀರಿಸಿಕೊ

ಳದೆ ಬಿಡತಕ್ಕವರೂ ಅಲ್ಲ, ಅವರು ಬರುವುದಕ್ಕಿಂತ ಮುಂಚೆಯೇ ರಾಜ್ಯವನ್ನೊಪ್ಪಿಸಿದರೆ ನಾವು ಕೃತಘ್ನರಲ್ಲವೆಂದು ಲೋಕವೇ ನಮ್ಮನ್ನು ಹೊಗಳುವುದು. ಇದರ ಮೇಲೆ ತಮ್ಮ ಚಿತ್ತ " ಎಂದಳು.

ಅದಕ್ಕೆ ಸುಯೋಧನನು "ಭಾನುಮತೀ! ನಾವು ಅವರಿಗೆ ಮಾಡಿದ ದುಷ್ಕೃತ್ಯಗಳು ಮರೆಯಲ್ಪಡತಕ್ಕುವಲ್ಲ. ಯುಧಿಷ್ಠಿರನು ಬಂದು ವೇಳೆ ಸುಮ್ಮನಿದ್ದರೂ ದ್ರೌಪದೀ ಭೀಮಸೇನರು ಮೂದಲಿಸಿ ತಲೆಗುತ್ತುತ್ತಿರುವರು. ಸಾಧ್ವಿಯೇ ನೀನೇಕೆ ಮರುಗುತ್ತಿರುವೆ? ನಿನ್ನ ಮಗನಾದ ಲಕ್ಷಣನಿಗೆ ರಾಜ್ಯದ ಪಟ್ಟವನ್ನು ಕಟ್ಟಿ, ನೀವೆಲ್ಲಾ ಸುಖದಿಂದ ಬಾಳಿರಿ. ನನ್ನನ್ನು ಸುಮ್ಮನೆ ಕಾಡಬೇಡ, ಹೋಗು " ಎಂದನು.

ಬಳಿಕ ಅವನ ತಾಯಿಯಾದ ಗಾಂಧಾರಿಯು ಸೊಸೆಯನ್ನು ಕರೆದುಕೊಂಡು ಬಂದು ಮಗನ ಸ್ಥಿತಿಯನ್ನು ನೋಡಿ ಬಹಳ ನೊಂದಳು. ಎಷ್ಟೆಷ್ಟೋ ಸಮಾಧಾನ ವಾಕ್ಯಗಳನ್ನು ಹೇಳಿದಳು. ಅನನು ತನ್ನ ಪ್ರಾಯೋಪವೇಶದ ಸಂಕಲ್ಪವನ್ನು ಬಿಡಲೊಲ್ಲನು. ಅಷ್ಟರಲ್ಲಿ ತಂದೆಯಾದ ಧೃತರಾಷ್ಟ್ರನು ಬಂದನು. ಅವನು ದುರ್ಯೋಧನನನ್ನು ನೋಡಿ "ಮಗುವೇ! ಏಕೆ ಹೀಗೆ ಮಾಡುವೆ! ಈ ಪ್ರಾಯೋಪವೇಶದ ಸಂಕಲ್ಪವನ್ನು ಬಿಡು. ಪಾಂಡವರನ್ನು ಕರಿಸಿ, ಅವರ ರಾಜ್ಯವನ್ನು ಕೊಟ್ಟು ಸಮಾಧಾನ ಪಡಿಸೋಣ, ಚಿಂತಿಸಬೇಡ. ಅರಮನೆಗೆ ಹೋಗೋಣ. ನಾನು ಮುದುಕನು. ನನ್ನ ಮನಸ್ಸನ್ನೇಕೆ ನೋಯಿಸುವೆ? ಏಳು" ಎಂದು ಸಮಾಧಾನ ಹೇಳಲು, ಅವನನ್ನೂ ಗದರಿಸಿ ಕಳುಹಿಬಿಟ್ಟನು. ಭೀಷ್ಮದ್ರೋಣಾದಿ ಗುರುಜನರು ಬಂದು ಸಂತೈಸಿದರು. ಅವರ ಮಾತುಗಳನ್ನೂ ಕಡೆಗಣಿಸಿ ಹಿಡಿದ ಸಂಕಲ್ಪವನ್ನು ಬಿಡಲಾರೆನೆಂದು ಹೇಳಿದನು. ಅವರೂ ಹಿಂದಿರುಗಿ ಹೋದರು. ಕರ್ಣ ಶಕುನಿ ದುಶ್ಯಾಸನಾದಿ ಆಪ್ತಜನರು ಬಂದು ಸಮಾಧಾನ ಹೇಳಿದರು ಅವರ ಮಾತುಗಳೂ ಆ ರಾಯನಿಗೆ ರುಚಿಸಲಿಲ್ಲ.

ಈ ರೀತಿಯಲ್ಲಿ ಸಮಾಧಾನ ಪಡಿಸಲು ಬಂದಿದ್ದ ಜನರೆಲ್ಲರೂ ತಿರಸ್ಕೃತರಾಗಿ ಹೊರಟು ಹೋದ ಬಳಿಕ ಕೌರವನು ಎಂದಿನಂತೆ ಚಿಂತೆಯಿಂದ ಸಮಾಧಿಯಲ್ಲಿ ಕುಳಿತಿದ್ದನು. ಆ ರಾತ್ರಿಯಲ್ಲಿ ಪಾತಾಳಲೋಕದ

ದೈತ್ಯರು ತಮಗೆ ಇದೇ ತಕ್ಕ ವೇಳೆಯೆಂದು ತಿಳಿದು, ಅಲ್ಲಿಗೆ ಬಂದು ಆ ರಾಯನನ್ನು ಪಾತಾಳ ಲೋಕಕ್ಕೆ ಕರೆದುಕೊಂಡು ಹೋಗಿ ಸತ್ಕರಿಸಿ, "ಅಯ್ಯಾ ಕುರುರಾಯನೇ! ನೀನು ಈ ವೇಳೆಯಲ್ಲಿ ಪ್ರಾಯೋಪವೇಶ ಮಾಡುವುದು ಸರಿಯಾದುದಲ್ಲ. ದೈತ್ಯರಾದ ನಾವೆಲ್ಲರೂ ನಿನಗೆ ಸಹಾಯ ಕರಾಗಿರುವೆವು. ದೇವತೆಗಳು ಪಾಂಡವರಾಗಿ ಭೂಮಿಯಲ್ಲಿ ಹುಟ್ಟಿರುವರು. ಅವರನ್ನು ನಾಶಮಾಡಿ ಹಗೆ ತೀರಿಸಿಕೊಳ್ಳುವ ಭಾರವು ನಮಗೆ ಸೇರಿದುದು. ನಾವೆಲ್ಲರೂ ನಿನ್ನ ಪಕ್ಷದವರಾಗಿರುವಾಗ ನೀನೇತಕ್ಕೆ ಹೆದರಬೇಕು? ಆ ಪಾಂಡವರಿಗೆ ಎಳ್ಳಷ್ಟು ನೆಲವನ್ನೂ ಕೊಡಬೇಡ. ಅವರೊಂದಿಗೆ ಕಾದಿ ಅವರನ್ನು ಈ ಪಾತಾಳಕ್ಕೆ ತುಳಿದುಬಿಡೋಣ. ನೀನು ಸತ್ತರೆ ನಾವೂ ನಿನ್ನ ಜತೆಯಲ್ಲಿಯೇ ಸಾಯುವೆವು. ಶತ್ರುಗಳಿಗೆ ನೀನು ಸ್ವಲ್ಪವೂ ಹೆದರಬೇಡ. ಹಸ್ತಿನಾಪಟ್ಟಣಕ್ಕೆ ಹೋಗಿ ಎಂದಿನಂತೆ ನಿನ್ನ ರಾಜಕಾರ್ಯಗಳನ್ನು ನೋಡಿಕೊಂಡಿರು. ನಿನ್ನ ಚಿಂತೆಯನ್ನೂ, ಈ ಸಂಕಲ್ಪವನ್ನೂ ಬಿಟ್ಟುಬಿಡು" ಎಂದು ಹಲವು ಬಗೆಯಾಗಿ ಧೈರ್ಯವಾಕ್ಯಗಳನ್ನು ಹೇಳಿದರು. ಇದನ್ನು ಕೇಳಿ ಕುರುರಾಯನ ಮನಸ್ಸು ತಿಳಿಗಿತು. ಚಿಂತೆಯು ಹರಿಯಿತು. ಧೈರ್ಯವುಂಟಾಯಿತು ಕೂಡಲೇ ಭೂಮಂಡಲಕ್ಕೆ ಅವರೇ ತಂದುಬಿಟ್ಟರು. ತನ್ನ ಹೆಂಡತಿಯ ಮಾತಿನಂತೆ ಆ ರಾಯನು ಅರಮನೆಗೆ ಬಂದನು. ಸಕಲ ಜನರೂ ಆನಂದಗೊಂಡರು.

ಆ ಕುರುರಾಯನಿಗೆ ಹಿಂದಿನ ಅವಮಾನಗಳೆಲ್ಲ ಮರೆತುಹೋದುವು. ದೈತ್ಯರ ಸ್ನೇಹವು ದೊರೆತುದರಿಂದ ಆ ಪಾಂಡವರಿಗೆ ತಾನು ಹೆದರಬೇಕಾಗಿಲ್ಲವೆಂತಲೂ, ಹೇಗಾದರೂ ಮಾಡಿ ಅವರನ್ನು ನಾಶಮಾಡಲು ಯತ್ನಿಸಬೇಕೆಂತಲೂ ನಿಶ್ಚಯಿಸಿಕೊಂಡನು. ಪಾಂಡವರ ವಿನಾಶಕ್ಕಾಗಿ ಒಂದು ಯಜ್ಞ ಮಾಡಬೇಕೆಂದು ಸಂಕಲ್ಪಿಸಿ, ಅದಕ್ಕಾಗಿ ತಕ್ಕ ಸೋಪಸ್ಕರಗಳನ್ನು ಸಿದ್ಧಪಡಿಸುತ್ತಿದ್ದನು.



## ಹನ್ನೆರಡನೆಯ ಸಂಧಿ.

ಸೂಚನೆ:—ದೇವೇಂದ್ರನು ಕರ್ಣನಿಗೆ ಸಹಜವಾಗಿ ಬಂದಿದ್ದ ಕವಚಕುಂಡಲಗಳನ್ನು ಯಾಚಿಸಿ ಕಸಿದುಕೊಂಡು, ತನ್ನ ಶಕ್ತ್ಯಾಯುಧವನ್ನು ಅವನಿಗೆ ಕೊಟ್ಟುಹೋದನು. ಬಳಿಕ ಸೈಂಧವನು ಅರಣ್ಯಕ್ಕೆ ಹೋಗಿ ದ್ರೌಪದಿಯನ್ನು ಅಪಹರಿಸುತ್ತಿರಲು ಭೀಮಾರ್ಜುನರು ಅವನನ್ನು ಸೋಲಿಸಿ ದ್ರೌಪದಿಯನ್ನು ಕರೆದೊಯ್ದರು.

ದುರ್ಯೋಧನನು ಘೋಷಯಾತ್ರೆಯಲ್ಲಿ ತನಗಾದ ಅವಮಾನವನ್ನು ಮರೆಯಲಿಕ್ಕೆ ಆಗಲಿಲ್ಲ. ಆಗ ಕರ್ಣಾದಿ ಆಪ್ತರನ್ನು ಕೂಡಿಸಿಕೊಂಡು, ಶತ್ರುಗಳಾದ ಪಾಂಡವರನ್ನು ನಿಗ್ರಹಿಸುವ ಮಾರ್ಗವಾವುದು? ತನಗೆ ಅಪಕೀರ್ತಿ ಬರದಂತೆ ಯಾವ ಉಪಾಯದಿಂದ ಅವರನ್ನು ನಾಶಮಾಡೋಣವೆಂದು ಚಿಂತಿಸುತ್ತಲೇ ಇದ್ದನು. ಒಂದು ದಿನ ಇಂದ್ರನು ತನ್ನ ಸಭೆಯಲ್ಲಿ ಕುಳಿತಿರುವಾಗ ನಾರದನು ಬಂದು ಪಾಂಡವರ ಕಷ್ಟವನ್ನೂ, ಮುಂದೆ ನಡೆಯುವ ಮಹಾಯುದ್ಧದಲ್ಲಿ ಕರ್ಣನು ಮಾಡುವ ಸಾಹಸವನ್ನೂ ವಿವರಿಸಿ, ಆ ಕರ್ಣನಿಗೆ ತಂದೆಯಾದ ಸೂರ್ಯನು ಅನುಗ್ರಹಿಸಿರುವ ಕವಚಕುಂಡಲಗಳಿರುವವರೆಗೂ ಅವನು ಯಾರಿಂದಲೂ ನಿಗ್ರಹಿಸಲ್ಪಡಲಾರನೆಂದು ಹೇಳಿದನು. ಅದನ್ನು ಕೇಳಿ ಇಂದ್ರನು ಹೇಗಾದರೂ ಉಪಾಯಮಾಡಿ ದಾನಶೌಂಡನಾದ ಕರ್ಣನಿಂದ ಕವಚಕುಂಡಲಗಳನ್ನು ಯಾಚಿಸಿ ಕಸಿದುಕೊಂಡು ಬರುವೆನೆಂದು ನಿಶ್ಚಯಿಸಿದನು. ಈ ಸುದ್ದಿಯು ನಾರದನ ಮೂಲಕವೇ ಸೂರ್ಯನಿಗೆ ತಿಳಿಯಿತು. ಅವನು ಮನಸ್ಸಿನಲ್ಲಿ “ಅಯ್ಯೋ! ಇಂದ್ರನು ನನ್ನ ಮಗ ಕರ್ಣನ ಪ್ರಾಣ ತೆಗೆಯುವುದಕ್ಕೆ ಹಿಂದೆಗೆಯದೆ ಅವನ ಕವಚಕುಂಡಲಗಳನ್ನು ಕಿತ್ತುಕೊಂಡು ಬರುವನಲ್ಲ! ಅವನಿಗೆ ಕೊಡಬೇಡವೆಂದು ಮೊದಲೇ ನಾನು ಹೋಗಿ ಎಚ್ಚರಿಸಿ ಬರುವುದು ಒಳ್ಳೆಯದು” ಎಂದು ಯೋಚಿಸಿ ಆ ರಾತ್ರಿಯಲ್ಲಿಯೇ ಭೂಲೋಕಕ್ಕಿಳಿದು ಹಸ್ತಿನಾವತಿಗೆ ಬಂದನು. ಅವನು ಅರ್ಧರಾತ್ರಿಯಲ್ಲಿ ಕರ್ಣನ ಮನೆಯನ್ನು ಪ್ರವೇಶಿಸಲು, ಆ ಸಹಸ್ರಕಿರಣನ ದಿವ್ಯತೇಜಸ್ಸನ್ನು ಕಂಡು ಆ ರಾಧೇಯನು ಬೆರಗಾಗಿ ನಮಸ್ಕರಿಸಿ ನಿಂತನು. ಆಗ ಸೂರ್ಯನು ಯೋಗದಿಂದ ಅವನಿಗೆ ದಿವ್ಯದೃಷ್ಟಿ ಕೊಟ್ಟು, ತಾನು

ಸೂರ್ಯನೆಂದು ತಿಳಿಸಿ, ಇಂದ್ರಸಭೆಯಲ್ಲಿ ನಡೆದ ಸಂಭಾಷಣೆಯನ್ನೂ, ನಾಳೆಯ ದಿನ ಅವನು ಬ್ರಾಹ್ಮಣವೇಷದಿಂದ ಬಂದು ಕವಚಕುಂಡಲಗಳನ್ನು ಯಾಚಿಸುವ ವಿವರವನ್ನೂ ಹೇಳಿ, "ಮಗೂ ನಿನ್ನ ಪ್ರಾಣರಕ್ಷಣೆಗೆ ಕೊಟ್ಟಿರುವ ಸಹಜವಾದ ಈ ಕವಚಕುಂಡಲಗಳನ್ನು ತೆಗೆದು ಕೊಡಬೇಡ. "ಜೀವನ್ ಭದ್ರಾಣಿಪಶ್ಯತಿ" ಎಂಬಂತೆ ಪ್ರಾಣವನ್ನು ಳಿಸಿಕೊಂಡರೆ ಬೇಕಾದ ಸುಖಗಳನ್ನು ಪಡೆಯಬಹುದು. ಇದನ್ನು ಮುಂಚಿತವಾಗಿ ತಿಳಿಸಲಿಕ್ಕಾಗಿಯೇ ನಾನಿಲ್ಲಿಗೆ ಬಂದಿರುವೆನು" ಎಂದನು. ಅದಕ್ಕೆ ಕರ್ಣನು ಒಪ್ಪದೆ ಆ ಸೂರ್ಯನಿಗೆ ನಮಸ್ಕರಿಸಿ "ತಂದೆಯೇ! ಈ ದೇಹವು ನಶ್ವರವಾದುದು. ಧರ್ಮಕೀರ್ತಿಗಳೆರಡೇ ಸ್ಥಿರವಾಗಿ ನಿಲ್ಲುವುವು. ಮನುಷ್ಯಜನ್ಮವನ್ನೆತ್ತಿರುವ ನಾನು ಸತ್ಯವನ್ನು ಪಾಲಿಸದೆ ದುರ್ಗತಿಗೆ ಇಳಿಯಲೊಲ್ಲೆನು. ನನ್ನ ಮಾತಿಗೆ ಕೋಪಿಸಬೇಡ. ನನಗೆ ಈ ಶರೀರದ ಮೇಲೆ ಅಭಿಲಾಷೆಯಿಲ್ಲ ಶಿಬಿ, ದಧೀಚಿ, ಜೀಮೂತವಾಹನ ಮೊದಲಾದವರು ಪರಹಿತಾರ್ಥವಾಗಿ ತಮ್ಮ ದೇಹತ್ಯಾಗ ಮಾಡಿ ಸಂಪಾದಿಸಿದ ಕೀರ್ತಿಯು ಈ ಲೋಕದಲ್ಲಿ ಎಂದಿಗಾದರೂ ಅಳಿಯುವುದೆ? ಅಂತಹ ಕೀರ್ತಿಯನ್ನೇ ಪಡೆಯಬೆಳಸಿರುವ ನಾನು ದಾನಕರ್ಣನೆಂಬ ಹೆಸರನ್ನು ಪಡೆದಿರುವಾಗ ಯಾಚಕನಾಗಿ ಬಂದು ಬೇಡುವ ಬ್ರಾಹ್ಮಣನಿಗೆ ನಾಸ್ತಿಯೆಂಬ ಮಾತನ್ನು ಹೇಗೆ ಹೇಳಲಿ! ಇದಕ್ಕೆ ನನ್ನ ಮನಸ್ಸು ಒಡಂಬಡುವುದಿಲ್ಲ ನನ್ನ ಪ್ರಾಣಗಳು ಇಂದೇ ಹೋದರೂ ನನಗೆ ಚಿಂತೆಯಿಲ್ಲ. ಕೀರ್ತಿಯೆಂಬ ಶರೀರವು ಬಾದುಳಿವರೆ ಅದೇ ಸಾಕಾಗಿದೆ ಎದುರುತ್ತರ ಕೊಟ್ಟೆನೆಂದು ಬೇಸರಗೊಳ್ಳದೆ ಬಾಲಕನ ಅಪರಾಧವನ್ನು ಕ್ಷಮಿಸಬೇಕು" ಎಂದು ಪ್ರಾರ್ಥಿಸಿದನು ಅವನ್ನು ಕೇಳಿ ಸೂರ್ಯನು "ನನ್ನ ಮಾತನ್ನಿವನು ಕೇಳುವ ಹಾಗೆ ಇಲ್ಲ. ಆದರೂ ಮತ್ತೊಂದು ಉಪಾಯವನ್ನು ಹೇಳಿ ನೋಡುವೆನು" ಎಂದು ಯೋಚಿಸಿ, ಅವನನ್ನು ನೋಡಿ, "ಕರ್ಣಾ! ನೀನಾಡಿದ ಮಾತು ನ್ಯಾಯವೇ ಸರಿ. ಆದರೆ ನಿನಗೆ ಇನ್ನೊಂದು ಬುದ್ಧಿವಾದವನ್ನು ಹೇಳುವೆನು ಕೇಳು. ಇಂದ್ರನು ಬಂದು ಕವಚಕುಂಡಲಗಳನ್ನು ಕೊಡೆಂದು ನಿನ್ನನ್ನು ಬೇಡಿದರೆ "ನಿನ್ನ ಇಷ್ಟದಂತೆ ಅವುಗಳನ್ನು ಕೊಡುವೆನು ನಿನ್ನಲ್ಲಿರುವ ಶಕ್ತ್ಯಾಯುಧವನ್ನು ನನಗೆ

ಕೊಡು '' ಎಂದು ಕೇಳಿ ಅವನಿಂದ ಆ ಶಕ್ತಿಯನ್ನು ಪಡೆದುಕೋ. ಅದರಿಂದ ನಿನಗೆ ಶುಭವುಂಟಾಗುವುದು '' ಎಂದು ತಿಳಿಸಿ ಅಂತರ್ಧಾನನಾದನು.

ಮರುದಿನ ದೇವೇಂದ್ರನು ಬ್ರಾಹ್ಮಣವೇಷಧರನಾಗಿ ಕರ್ಣನ ಮನೆಗೆ ಬಂದನು. ಕರ್ಣನು ಆ ಬ್ರಾಹ್ಮಣನಿಗೆ ಪ್ರತ್ಯುತ್ಥಾನಾಭಿ ವಂದನೆಗಳನ್ನು ಮಾಡಿ ಸತ್ಕರಿಸಿ, ಆತನ ಪಾದಪ್ರಕ್ಷಾಳನ ಮಾಡಿ ಸಮುಚಿತಾಸನದಲ್ಲಿ ಕುಳ್ಳಿರಿಸಿ ಅರ್ಘ್ಯಾದಿಗಳನ್ನು ಕೊಟ್ಟು " ಸ್ವಾಮಿ ಭೂಸುರೋತ್ತಮರೇ! ತಾವು ದಯಮಾಡಿಸಿದ ಕಾರ್ಯವೇನು ? ಸಂಕೋಚಗೊಳ್ಳದೆ ಅಪ್ಪಣೆ ಕೊಡಿಸಬೇಕು '' ಎಂದು ಪ್ರಾರ್ಥಿಸಿದನು. ಅದಕ್ಕಾವೇಷಧರನಾದ ಇಂದ್ರನು " ಅಯ್ಯಾ ತ್ಯಾಗಿಯೇ! ನನಗೆ ನಿನ್ನ ಕವಚಕುಂಡಲಗಳನ್ನು ತೆಗೆದುಕೊಡು. ಇವುಗಳನ್ನು ಯಾಚಿಸಲಿಕ್ಕಾಗಿಯೇ ಬಂದೆನು '' ಎಂದು ಹೇಳಿದನು ಅದಕ್ಕೆ ಕರ್ಣನು ಎದುರು ಹೇಳದೆ ಕೂಡಲೇ ಕತ್ತಿಯಿಂದ ತನ್ನ ಮೈಗೆ ಹತ್ತಿದ್ದ ಕವಚವನ್ನೂ, ಕಿವಿಗೆ ತೊಟ್ಟಿದ್ದ ಕುಂಡಲಗಳನ್ನೂ ಕಳಚಿ ತೆಗೆದು ಆ ಬ್ರಾಹ್ಮಣನಿಗೆ ಕೊಟ್ಟುಬಿಟ್ಟನು. ಆಗ ಇಂದ್ರನು ಅವುಗಳನ್ನು ಪರಿಗ್ರಹಿಸಿ ಬಹು ಸಂತೋಷಗೊಂಡು ನಿಜರೂಪದಿಂದ ಪ್ರತ್ಯಕ್ಷನಾಗಿ ನಿಂತು " ಎಲೈ ಧೀರನೇ! ದಾನಶೌಂಡನೆಂದರೆ ನೀನೇ ಸರಿ ನಿನ್ನ ಪ್ರಾಣಾಪಾಯವನ್ನು ಕೂಡ ಪರಿಗಣಿಸದೆ ಬೇಡಿದ ವಸ್ತುಗಳನ್ನು ಕೊಡುವ ತ್ಯಾಗಿಗಳು ಈ ಲೋಕದಲ್ಲಿ ನಿನ್ನ ಹೊರತು ಮತ್ತಾರೂ ಇಲ್ಲ '' ಎಂದು ಕರ್ಣನನ್ನು ಬಹಳವಾಗಿ ಕೊಂಡಾಡಿ, " ಎಲೈ ಅಂಗರಾಜನೇ! ನಿನ್ನ ತ್ಯಾಗಕ್ಕಾಗಿ ಮೆಚ್ಚಿದೆನು. ನಿನಗೆ ಬೇಕಾದುದನ್ನು ಕೇಳಿಕೋ ಕೊಡುವೆನು " ಎಂದನು. ಆಗ ಕರ್ಣನು " ಸುರಪತಿಯೇ! ನಾನು ನಿನಗೆ ಕೊಟ್ಟು ನಿನ್ನಿಂದ ಪ್ರತಿಫಲವನ್ನು ಬಯಸುವುದು ವಿಹಿತವಾಗಿ ತೋರುವುದಿಲ್ಲ. ನೀನು ಸಾಮಾನ್ಯ ಬ್ರಾಹ್ಮಣನಲ್ಲ. ತ್ರಿಲೋಕಾಧಿಪತಿಯಾದ ಇಂದ್ರನು. ನಿನ್ನ ಅನುಗ್ರಹವನ್ನು ವ್ಯರ್ಥಗೊಳಿಸಿದರೆ ನಿನ್ನ ಮನಸ್ಸಿಗೆ ಕೊರತೆಯುಂಟಾಗಬಹುದೆಂದು ತಿಳಿದು ಬಂದು ವರವನ್ನು ಬೇಡುವೆನು. ನಿನ್ನಲ್ಲಿರುವ ಶಕ್ತ್ಯಾಯುಧವನ್ನು ಅನುಗ್ರಹಿಸಬೇಕು '' ಎಂದು ಪ್ರಾರ್ಥಿಸಿದನು. ಆಗ ಇಂದ್ರನು ಅವನು ಕೋರಿದಂತೆ ಅಜೇಯವಾದ ಶಕ್ತ್ಯಾಯುಧವನ್ನು ಗೌಸಣಿಗೆ

ಯಿಂದ ಬಿಚ್ಚಿ ತೆಗೆದು ಅವನ ಕೈಗೆ ಕೊಟ್ಟು "ಕರ್ಣ! ಇಗೋ ಇದನ್ನು ಪರಿಗ್ರಹಿಸು. ನಿನಗೆ ಎದುರಿಸಿದ ಶತ್ರುಗಳ ಮೇಲೆ ಇದನ್ನು ಪ್ರಯೋಗಿಸು. ಇದು ಅವರನ್ನು ಕೊಂದುಹಾಕಿ ಬಳಿಕ ನನ್ನ ಬಳಿಗೆ ಬಂದು ಸೇರುವುದು" ಎಂದು ಹೇಳಿ ಅದೃಶ್ಯನಾದನು.

ಅತ್ತಲಾವನದಲ್ಲಿ ಪಾಂಡವರಿಗೆ ಅರಣ್ಯವಾಸದ ಅವಧಿ ಹನ್ನೊಂದು ವರುಷಗಳು ಗತಿಸಿದುವು. ಇನ್ನೊಂದು ವರುಷ ಮಾತ್ರವೇ ಉಳಿದಿದೆ. ಅವರಿಗೆ ವಿಪತ್ತುಗಳು ಮೇಲೆ ಮೇಲೆ ಬರುತ್ತಲೇ ಇದ್ದುವು. ಅವರಾ ವಿಪತ್ಸಮುದ್ರದಲ್ಲಿ ಸ್ವಲ್ಪವೂ ಬೇಸರಗೊಳ್ಳದೆ ಈಜಾಡುತ್ತಿದ್ದರು. ಒಂದು ದಿನ ಧೃತರಾಷ್ಟ್ರನ ಮಗಳಾದ ದುಶ್ಶಳೆಯ ಗಂಡನಾದ ಜಯದ್ರಥನು ಹಸ್ತಿನಾಪುರಕ್ಕೆ ಬಂದು ಕುರುಪತಿಯಿಂದ ಬೋಧಿಸಲ್ಪಟ್ಟು, ಪಾಂಡವರಿಗೆ ಏನಾದರೂ ಅಹಿತವನ್ನು ಮಾಡಿಬರುವೆನೆಂದು ಹೇಳಿ ತನ್ನ ಸಿಂಧುದೇಶಕ್ಕೆ ಹೋಗಿ ಸೇರಿದನು. ಅವನು ತನ್ನ ಮನೋಭಿಪ್ರಾಯ ವಿಂತದೆಂದು ಯಾರ ಸಂಗಡಲೂ ಹೇಳಲಿಲ್ಲ. ವಿಜಯಾಭಿಲಾಷೆಯಿಂದ ತನ್ನ ಹಿತಚಿಂತಕರು ಬೇಡಬೇಡವೆಂದು ತಡೆದರೂ ಕೇಳದೆ ಸೇನೆಯನ್ನು ಸಿದ್ಧಗೊಳಿಸಿದನು. ಅವನಲ್ಲಿ ಹದಿಮೂರುಸಾವಿರದ ಆನೆಗಳೂ, ಅಯ್ವತ್ತುಸಾವಿರ ಕುದುರೆಗಳೂ, ಹದಿನೆಂಟುಸಾವಿರ ರಥಗಳೂ, ಅಯ್ದು ಲಕ್ಷ ಕಾಲಾಳುಗಳೂ ಸೇರಿದುವು ವಾದ್ಯಗಳ ಅಬ್ಬರವು ದಿಕ್ಕುಗಳ ಭಿತ್ತಿಗಳನ್ನು ಒಡೆದುಬಿಟ್ಟವು. ಆಗ ಜೋಯಿಸರು ಸಿಂಧುರಾಜನನ್ನು ನೋಡಿ ಪ್ರಭುವೇ, ಈ ವೇಳೆಯಲ್ಲಿ ನಿನಗೆ ಸೂರ್ಯಾಂಗಾರಕರು ಅಶುಭಸ್ಥಾನಗಳಲ್ಲಿ ಸೇರಿರುವರು ಗುರುಶನಿಗಳು ಶತ್ರುಸ್ಥಾನಗಳಲ್ಲಿರುವರು. ಬುಧ ಶುಕ್ರರಾಹುಗಳು ವಿಷಮಸ್ಥಳಗಳಲ್ಲಿರುವರು. ಇಂತಹ ಸಂದರ್ಭದಲ್ಲಿ ಪ್ರಯಾಣ ಮಾಡುವವರು ಅಪಜಯವನ್ನು ಪಡೆಯುವರು. ಸ್ವಸ್ಥಾನಗಳಲ್ಲಿರುವವರಿಗೆ ಸೌಖ್ಯವುಂಟು ಎಂದು ಹೇಳಿದರು. ಅದಕ್ಕವನು ಜೋಯಿಸರ ಬಲೆಗೆ ನಾನೇನು ಸಿಕ್ಕುವೆನೆ ? ಸಾಕು ನಿಲ್ಲಿಸಿರೆಂದು ಅವರನ್ನು ತಿರಸ್ಕರಿಸಿ ಪ್ರಯಾಣ ಭೇರಿ ಹೊಡಿಸಿ ನಡೆದನು.

ದಾರಿಯಲ್ಲಿ ಆ ಸೈಂಧವನಿಗೆ ಹಲವು ಅಪಶಕುನಗಳಾದುವು. ಅವನು ಅವುಗಳೊಂದನ್ನೂ ಲಕ್ಷ್ಯಮಾಡಲಿಲ್ಲ. ಅವನು ಕುರುಪತಿಯ

ಭಾವನೂ, ದುಷ್ಟಚತುಷ್ಟಯದಲ್ಲಿ ಸೇರಿದವನೂ ಆಗಿದ್ದನು. ಆವನು ಪಯಣದ ಮೇಲೆ ಪಯಣ ಮಾಡಿ, ಪಾಂಡವರಿರುವ ಆಶ್ರಮದ ಬಳಿಗೆ ಜಾಗ್ರತೆಯಲ್ಲಿ ಬಂದು ಸೇರಿದನು. ಅಲ್ಲಿ ಬಂದು ವಿಸ್ತಾರವಾದ ಪ್ರದೇಶದಲ್ಲಿ ಸ್ಕಂದಾವಾರವನ್ನೇರ್ಪಡಿಸಿ, ಸೈನಿಕರಿಗೆಲ್ಲಾ ತಕ್ಕ ಸ್ಥಳಗಳನ್ನು ಅನುಕೂಲಪಡಿಸಿಕೊಟ್ಟನು. ಮರುದಿನ ಆ ಜಯದ್ರಥನು ಚಾರರ ಕೈಯಲ್ಲಿ ಅನರ್ಘ್ಯ ರತ್ನಾಭರಣಗಳನ್ನೂ ಅನುಲೇಪನಾದಿ ಸುಗಂಧದ್ರವ್ಯಗಳನ್ನೂ ಕೊಟ್ಟು, ಇವುಗಳನ್ನು ತೆಗೆದುಕೊಂಡು ಹೋಗಿ ಪಾಂಡವ ಪತ್ನಿಯಾದ ದ್ರೌಪದಿಗೆ ರಹಸ್ಯವಾಗಿ ಕೊಟ್ಟುಬನ್ನಿರೆಂದು ಹೇಳಿ ಕಳುಹಿದನು. ಆ ಚಾರರು ಮರೆಯಲ್ಲಿ ಅಡಗಿದ್ದು ಪಾಂಡವರಯ್ವರೂ ಬೇಟೆಗೆ ಹೋದ ಸಮಯವನ್ನು ನಿರೀಕ್ಷಿಸಿಕೊಂಡಿದ್ದರು. ಸ್ವಲ್ಪ ಹೊತ್ತಿನ ಮೇಲೆ ಪಾಂಡವರು ಮೃಗಯಾವಿಹಾರಕ್ಕೆ ಹೊರಟು, ದ್ರೌಪದಿಯ ರಕ್ಷಣೆಗೆ ಧೌಮ್ಯನನ್ನೂ, ಆಶ್ರಮದ ಕಾವಲಿಗೆ ಮುನಿಜನರನ್ನೂ ಇರಿಸಿ, ತಾವು ಧನುರ್ಬಾಣಗಳನ್ನೂ ಬೆನ್ನಿನಲ್ಲಿ ಬತ್ತಳಿಕೆಗಳನ್ನೂ ಧರಿಸಿ, ಕಾಡಿಗೆ ನುಗ್ಗಿ ಮೃಗಕುಲವನ್ನು ಬೇಟೆಯಾಡುತ್ತಿದ್ದರು.

ಪಾಂಡವರು ಬೇಟೆಗೆ ಹೋದ ವೇಳೆಯನ್ನು ನೋಡಿಕೊಂಡಿದ್ದು ಆ ಚಾರರು ಪಾಂಚಾಲಿ ಇದ್ದ ಪರ್ಣಶಾಲೆಯೊಳಕ್ಕೆ ಬೇಗ ಬೇಗ ಬಂದು ಆಕೆಗೆ ಕೈಮುಗಿದು "ಪ್ರಭ್ವಿಣೀ! ನಿಮ್ಮ ಭಾವನಾಗಿಯೂ, ದುಶ್ಶಳೆಯ ಪತಿಯಾಗಿಯೂ, ಕೌರವರಾಯನ ಮೈದುನನಾಗಿಯೂ, ಸಿಂಧುದೇಶಾಧಿಪತಿಯಾಗಿಯೂ ಇರುವ ಜಯದ್ರಥನು ಈ ರತ್ನಾಭರಣಗಳನ್ನೂ, ದಿವ್ಯ ದುಕೂಲವನ್ನೂ, ಅನುಲೇಪನ ದ್ರವ್ಯಗಳನ್ನೂ ತಮ್ಮ ಸನ್ನಿಧಿಗೆ ಕಳುಹಿಸಿರುವನು. ದಯಮಾಡಿ ಪರಿಗ್ರಹಿಸಬೇಕು" ಎಂದು ಮುಂದಿಟ್ಟರು. ಅದನ್ನು ನೋಡಿ ದ್ರೌಪದಿಯು ಅವರನ್ನು ನೋಡಿ—ಚಾರರಿರಾ! ದುಶ್ಶಳೆಯು ಚೆನ್ನಾಗಿರುವಳೇ? ಜಯದ್ರಥನಿಗೆ ಕ್ಷೇಮವೇ? ನೀನು ಈ ಉಡುಗೊರೆಯನ್ನು ನನ್ನ ಪತಿಗಳು ಬಂದ ಮೇಲೆ ಅವರಿಗೆ ಒಪ್ಪಿಸತಕ್ಕದು. ಇನ್ನೊಂದು ಕ್ಷಣದಲ್ಲಿ ಅವರು ಬೇಟೆಯಾಡಿಕೊಂಡು ಇಲ್ಲಿಗೆ ಬಂದು ಸೇರುವರು. ನಾವು ಚಿಕ್ಕ ಮಕ್ಕಳು. ಹೆಂಗಸರಿಗೆ ಸ್ವಾತಂತ್ರ್ಯವೇ ಇಲ್ಲವೆಂಬುದನ್ನು ನೀವರಿಯಿರಾ? ನಮಗೆ ಇಂಥ ರಾಜಯೋಗ್ಯ

ವಾದ ವಸ್ತ್ರಾಭರಣಗಳೇತಕ್ಕೆ? ನಾವು ಉಡುವುವು ನಾರುಸೀರೆಗಳು;
ನಮ್ಮ ಆಹಾರವು ಕಂದಮೂಲ ಫಲಗಳು. ನಮ್ಮ ಶೃಂಗಾರವೆಲ್ಲಾ ಪತಿ
ವ್ರತಾಗುಣದಲ್ಲಿ ಹೊರತು ಅಲಂಕಾರಗಳಲ್ಲಿ ಅಲ್ಲ. ನಮ್ಮ ಮನಸ್ಸಿಗೆ
ಇವು ಸೊಗಸುವುದಿಲ್ಲ. ಇವುಗಳನ್ನು ಪತಿಗಳಾದ ಪಾಂಡವರಿಗೆ ತೋರಿ
ಸಿರಿ. ಈ ವನದಲ್ಲಿ ಇರುವುದು ಸರಿಯಲ್ಲ. ಬೇರೆ ವನಕ್ಕೆ ಹೋಗಿ
ಇಳಿದುಕೊಳ್ಳುವುದು ಒಳ್ಳೆತೆಂದು ನುಡಿದಳು.

ಅದನ್ನು ಕೇಳಿ ಆ ಚಾರರು ಆ ಸಾಧ್ವಿಯನ್ನು ಕುರಿತು 'ತಾಯಿಾ!
ನೀವು ಇವುಗಳನ್ನು ಪರಿಗ್ರಹಿಸಬಹುದು. ನಮ್ಮ ರಾಯನೇನೂ ಬಡವ
ನಲ್ಲ. ಪಾಂಡವರಿಗೆ ಉಡುಗೊರೆಯನ್ನು ಕೊಡಲಿಕ್ಕೆ ಬಾಧ್ಯನಾಗದೆ
ಇಲ್ಲ. ಈ ಪಾವುಡಗಳನ್ನುಪೇಕ್ಷಿಸದೆ ತೆಗೆದು ಒಳಗಿರಿಸಿರಿ" ಎಂದು
ಹೇಳಲು ಆಕೆಯು ಕೋಪಿಸಿಕೊಂಡು "ಛೀ ಛೀ ಭ್ರಷ್ಟರಿರಾ! ನಿಮ
ಗೀರಾಯಭಾರವೇತಕ್ಕೆ? ಇಲ್ಲಿರದೆ ತೊಲಗಿಹೋಗಿರಿ" ಎಂದು ಗದ
ರಿಸಿ ಅಟ್ಟಿಬಿಟ್ಟಳು. ಅವರ ಮುಖಕ್ಕೆ ಮಸಿ ಬಳಿದ ಹಾಗಾಯಿತು.
ಕಾರ್ಯದ ಬೆಸುಗೆಯು ಹತ್ತಲಿಲ್ಲ. ಆ ದ್ರೌಪದಿಯ ಮಾತುಗಳಿಂದ
ತಮ್ಮರಸನ ಅಭೀಷ್ಟವು ಸಿದ್ಧಿಸಲಾರದೆಂದು ತಿಳಿದು ದುಗುಡದಿಂದ
ಹಿಂದಿರುಗಿ ತಮ್ಮ ಪಾಳಯಕ್ಕೆ ಹೋದರು.

ದೂತರು ಯಾವಾಗ ಬರುವರೋ? ಏನು ಮಾಡಿಕೊಂಡು ಬರು
ವರೋ ಎಂಬ ಚಿಂತೆಯಿಂದಲೇ ಜಯದ್ರಥನು ಅವರ ಬರವನ್ನೆದುರು
ನೋಡುತ್ತಲಿದ್ದನು. ಅವರು ಬಂದು ವಂದಿಸಿ "ಮಹಾಪ್ರಭೂ! ಆಕೆ
ಯು ಮನಸೋತು ನಿನ್ನ ವಶಳಾಗುವಂತೆ ಕಾಣುವುದಿಲ್ಲ. ಸಾಮೋಪಾಯ
ದಿಂದ ಕಾರ್ಯವನ್ನು ಸಾಧಿಸಿಕೊಳ್ಳಬೇಕು" ಎಂದು ಹೇಳಿದರು. ಆಗಲಿ,
ನಾನೇ ಹೋಗಿ ನೋಡುವೆನೆಂದು ಕೂಡಲೆ ಜಯದ್ರಥನು ಶೃಂಗರಿಸಿಕೊಂ
ಡುಸುಗಂಧಾನುಲಿಪ್ತನಾಗಿ, ಕತ್ತಿ, ಕಠಾರಿ ಮೊದಲಾದ ಆಯುಧಗಳನ್ನು
ಕೈಗಳಲ್ಲಿ ಧರಿಸಿಕೊಂಡು, ದ್ರೌಪದಿಯು ಇದ್ದ ಪರ್ಣಶಾಲೆಯೊಳಕ್ಕೆ
ನುಗ್ಗಿದನು. ಇವನನ್ನು ನೋಡಿದ ಕೂಡಲೇ ಅಲ್ಲಿದ್ದ ಮುನಿಜನರು
ಹೆದರಿ ಒಬ್ಬರೊಬ್ಬರಾಗಿ ಓಡಿಹೋದರು. ದ್ರೌಪದಿಯು ಒಬ್ಬಳೇ
ಒಳಗೆ ಉಳಿದಳು. "ಎಲೌ ದ್ರೌಪದೀ! ನಾನು ಜಯದ್ರಥನು ಬಂದಿ

ರುವೆನು, ನೀನ ಹೆದರುವುದೇತಕ್ಕೆ ?" ಎಂದು ಹೇಳಿ ಬಂದು ಕಡೆ ಕುಳಿತುಕೊಂಡನು ಅದನ್ನು ಕೇಳಿ ದ್ರೌಪದಿಯು "ಅಯ್ಯಾ ನೀನು ನಮ್ಮ ನಾದಿನಿಯ ಗಂಡನಾದ ಮೇಲೆ ನನ್ನ ಒಡಹುಟ್ಟಿದವನಂತೆಯೇ ಸರಿ. ನಾನೇಕೆ ನಿನ್ನನ್ನು ಕಂಡು ಹೆದರಬೇಕು ? ಆದರೆ ಇದು ಪತಿಗಳಿಲ್ಲದ ಮನೆಯಾಗಿದೆ. ಪತಿವ್ರತೆಯಾದ ನಾನು ಪರಪುರುಷನೊಂದಿಗೆ ಸಂಭಾಷಿಸುವುದು ಅನುಚಿತವಲ್ಲವೇ ? ಇದನ್ನು ನೀನು ಅರಿಯೆಯಾ ?" ಎಂದಳು. ಅದಕ್ಕೆ ಜಯದ್ರಥನು ಗಹಗಹಿಸಿ ನಕ್ಕು "ಓಹೋ ! ನೀನು ಬಹುಪತಿವ್ರತೆ. ಹಲವರಿಗೆ ಹೆಂಡತಿಯಾಗಿರುವೆ. ಸೂಳೆಯರು ಏಕ ಪುರುಷನಲ್ಲಿ ಮಾತ್ರ ಬಗತನ ಮಾಡಬಲ್ಲರೆ ! ಲೋಕವಿರುದ್ಧವಾದ ನಿಮ್ಮ ನಡತೆಯು ಯಾರಿಗೆ ತಿಳಿಯದು ? ಸಾಕು ಸಾಕು" ಎಂದು ಸಿಟ್ಟಿನಿಂದ ಎದ್ದು ಆಕೆಯು ಹೊದ್ದಿದ್ದ ಸೆರಗನ್ನು ಸೆಳೆದು ತುರುಬಿಗೆ ಕೈಹಾಕಿದನು. ಆ ಸತೀಮಣಿಯು "ಹಾ ಭೀಮಾ ! ಹಾ ಯುಧಿಷ್ಠಿರಾ ! ಎಲೈ ಅರ್ಜುನನೇ ! ಕೆಟ್ಟೆನಲ್ಲಾ" ಎಂದು ಅರಚುತ್ತಿರಲು ಅವಳು ಕೂಗದಂತೆ ಕಂಠವನ್ನಾಕಿ, ಎತ್ತಿಕೊಂಡು ಹೊರಟುಬಿಟ್ಟನು.

ಅದನ್ನು ಕಂಡು ಆಶ್ರಮದ ಮುನಿಗಳು "ಎಲಾ ನೀಚಾ ! ಈಕೆ ಯಾರೆಂದು ತಿಳಿದಿರುವೆ? ಪಾಂಡವರ ರಾಣಿವಾಸವಲ್ಲವೇ? ಇವಳನ್ನು ಮುಟ್ಟಬೇಡ. ನಮ್ಮ ಧರ್ಮರಾಯನ ಮೇಲೆ ಆಣೆ. ಬೇಡ ಬಿಡು" ಎಂದು ಅಡ್ಡಬಂದು ತಡೆದರು. ಆ ದುರಳನು ಕತ್ತಿಯನ್ನು ಬೀಸಿ ಅವರನ್ನು ಓಡಿಸಿ "ಎಲೆ ತೊತ್ತೆ ! ಇನ್ನು ನೀನು ನನಗೆ ರಾಣಿ. ಪಾಂಡವರೇ ಆಣೆ ಇಟ್ಟಿರುವರು. ಈ ಮುನಿಜನರ ಆಣೆ ನಮ್ಮನ್ನೇನು ಮಾಡುವುದು? ನಡೆ" ಎಂದು ಆಶ್ರಮದಿಂದ ಅವಳನ್ನೆತ್ತಿಕೊಂಡು ಓಡಿದನು ಆಗ ಧೌಮ್ಯಮುನಿಯು ಮೊರೆಯಿಡುತ್ತಾ ಬಂದು ರಕ್ಷೋಘ್ನ ಮಂತ್ರವನ್ನು ಜಪಿಸುತ್ತಾ "ಜಯದ್ರಥಾ ! ಬೇಡ. ಬೇಡ. ಸಾಧ್ವಿಯನ್ನು ಹಿಡಿಯಬೇಡ. ಬಿಡು ಬಿಡು" ಎಂದು ಬರಲುತ್ತಿದ್ದನು. ಅವನು ಆ ಮಾತನ್ನು ಲಕ್ಷ್ಯಮಾಡದೆ ದ್ರೌಪದಿಯನ್ನು ರಥದ ಮೇಲೆ ಕುಳ್ಳಿರಿಸಿಕೊಂಡು ಬೇಗ ಬೇಗ ಓಡಿಸುತ್ತಾ ಹೋದನು. ಮುನಿಗಳೆಲ್ಲರೂ ಭಯದಿಂದ ಬಾಯಾರಿ, ತುಟಿಯೊಣಗಿ ಮೈನಡುಗಿ, ಕಂಠಧ್ವನಿ ಕುಗ್ಗಿ ದಿಕ್ಕುಪಾಲಾಗಿ ಓಡಿಹೋಗುತ್ತಿದ್ದರು.

ಆ ವೇಳೆಯಲ್ಲಿ ಪಾಂಡವರು ಬೇಟೆಯಾಡಿಕೊಂಡು ಹಿಂದಿರುಗಿ ಬರುತ್ತಾ ಈ ಬ್ರಾಹ್ಮಣರ ಗಜಬಜವನ್ನು ನೋಡಿ ಏನು ಸಮಾಚಾರವೆಂದು ವಿಚಾರಿಸಲು ನಡೆದ ವೃತ್ತಾಂತವನ್ನೆಲ್ಲಾ ಯಥಾವತ್ತಾಗಿ ಅವರಿಗೆ ತಿಳಿಸಿದರು. ಅದನ್ನು ಕೇಳಿ ಭೀಮಾರ್ಜುನರು ನಸುನಕ್ಕು "ಓಹೋ! ಇಷ್ಟೇನೋ! ಈ ಜಯದ್ರಥನು ತನ್ನ ಮರಣಕ್ಕೆ ತಾನೇ ಸಂಚಕಾರ ಕೊಟ್ಟು ದುಶ್ಶಳೆಯ ಮುತ್ತೈದೆತನಕ್ಕೆ ಕೇಡುತಂದುಕೊಂಡನು. ಅವಸಾನಕಾಲವಿವನಿಗೆ ಸಮಾಪಿಸಿತು" ಎಂದು ಕೂಡಲೇ ಓಡಿಹೋಗಿ ಆ ಜಯದ್ರಥನ ಬೆನ್ನುಹತ್ತಿ "ಎಲಾ ಭಂಡಾ! ಮುಂದಕ್ಕಡಿ ಇಟ್ಟರೆ ನಿನ್ನನ್ನು ತುಂಡುತುಂಡಾಗಿ ಖಂಡಿಸಿಬಿಡುವೆವು. ಅಲ್ಲಿಯೇ ನಿಲ್ಲು" ಎಂದು ಗದರಿಸಿದರು. ಅದನ್ನು ಕೇಳಿ ಆ ದುರುಳನು ತನ್ನ ಭಟ್ಟರನ್ನು ನೋಡಿ "ವೀರರಿರಾ! ನಾನು ಈ ಸೆರೆಯನ್ನು ತೆಗೆದುಕೊಂಡು ಮುಂದೆ ಮುಂದೆ ಹೊರಡುವೆನು. ನೀವು ಸ್ವಾಮಿದ್ರೋಹ ಮಾಡದೆ ಈ ಭೀಮಾರ್ಜುನರೊಂದಿಗೆ ಕಾದುತ್ತಾ ಇವರ ಪೆಟ್ಟುಗಳಿಗಂಜದೆ, ಇವರನ್ನು ಮುಂದಕ್ಕೆ ಬಿಡದೆ ತಡೆಯುತ್ತಿರಿ" ಎಂದು ಹೇಳಿ ಬೇಗ ಬೇಗ ರಥವನ್ನು ಹರಿಸಿಕೊಂಡು ಓಡಿದನು.

ಆಗ ಅರ್ಜುನನು "ಓಹೋ ಇವನು ಈ ಯುಕ್ತಿ ತೆಗೆದನೆ! ಹುಲು ಸೈನ್ಯದೊಂದಿಗೆ ಅಣ್ಣಯ್ಯನು ಕಾದಾಡುತ್ತಿರಲಿ. ನಾನೀಅಂತಃಪುರ ದ್ರೋಹಿಗೆ ಪ್ರಾಯಶ್ಚಿತ್ತ ಮಾಡಿ ಬರುವೆನು" ಎಂದು ಸೈನ್ಯವನ್ನು ಬಿಟ್ಟು ಮುಂದೆ ಮುಂದೆ ಹೋಗಿ ಜಯದ್ರಥನ ರಥವನ್ನು ಅಡ್ಡಯಿಸಿದನು. ಇತ್ತ ಭೀಮನು ಹೆಮ್ಮರಗಳನ್ನು ಮುರಿದು ಭಟರ ಮೇಲೆ ಬಿಸುಡುತ್ತಾ, ಅರೆಬಂಡೆಗಳನ್ನು ಕಿತ್ತು ಆನೆಕುದುರೆಗಳ ಮೇಲೆ ಬೀರುತ್ತಾ, ಕೈಗಳಿಂದ ರಥಗಳನ್ನೆತ್ತಿ ಒಗೆಯುತ್ತಾ ಕ್ಷಣಕಾಲದಲ್ಲಿ ಸೈನ್ಯವನ್ನೆಲ್ಲಾ ಧ್ವಂಸಮಾಡಿಬಿಟ್ಟನು. ಅಲ್ಲಿ ಜಯದ್ರಥಾರ್ಜುನರಿಗೆ ಘೋರ ಯುದ್ಧವಾಯಿತು. ಸೈಂಧವನೂ ಸಾಮಾನ್ಯ ಬಲನಲ್ಲ. ಒಳ್ಳೆಯ ವೀರನು. ಬಹಳ ಹೊತ್ತಿನ ತನಕ ಅರ್ಜುನನೊಂದಿಗೆ ಹೋರಾಡುತ್ತಿದ್ದನು ಅಷ್ಟು ಹೊತ್ತಿಗೆ ಭೀಮಸೇನನು ಸೈನ್ಯವನ್ನೆಲ್ಲಾ ಓಡಿಸಿ, ಅಲ್ಲಿಗೆ ಬಂದು "ದ್ರೌಪದೀ! ಹೆದರಬೇಡ. ಧೌಮ್ಯಮುನಿಯು ವೇದಮಂತ್ರಗಳೇ ನಿನಗೆ

ವಹ್ರುಸಂಜಹವಾಗಿದೆ. ಸ್ವಲ್ಪ ಸೈರಿಸು'' ಎಂದು ಹೇಳಿ ಸೈಂಧವನ ರಥಕ್ಕೆ ಹಾರಿ, ಅವನನ್ನು ಹಿಡಿದು ಬಲವಾಗಿ ಗುದ್ದಿದನು. ಅವನು ತಪ್ಪಿಸಿಕೊಂಡು ಭೀಮನನ್ನು ಹಿಡಿದು ತಿವಿದನು. ಅವರಿಬ್ಬರೂ ಬಹಳ ಹೊತ್ತಿನ ತನಕ ಮಲ್ಲಯುದ್ಧ ಮಾಡಿ ಸೋಲುಗೆಲವುಗಳು ತೋರದಂತೆ ಕಾದಿದರು. ಕೊನೆಗೆ ಭೀಮನು ಆ ಜಯದ್ರಥನ ಜುಟ್ಟು ಹಿಡಿದು ಜಗ್ಗಿ ಅವನ ಕೊರಳು ಕಡಿಯುವುದಕ್ಕೆ ಕತ್ತಿಯನ್ನೆತ್ತಿದನು. ಆಗ ಅರ್ಜುನನು ಅವನನ್ನು ತಡೆದು, ''ಅಣ್ಣಾ! ಇವನನ್ನೀಗ ಕೊಲ್ಲಬೇಡ. ಈ ದುರುಳನನ್ನು ಹಿಡಿದೊಯ್ದು ಹಿರಿಯಣ್ಣನ ಚರಣಸೀಮೆಯಲ್ಲಿ ಕೆಡಹೋಣ. ಆತನು ಕೊಂದರೆ ಕೊಲ್ಲಲಿ. ರಕ್ಷಿಸಿ ಬಿಟ್ಟರೂ ಬಿಡಲಿ. ಹಿರಿಯರಿರುವಾಗ ನಮಗೆ ಈ ಸ್ವಾತಂತ್ರ್ಯವೇತಕ್ಕೆ?'' ಎಂದನು. ಅದಕ್ಕೆ ಭೀಮನು ''ತಮ್ಮಾ, ಇವನನ್ನು ಕೊಂದುಬಿಡುವೆನೆಂದು ನಾನು ಸಂಕಲ್ಪಿಸಿದೆನಲ್ಲಾ! ಪ್ರತಿಜ್ಞಾಭಂಗವಾದರೆ ಏನು ಗತಿ?'' ಎಂದು ಕೇಳಲು ''ಭೀಮಣ್ಣಾ! ಸಂಕಲ್ಪಹಾನಿಯಾಗುವುದೆಂದು ನಾವು ಅನುಚಿತವಾದ ಕಾರ್ಯವನ್ನು ಮಾಡಬಹುದೇ? ದ್ರೌಪದಿಯು ರಥದಲ್ಲಿಯೇ ಕುಳಿತಿರಲಿ, ಈ ಕುನ್ನಿಯನ್ನು ಕೆಳಕ್ಕೆ ತಳ್ಳಿಬಿಡು. ಧೌಮ್ಯ ಮುನಿಗಳು ರಥವನ್ನೇರಿ ಬರಲಿ. ನಾವು ಇವನನ್ನು ಹಿಡಿದುಕೊಂಡು ಹೋಗೋಣ'' ಎಂದು ಭೀಮನ ಕೋಪವನ್ನು ಶಾಂತಮಾಡಿದನು. ಬಳಿಕ ಭೀಮನು ಆ ಜಯದ್ರಥನ ತೋಳುಗಳನ್ನು ಬಲವಾದ ಹುರಿಗಳಿಂದ ಬಿಗಿದು ಕಟ್ಟಿ ''ಎಲಾ ನಾರೀಚೋರಾ! ನಡೆ ನಡೆ ಎಂದು ಬಿಲ್ಲಿನ ಕೊನೆಯಿಂದ ತಿವಿಯುತ್ತಾ ಇದೇನು? ನಿನಗೆ ಕೌರವನ ಆಜ್ಞೆಯೋ? ಅಥವಾ ನಿನ್ನ ಹುಚ್ಚೋ! ಹೆಂಗಸನ್ನು ಕದಿಯುವ ವಿದ್ಯೆ ನಿನಗಾರು ಕಲಿಸಿದರು?'' ಎಂದು ಅವನನ್ನು ಯುಧಿಷ್ಠಿರನ ಬಳಿಗೆ ತಂದು ಕೆಡಹಿದನು.

ಧರ್ಮರಾಯನು ಅವನನ್ನು ನೋಡಿ ''ಭೀಮಾ ಇದೇನು? ಇವನು ಸಿಂಧು ದೇಶದ ಮಹಾರಾಜನಲ್ಲವೇ? ಇವನನ್ನೇಕೆ ಬಿಗಿದೆ? ಕಟ್ಟುಗಳನ್ನು ಬಿಚ್ಚಿಬಿಡು. ಅಯ್ಯೋ! ಪಾಪ! ನಿನಗೆ ಕರುಣೆಯಿಲ್ಲವೆ?'' ಎಂದು ನೊಂದುಕೊಂಡನು. ಅದಕ್ಕೆ ಭೀಮಸೇನನು ''ಅಣ್ಣಯ್ಯಾ! ಇವನನ್ನು ಕೊಂದುಹಾಕುವೆನೆಂದು ಪ್ರತಿಜ್ಞೆ ಮಾಡಿರುವೆನು. ಮದಾಂಧ

ನಾದ ಇವನನ್ನು ಕೊಲ್ಲದೆ ಉಳುಹಿದರೆ ನಾನು ಅಗ್ನಿಪ್ರವೇಶ ಮಾಡಬೇಕಾಗುವುದು" ಎಂದನು. ಯುಧಿಷ್ಠಿರನು "ತಮ್ಮಾ! ಇದು ಸರಿಯಲ್ಲ. ಇವನನ್ನು ಕೊಂದರೆ ನಮ್ಮ ತಂಗಿ ದುಶ್ಶಳೆಯು ವಿಧವೆಯಾಗಿ ನವೆಯಬೇಕಾಗುವುದಲ್ಲ! ಗಾಂಧಾರಿಯು ನಮ್ಮ ಕುಂತೀದೇವಿಯಂತೆ ತಾಯಿಯೇ ಅಲ್ಲವೇ? ಯುದ್ಧದಲ್ಲಿ ಕೈಸೆರೆ ಸಿಕ್ಕಿದವರನ್ನು ಕೊಲ್ಲುವುದು ರಾಜಧರ್ಮವಲ್ಲ. ಇದರ ಮೇಲೆ ನಾನು ಹೇಳತಕ್ಕುದೇನಿದೆ?" ಎಂದನು. ಭೀಮನು "ಜೀಯಾ! ಇವನನ್ನು ಕೊಂದ ಹೊರತು ನನ್ನ ಪ್ರತಿಜ್ಞೆಯು ನೆರವೇರುವುದಿಲ್ಲ. ಇದು ಭಂಗವಾಗದಂತೆ ತಕ್ಕ ಉಪಾಯವನ್ನು ನೀವೇ ಅಪ್ಪಣೆ ಕೊಡಿಸಬೇಕು" ಎಂದು ಪ್ರಾರ್ಥಿಸಲು, ರಾಯನು ಮುನಿಜನರನ್ನು ನೋಡಿ ಈಗ ಭೀಮನ ಪ್ರತಿಜ್ಞಾಭಂಗವುಂಟಾಗದಂತೆ ಯಾವ ಮಾರ್ಗವನ್ನು ಅವಲಂಬಿಸಬೇಕೆಂದು ಕೇಳಿದನು. ಧೌಮ್ಯಾದಿ ಮುನಿಜನರು ಧರ್ಮಶಾಸ್ತ್ರ ಪದ್ಧತಿಯನ್ನು ವಿಚಾರ ಮಾಡಿ "ಎಲೈ ರಾಯನೇ! ಮಾನಧನರಿಗೆ ಅವಮಾನ ಮಾಡುವುದೇ ವಧೆಯೆನಿಸುವುದು. ಇವನಿಗೆ ಮಾನಭಂಗ ಮಾಡಿ ಕಳುಹಿದರೆ ಅದೇ ಮರಣಕ್ಕೆ ಸಮವಾದ ಶಿಕ್ಷೆಯು" ಎಂದು ನಿರ್ಣಯಿಸಿ ಹೇಳಿದರು. ಆಗ ಅಣ್ಣನ ಆಜ್ಞೆಯಂತೆ ಭೀಮಸೇನನು ತನ್ನ ಕತ್ತಿಯಿಂದ ಆ ಜಯದ್ರಥನ ತಲೆಯ ಮೇಲೆ ಮೂರು ಪಟ್ಟೆಗಳನ್ನೆಳೆದು ಮುಂಡೆ ಬೋಳಾಗಿ ಮಾಡಿ, ಕಟ್ಟಿದ್ದ ಕಟ್ಟುಗಳನ್ನು ಬಿಚ್ಚಿಬಿಟ್ಟು "ಎಲಾ ಹೆಂಗಳ್ಳ! ನಿನ್ನ ಆಯುಸ್ಸು ಗಟ್ಟಿಯಾಗಿತ್ತು. ಅಣ್ಣಯ್ಯನ ಕರುಣೆಯಿಂದ ನೀನು ಇಂದಿಗೆ ಬದುಕಿಕೊಂಡೆ! ಛೀ ಕುನ್ನೀ! ಮನಬಂದ ಕಡೆ ಹೋಗು" ಎಂದು ಓಡಿಸಿದನು. ಅಲ್ಲಿದ್ದ ಸ್ತ್ರೀಜನರೆಲ್ಲರೂ ಘೊಳ್ಳೆಂದು ಹಾಸ್ಯಮಾಡಿ ಓಡಿಸಿಬಿಟ್ಟರು.

ಬಳಿಕ ಸೈಂಧವನು ಬಹು ಚಿಂತಾಕ್ರಾಂತನಾಗಿ "ಅಯ್ಯೋ! ಎಂತಹ ಅವಮಾನವು ಪ್ರಾಪ್ತವಾಯಿತು. ಈತಹ ದೇಹವನ್ನು ಉಳುಹಿಕೊಂಡು ಜೀವಿಸಬೇಕೆ? ಬೆಟ್ಟದಿಂದ ಉರುಳಿ ಸಾಯಲೇ? ಅಥವಾ ಹಾಸುಭಂಡೆಯ ಮೇಲೆ ತಲೆ ಚಚ್ಚಿಕೊಂಡು ಮಡಿಯಲೆ? ದೊಡ್ಡ ಮಡುವಿನಲ್ಲಿ ಧುಮುಕಿ ಪ್ರಾಣವನ್ನು ಬಿಡಲೇ? ಈಗ ನಾನೇನು ಮಾಡಲಿ?"

ಎಂದು ಹಲವು ಬಗೆಯಲ್ಲಿ ಚಿಂತಿಸುತ್ತಾ, ನಾನು ಸತ್ತರೆ ಫಲವೇನು ? ದುರ್ಮರಣದಿಂದ ಪ್ರಾಣತ್ಯಾಗ ಮಾಡಿಕೊಳ್ಳುವುದಕ್ಕಿಂತ ಪರಮೇಶ್ವರ ನನ್ನು ಕುರಿತು ತಪಸ್ಸು ಮಾಡಿ ವರಗಳನ್ನು ಪಡೆದು ಈ ಭೀಮಾರ್ಜುನ ರನ್ನು ಸಂಹರಿಸಿ ಹಗೆ ತೀರಿಸಿಕೊಳ್ಳುವೆನು, ಇದೇ ತಕ್ಕ ಉಪಾಯ ವೆಂದು ನಿಶ್ಚಯಿಸಿ ಘೋರಾರಣ್ಯಕ್ಕೆ ಹೋಗಿ ಗೌರೀರಮಣನನ್ನು ಕುರಿ ತು ದೃಢಚಿತ್ತದಿಂದ ತಪಸ್ಸು ಮಾಡಿದನು. ಪರಮೇಶ್ವರನು ಅವನ ನಿಷ್ಠೆಗೆ ಮೆಚ್ಚಿ ಪ್ರತ್ಯಕ್ಷನಾಗಿ ಬಂದು " ಎಲೈ ಜಯದ್ರಥನೇ ! ನಿನ್ನ ಭಕ್ತಿ ಗೆ ಮೆಚ್ಚಿದೆನು. ನಿನ್ನ ಅಭೀಷ್ಟವೇನು ? ಹೇಳು " ಎಂದು ಕೇಳಲು " ಎಲೈ ದೇವದೇವನೇ ! ಪಂಚಪಾಂಡವರನ್ನೂ ಒಂದೇ ದಿನ ಜಯಿ ಸುವ ವರವನ್ನು ನನಗೆ ಕರುಣಿಸಬೇಕು " ಎಂದು ಪ್ರಾರ್ಥಿಸಿದನು ಅದ ಕ್ಕಾಮೃತ್ಯುಂಜಯನು " ಜಯದ್ರಥಾ ! ಅರ್ಜುನನಿಗೆ ನಾನು ಪಾಶು ಪತಾಸ್ತ್ರವನ್ನು ಅನುಗ್ರಹಿಸಿರುವುದರಿಂದ ಅವನನ್ನು ಗೆಲ್ಲುವುದು ಇಂದ್ರಾದಿ ದೇವತೆಗಳಿಗೆ ಕೂಡ ಅಸಾಧ್ಯವಾಗಿರುವುದು. ಅವನೊಬ್ಬನನ್ನು ಹೊರ ತು ಉಳಿದ ನಾಲ್ವರನ್ನೂ ಒಂದು ದಿನ ನೀನು ಜಯಿಸುವೆ ಹೋಗು" ಎಂದು ಅನುಗ್ರಹಿಸಿ ಅದೃಶ್ಯನಾದನು. ಆ ತರುವಾಯ ತನಗೆ ಇಷ್ಟೇ ಸಾಕೆಂ ದು ತೃಪ್ತನಾಗಿ ಆ ಜಯದ್ರಥನು ಅಲ್ಲಿಂದ ತನ್ನ ರಾಜ್ಯಕ್ಕೆ ಹೊರಟು ಹೋದನು

ಇತ್ತ ಪಾಂಡವರನ್ನು ನೋಡಿಕೊಂಡು ಹೋಗಬೇಕೆಂದು ಮ ತ್ತೊಂದು ಸಲ ಮಾರ್ಕಂಡೇಯ ಮುನಿಯು ಅಲ್ಲಿಗೆ ಬಂದನು. ಯುಧಿ ಷ್ಠಿರನು ಆ ಮಹರ್ಷಿಗೆ ಆದರದಿಂದ ಸತ್ಕಾರಮಾಡಿ, ಜಯದ್ರಥನು ದ್ರೌ ಪದಿಯನ್ನು ಕದ್ದೊಯ್ದುದನ್ನೂ, ಭೀಮಾರ್ಜುನರು ಆ ಕಳ್ಳನನ್ನು ಹಿಡಿ ದು ತಂದು ಅವಮಾನ ಪಡಿಸಿ, ಬಿಟ್ಟು ಕಳುಹಿದುದನ್ನೂ ಹೇಳಿ, ತಮಗೆ ಸಂಭವಿಸಿರುವ ಕಷ್ಟಗಳನ್ನು ಹೇಳಿಕೊಂಡು ವ್ಯಸನಪಟ್ಟನು. ಅದಕ್ಕಾ ಮಾರ್ಕಂಡೇಯನು " ಎಲೈ ಧರ್ಮರಾಯನೇ ! ಇದಕ್ಕೆ ಚಿಂತಿಸಲೇಕೆ? ತ್ರೇತಾಯುಗದಲ್ಲಿ ಶ್ರೀ ರಾಮಪತ್ನಿಯಾದ ಸೀತಾದೇವಿಯನ್ನು ರಾವಣ ನು ಕದ್ದೊಯ್ದು ಒಂದು ವರುಷ ಸೆರೆಯಲ್ಲಿಟ್ಟಿರಲಿಲ್ಲವೆ? ಶ್ರೀ ರಾಮನು ಕಪಿಸೈನ್ಯದೊಂದಿಗೆ ಹೋಗಿ ಸಮುದ್ರಕ್ಕೆ ಸೇತುವನ್ನು ಕಟ್ಟಿ, ಆ ರಾಕ್ಷ

ಸನನ್ನು ಸಂಹರಿಸಿ ಸೀತೆಯನ್ನು ಕರೆದುಕೊಂಡು ಬಂದು ಅಯೋಧ್ಯೆಯಲ್ಲಿ ಪಟ್ಟಾಭಿಷಿಕ್ತನಾದನು" ಎಂದು ರಾಮಾಯಣದ ಕಥೆಯನ್ನು ಹೇಳಿ, ಆ ರಾಯನ ಮನಸ್ಸಿನ ಚಿಂತೆಯನ್ನು ಪರಿಹರಿಸಿ, ಆತನಿಂದ ಬೀಳ್ಕೊಂಡು ಸ್ವೇಚ್ಛೆಯಿಂದ ಹೊರಟು ಹೋದನು. ಪಾಂಡವರು ಶ್ರೀ ಕೃಷ್ಣಾನುಗ್ರಹದಿಂದ ತಮಗೆ ಬಂದ ವಿಪತ್ತು ಪರಿಹರವಾಯಿತೆಂದು ಭಗವಂತನನ್ನು ಧ್ಯಾನಿಸುತ್ತಾ ಆ ವನದಲ್ಲಿ ಸುಖವಾಗಿದ್ದರು.

---

## ಹದಿಮೂರನೆಯ ಸಂಧಿ.

—೦—

ಸೂಚನೆ:—ಕೌರವನು ಮಾರಣಮಂತ್ರದಿಂದ ಮೃತ್ಯುವನ್ನು ಪಡೆದು, ಪಾಂಡವರನ್ನು ಕೊಂದು ಬಾರೆಂದು ನೇಮಿಸಿ ಕಳುಹಿದನು. ಆ ಯಾಗದಲ್ಲಿ ಹುಟ್ಟಿದ ಮಹಾಭೂತವು ಪಾಂಡವರನ್ನು ನುಂಗಬೇಕೆಂದು ಬರುತ್ತಿರಲು, ಶ್ರೀ ಕೃಷ್ಣನು ಇದನ್ನು ತಿಳಿದು, ಯಮನಿಗೆ ವಿಷದ ಕೊಳದ ಬಳಿ ಕಾದಿದ್ದು ಪಾಂಡವರನ್ನು ಮೈಮರೆಸಬೇಕೆಂದು ನೇಮಿಸಿ, ತಾನು ಬ್ರಾಹ್ಮಣನ ಅರಣಿಯನ್ನು ಕದ್ದುಕೊಂಡು ಓಡಲು, ಆ ಬ್ರಾಹ್ಮಣನ ಮೊರೆ ಕೇಳಿ ಪಾಂಡವರು ಅದನ್ನಟ್ಟಿಕೊಂಡು ಹೋದರು. ಅದು ಯಮನಿದ್ದ ಮಡುವಿನ ಬಳಿ ಅರಣಿಯನ್ನು ಬಿಸುಟು ಅದೃಶ್ಯವಾಯಿತು. ಭೀಮಾದಿಗಳು ನೀರು ಕುಡಿಯಲಿಕ್ಕೆ ಹೋಗಿ ವಿಷಪಾನ ಮಾಡಿ ಒರಗಲು ಯುಧಿಷ್ಠಿರನು ಯಕ್ಷ ಪ್ರಶ್ನೆಗಳಿಗೆ ಉತ್ತರ ಕೊಟ್ಟು ಅವರನ್ನೆಲ್ಲ ಬದುಕಿಸಿದನು.

ಪಾಂಡವರ ವನವಾಸದ ಅವಧಿಯಲ್ಲಿ ಆರು ತಿಂಗಳು ಮಾತ್ರ ಉಳಿಯಿತು. ಅಷ್ಟರಲ್ಲಿಯೇ ಅವರಿಗೆ ಮತ್ತೊಂದು ವಿಪತ್ತು ಸಂಭವಿಸಿತು. ಯುಧಿಷ್ಠಿರನು ಮುನಿಗಳ ಸಹವಾಸದಲ್ಲಿ ಧರ್ಮಕಥಾಶ್ರವಣ ಮಾಡಿಕೊಂಡು ಸುಖವಾಗಿದ್ದನು. ವಿರಾಟರಾಯನ ಮೈದುನನಾದ ಕೀಚಕನು ಕೌರವನ ರಾಜ್ಯದೊಳಕ್ಕೆ ನುಗ್ಗಿ, ಆ ದೊರೆಯ ಹಸುಗಳನ್ನು ಕೊಳ್ಳೆ ಹಿಡಿದುಕೊಂಡು ಹೋದನು. ಈ ಸುದ್ದಿಯು ಸುಯೋಧನನಿಗೆ ತಿಳಿಯಲು, ಅವನಾ ಕೀಚಕನ ದರ್ಪಭಂಗ ಮಾಡಿ ಬರಬೇಕೆಂದು ತನ್ನ ಸೈನ್ಯವನ್ನು ಕಳುಹಿದನು. ಭೀಷ್ಮನು, ದ್ರೋಣನು, ಕೃಪನು, ವಿದುರನು,

ಅಶ್ವತ್ಥಾಮನು, ಕರ್ಣನು ಶಕುನಿ ಮೊದಲಾದ ವೀರಶ್ರೇಷ್ಠರೆಲ್ಲರೂ ತನ್ನ ತನ್ನ ಸೇನೆಯೊಂದಿಗೆ ಆ ಕೀಚಕನನ್ನು ಅಟ್ಟಿಕೊಂಡು ಹೋಗಿ ತಡೆದರು. ಭೀಷ್ಮದ್ರೋಣರು ಆ ತುರುಗಳನ್ನು ಅಡ್ಡಗಟ್ಟಿ "ಎಲಾ ದ್ರೋಹೀ ! ಸಾಮಾನ್ಯ ಪಾಳೆಯಗಾರನಾದ ನಿನಗಿಷ್ಟು ಸೊಕ್ಕೇರಿತೆ ? ಅದನ್ನು ಇಳಿಸುವೆವು. ನಿಲ್ಲು ನಿಲ್ಲು " ಎಂದು ಹೇಳಿ ಅವನ ಮೇಲೆ ಕ್ರೂರವಾದ ಬಾಣಗಳನ್ನು ಪ್ರಯೋಗಿಸಿದರು. ಕೀಚಕನು ಹೆದರದೆ ಅವರ ಬಾಣಗಳನ್ನು ಮಧ್ಯದಲ್ಲಿಯೇ ಕತ್ತರಿಸಿಬಿಟ್ಟನು. ಆಗ ಕರ್ಣನು ಕೋಪಿಸಿಕೊಂಡು ಎರಡು ಕೂರಂಬಿನಿಂದ ಆ ಕೀಚಕನ ಕೈಯಲ್ಲಿ ಹಿಡಿದಿದ್ದ ಧನುಸ್ಸನ್ನು ಕಡಿದು ಹಾಕಿದನು. ಭೀಷ್ಮನು ತುರಗಸಹಿತವಾದ ಅವನ ರಥವನ್ನು ಹುಡಿಹುಡಿ ಮಾಡಿದನು. ದ್ರೋಣನು ಅಮೋಘಾಸ್ತ್ರವನ್ನು ಪ್ರಯೋಗಿಸಿ, ಅವನ ಎದೆಯೂ ಹೊಟ್ಟೆಯೂ ಬಿರಿದುಹೋಗುವಂತೆ ಗಾಯಮಾಡಿದನು. ಕೀಚಕನು ಅವಮಾನ ಹೊಂದಿ, ವಿರಾಟನ ಮತ್ಸ್ಯನಗರಕ್ಕೆ ಓಡಿಹೋದನು. ಕುರುಸೇನೆಯು ತುರುಮಂದೆಯನ್ನು ಕೂಡಿಕೊಂಡು ಆ ಇರುಳಿನಲ್ಲಿಯೇ ಹಸ್ತಿನಾಪುರಿಗೆ ಬಂದು ಸೇರಿತು. ಈ ಜಯವು ಸಿಕ್ಕಿದರೂ ಮನಸ್ಸಂತೋಷವಿಲ್ಲದೆ, ವೈರಿನಿಗ್ರಹೋಪಾಯವಾವುದೆಂಬ ಚಿಂತೆಯೇ ಬಾಧಿಸುತ್ತಿತ್ತು.

ಮರುದಿನ ಮಾರಣಹೋಮ ಮುಂತಾದ ಆಭಿಚಾರಕಕ್ರಿಯೆಗಳಲ್ಲಿ ಪ್ರಸಿದ್ಧನಾಗಿದ್ದ ಕನಕನೆಂಬ ಮಂತ್ರಗಾರನನ್ನು ಕರೆಯಿಸಿ, ಕುರುಪತಿಯು ಪಾಂಡವರನ್ನು ಕೊಲ್ಲಲು ತಕ್ಕ ಪ್ರಯತ್ನ ಮಾಡೆಂದು ಹೇಳಿದನು. ಅವನು ಕೈಮುಗಿದುಕೊಂಡು "ಎಲೈ ಸಾರ್ವಭೌಮನೇ ! ನನ್ನ ಶಕ್ತಿಯನ್ನು ಹೇಳುವೆನು ಕೇಳು. ಶತ್ರುವು ಅತಳಾದಿ ಅಧೋಲೋಕಗಳೇಳರಲ್ಲಿ ಇರಲಿ. ಅಥವಾ ಸತ್ಯಲೋಕ ಮುಂತಾದ ಏಳು ಊರ್ಧ್ವಲೋಕಗಳಲ್ಲಿರಲಿ. ಅವನನ್ನು ನಿರ್ನಾಮ ಮಾಡದೆ ಬಿಡತಕ್ಕವನಲ್ಲ. ನಿನ್ನ ವೈರಿಗಳಾದ ಪಾಂಡವರು ನನಗೆ ಎಷ್ಟರ ಮಾತ್ರ ! ನಾನು ಮಾರಣಹೋಮ ಮಾಡಿ, ಆ ಪಾಂಡವರನ್ನು ಕೊಂದು, ಹೋಮಾಗ್ನಿಯಲ್ಲಿ ಪೂರ್ಣಾಹುತಿಯಾಗಿ ಅವರ ತಲೆಗಳನ್ನು ಒಪ್ಪಿಸದಿದ್ದರೆ ನನ್ನ ಈ ಶರೀರವನ್ನೇ ಯಜ್ಞೇಶ್ವರನಿಗೆ ಸಮರ್ಪಿಸುವೆನೆಂದು ತಿಳಿ. ಆ ವೀರರನ್ನು

ಪರಮೇಶ್ವರನು ತನ್ನ ಜಡೆಮುಡಿಯ ನಡುವೆ ಮಡಗಿಕೊಂಡು ರಕ್ಷಿಸುತ್ತಿರಲಿ. ಅಥವಾ ನಾರಾಯಣನು ತನ್ನ ಹೊಕ್ಕುಳಲ್ಲಿ ಅವರನ್ನು ಬೈತಿರಿಸಿಕೊಂಡಿರಲಿ. ಇಲ್ಲವೇ ಬ್ರಹ್ಮನು ತನ್ನ ಕಮಂಡಲದ ಮಧ್ಯದಲ್ಲಿ ಅವನನ್ನು ಇರಿಸಿಕೊಂಡಿರಲಿ. ಅವರನ್ನು ಕಡಿದು ಅಗ್ನಿಗೆ ಆಹಾರವಾಗಿ ಕೊಡಿಸುವೆನು. ಇದರಲ್ಲಿ ಸ್ವಲ್ಪವೂ ಸಂಶಯವಿಲ್ಲವೆಂದು ನಂಬು " ಎಂದು ಹೇಳಿದನು. ಇದನ್ನು ಕೇಳಿ ದುರ್ಯೋಧನನು ಬಲು ಸಂತೋಷಗೊಂಡು ಆ ಕನಕನನ್ನು ವಿಶೇಷವಾದ ಬಹುಮಾನಗಳಿಂದ ಮನ್ನಿಸಿ, ಹೋಮಸಾಧನಗಳನ್ನೆಲ್ಲಾ ಒದಗಿಸಿಕೊಟ್ಟು, ಶತ್ರುವಿನಾಶವಾಗುವಂತೆ ಮಾರಣಹೋಮ ಮಾಡಬೇಕೆಂದು ಹೇಳಿ ವೇದಜ್ಞರಾದ ಬ್ರಾಹ್ಮಣರನ್ನು ಅವನ ಸಹಾಯಕ್ಕೆ ಕೊಟ್ಟನು. ಆ ಕನಕನು ಇದರಿಂದ ತನಗೆ ಉತ್ತಮ ಯಶಸ್ಸು ಬರಬೇಕೆಂದು ಯೋಚಿಸಿ, ಬಹು ಕ್ರೂರವಾದ ಮಂತ್ರತಂತ್ರಗಳಿಂದ ಆಭಿಚಾರ ಹೋಮವನ್ನಾರಂಭಿಸಿ, ಚರುಘೃತಾದಿ ಪೂಜಾದ್ರವ್ಯಗಳನ್ನು ಹೋಮಮಾಡಿ ಪೂರ್ಣಾಹುತಿ ಕೊಡುವ ವೇಳೆಯಲ್ಲಿ ಯಜ್ಞೇಶ್ವರನನ್ನು ಪ್ರಾರ್ಥಿಸಲು. ಆತನ ಅನುಗ್ರಹದಿಂದ ಅಗ್ನಿಕುಂಡದಲ್ಲಿ ಭಯಂಕರವಾದ ಒಂದು ಮಹಾಭೂತವು ಉದಿಸಿತು. ಆ ಭೂತಕ್ಕೆ ಮೂರು ಮೋರೆಗಳೂ, ಆರು ಬಾಯಿಗಳೂ, ಈರಾರು ಕಣ್ಣುಗಳೂ, ಮೂರು ಕಾಲುಗಳೂ, ಏಳು ಕೈಗಳೂ, ನೆತ್ತಿಯಲ್ಲಿ ಮತ್ತೊಂದು ಕಣ್ಣೂ, ಕೈಗಳಲ್ಲಿ ಕಪಾಲವೂ, ತ್ರಿಶೂಲಾದಿ ಆಯುಧಗಳೂ ಇದ್ದು, ರೌದ್ರರೂಪದಿಂದ ಎಲ್ಲರನ್ನೂ ಬೆದರಿಸುವಂತೆ ಇತ್ತು. ಅದು ಕನಕನ ಬಳಿಯಲ್ಲಿ ಬಂದು ನಿಂತು, "ನನಗೆ ಏನಪ್ಪಣೆ? ಬೇಗ ಹೇಳು" ಎಂದು ಗರ್ಜಿಸಿತು. ಆಗ ಕನಕನು ಅದನ್ನು ನೋಡಿ "ಎಲೈ ಭೂತವೇ! ನೀನು ಪಾಂಡವರಿರುವ ಅರಣ್ಯಕ್ಕೆ ಹೋಗಿ ಅವರನ್ನು ಆಹುತಿಯಾಗಿ ತೆಗೆದುಕೊಂಡು ಭಕ್ಷಿಸು. ಇದೇ ನಿನಗೆ ಆಜ್ಞೆ" ಎಂದನು. ಕೂಡಲೇ ಅದು ಕೋಪಾಗ್ನಿಯಿಂದ ಭುಗಿಭುಗಿಸುತ್ತಾ ಬ್ರಹ್ಮಾಂಡಮಂಡಲವನ್ನೆಲ್ಲಾ ತುಂಬುವಂತೆ ಹೊಗೆಯನ್ನು, ಮುಚ್ಚಿ, ಪಾಂಡವರನ್ನು ನುಂಗಿಬಿಡಬೇಕೆಂದು ಅತಿ ವೇಗದಿಂದ ಓಡಿಬರುತ್ತಿದ್ದಿತು. ಅದು ನಡೆದುಬರುವ ರಭಸಕ್ಕೆ ಮರಗಳ ಮೇಲಿರುವ ಪಕ್ಷಿಗಳೆಲ್ಲವೂ ಸುಟ್ಟು ಉದುರುತ್ತಿ

ದ್ದುವು. ಮೃಗಗಳು ಸೀದುಬೀಳುತ್ತಿದ್ದುವು. ಸಿಕ್ಕಿದ ಜನರು ನುಗ್ಗಾ ಗುತ್ತಿದ್ದರು. ಇತ್ತ ದ್ವಾರಕೆಯಲ್ಲಿ ಶ್ರೀ ಕೃಷ್ಣನು ಆ ಭೂತದ ಉತ್ಪತ್ತಿಯನ್ನು ತಿಳಿದು "ಓಹೋ! ಪಾಂಡವರಿಗೆ ಅಳಿಗಾಲವು ಬಂತು. ಮುಂದೇನು ಗತಿ? ಈ ವೇಳೆ ನಾನು ಕೈಬಿಟ್ಟರೆ ಅವರು ನಾಶವಾಗಿ ಹೋಗುವರು. 'ಮಮಪ್ರಾಣಾಹಿ ಪಾಂಡವಾಃ' ಎಂಬ ಸಂಕಲ್ಪವು ವ್ಯರ್ಥವಾಗುವುದಲ್ಲ! ಈಗಲೇ ಇದಕ್ಕೆ ತಕ್ಕ ಪ್ರತಿಕ್ರಿಯೆ ಮಾಡಬೇಕು" ಎಂದು ಚಿಂತಿಸಿ, ಯಮನನ್ನು ನೆನೆಯಲು, ಒಡನೆಯೇ ಅವನು ಬಂದು ಕೃಷ್ಣನಿಗೆ ನಮಸ್ಕರಿಸಿ "ದೇವಾ! ತನಗೆ ಏನಪ್ಪಣೆ" ಎಂದು ಕೇಳಿದನು. ಶ್ರೀ ಕೃಷ್ಣನು "ಎಲೈ ಸೂರ್ಯಪುತ್ರನೇ! ಕೌರವನು ಮಾಡಿಸಿದ ಮಾರಣಹೋಮದಲ್ಲಿ ಉದಿಸಿದ ಭೂತವು ಪಾಂಡವರನ್ನು ನುಂಗಿಬಿಡುವುದಕ್ಕೆ ಅರಣ್ಯಕ್ಕೆ ಹೋಗುತ್ತಿದೆ. ಅದು ಪಾಂಡವರು ಹೊರತು ಉಳಿದವರ ಪ್ರಾಣಗಳನ್ನು ಮುಟ್ಟದು. ವಿಷದ ಕೊಳದೊಳಗಿದ್ದರೆ ಅವರನ್ನು ಕೊಲ್ಲದು. ತನಗೆ ಆಹಾರ ಸಿಕ್ಕದಿದ್ದರೆ ಅದು ಮರಳಿ ತನ್ನನ್ನು ಕಳುಹಿದ ಕನಕನ ಬಳಿಗೆ ಹಿಂದಿರುಗಿ ಹೋಗಿ ಅವನನ್ನು ಮುರಿದು, ಆ ರಾಯನನ್ನು ಕೊಂದುಹೋಗುವುದು. ಇದಕ್ಕೆ ಒಂದು ಉಪಾಯವನ್ನು ಹೇಳುವೆನು ಕೇಳು. ನೀನು ಕಾಡಿನಲ್ಲಿ ವಿಷಸರೋವರವನ್ನು ಕಾದುಕೊಂಡಿರು. ನಾನು ಆ ಪಾಂಡವರ ಅಗ್ನಿಹೋತ್ರ ಶಾಲೆಯಲ್ಲಿ ಮೃಗರೂಪದಿಂದ ಹೋಗಿ ಔಪಾಸನದ ಅರಣಿಯನ್ನು ಹೊತ್ತುಕೊಂಡು ಓಡುವೆನು. ಆಗ ಪಾಂಡವರು ಅದನ್ನು ತೆಗೆದುಕೊಳ್ಳುವುದಕ್ಕೋಸ್ಕರ ನನ್ನ ಬೆನ್ನಟ್ಟಿ ಬರುವರು. ಬಹು ದೂರ ಓಡುವುದರಿಂದ ಮಾರ್ಗಾಯಾಸಕ್ಕೆ ಬಳಲಿ ಅವರು ಬಾಯಾರಿಕೆಯಿಂದ ಆ ಕೊಳದ ವಿಷಜಲವನ್ನು ಪಾನಮಾಡಿಬಿಡುವರು. ಇದರಿಂದ ಅವರು ಸತ್ತುಹೋಗುವರು. ಆಗ ನೀನು ಯುಧಿಷ್ಠಿರನೊಡನೆ ಯಕ್ಷರೂಪದಿಂದ ಧರ್ಮಸೂಕ್ಷ್ಮಗಳನ್ನು ಕೇಳಿ, ಅವನ ಉತ್ತರಗಳಿಗೆ ಮೆಚ್ಚಿ, ಅವನ ತಮ್ಮಂದಿರನ್ನು ಒಬ್ಬೊಬ್ಬರನ್ನಾಗಿ ಬದುಕಿಸುತ್ತ ಬಾ. ಪಾಂಡವರು ಸತ್ತರೆಂದು ಭೂತವು ಹಿಂದಿರುಗಿ ಹೋಗಿ, ಆ ಕನಕನನ್ನು ಕೊಂದುಬಿಡುವುದು. ಪಾಂಡವರ ಪ್ರಾಣರಕ್ಷಣೆಯೂ ಆಗುವುದು" ಎಂದು ಆಜ್ಞಾಪಿಸಿದನು.

ಬಳಿಕ ಯಮನು ಶ್ರೀ ಕೃಷ್ಣನ ಅಪ್ಪಣೆಯಂತೆ ಯಕ್ಷರೂಪವನ್ನು ಧರಿಸಿ ವಿಷಸರೋವರದ ಬಳಿಗೆ ಹೋಗಿ, ಪಾಂಡವರ ಆಗಮನವನ್ನು ನಿರೀಕ್ಷಿಸಿಕೊಂಡಿದ್ದನು.

ಭಕ್ತಬಂಧುವಾದ ಶ್ರೀ ಕೃಷ್ಣನು ಪಾಂಡವರಿಗೆ ಸಂಭವಿಸುವ ಮೃತ್ಯುಬಾಧೆಯನ್ನು ಪರಿಹರಿಸಿ ಅವರನ್ನು ಸಲಹಲಿಕ್ಕೋಸ್ಕರ ದ್ವಾರಕಾ ಪಟ್ಟಣದಿಂದ ಆ ವನಕ್ಕೆ ಬಂದು ಮೃಗರೂಪದಿಂದ ಹೋಮಾಗ್ನಿಯನ್ನಿಟ್ಟಿರುವ ಬ್ರಾಹ್ಮಣಾಲಯಕ್ಕೆ ನುಗ್ಗಿದನು. ಆಗ ಸಂಧ್ಯಾಕಾಲ ಆಶ್ರಮದಲ್ಲಿದ್ದ ಮುನಿಜನರೆಲ್ಲರೂ ಸಂಧ್ಯಾವಂದನೆಗಾಗಿ ಜಲಾಶಯಗಳ ಬಳಿಗೆ ಹೋಗಿದ್ದರು. ಆ ಕಪಟಮೃಗವು ಬ್ರಾಹ್ಮಣನ ಅರಣಿಯನ್ನು ಹೊತ್ತುಕೊಂಡು ಓಡಿಹೋಯಿತು. ಪರ್ಣಶಾಲೆಯೊಳಗಿದ್ದ ಮುನಿಪತ್ನಿಯು "ಓಹೋ ಮೋಸವಾಯಿತು. ಜಿಂಕೆಯು ಮರಿಯು ಅರಣಿಯ ತುಂಡನ್ನು ಹೊತ್ತುಕೊಂಡು ಓಡಿಹೋಯಿತು. ಯಜಮಾನರು ಮನೆಯಲ್ಲಿಲ್ಲ. ಮತ್ತಾರಿಗಾದರೂ ತಿಳಿಸೋಣವೆಂದರೆ ಯಾರೂ ಕಾಣಿಸುವುದಿಲ್ಲವಲ್ಲ! ಎಂದು ಅಬ್ಬರಿಸಿಕೊಂಡಳು. ಅಷ್ಟರಲ್ಲಿ ಆ ಗೃಹಸ್ಥನು ಬಂದು ನೋಡಿ ಗಾಬರಿಗೊಂಡು, ಕೂಡಲೇ ಪಾಂಡವರ ಆಶ್ರಮಕ್ಕೆ ಓಡಿಹೋಗಿ "ಅಯ್ಯಾ! ಧರ್ಮಪುತ್ರನೇ! ಇದೇನು ಅನ್ಯಾಯ? ನನ್ನ ಅರಣಿಯನ್ನು ಮೃಗವು ತೆಗೆದುಕೊಂಡು ಕಾಡಿನೊಳಕ್ಕೆ ಓಡಿಹೋಯಿತು. ನನ್ನ ಅಗ್ನಿಹೋತ್ರಸಾಧನವಾದ ಅದನ್ನು ತಂದುಕೊಡದಿದ್ದರೆ ನಾನು ಪ್ರಾಣವನ್ನೇ ಬಿಡಬೇಕಾಗುವುದು. ಈ ದೋಷವು ನಿನ್ನನ್ನೇ ಹೊಂದುವುದು. ನಿನ್ನ ಇಷ್ಟವಿದ್ದಂತೆ ಮಾಡು" ಎಂದು ಮೊರೆಯಿಟ್ಟನು.

ಅದನ್ನು ಕೇಳಿ ಯುಧಿಷ್ಠಿರನು ಅಯ್ಯೋ! ಇದೂ ಒಂದು ನಿಂದೆಗೆ ಒಳಗಾದೆನೆ? ಅರಣಿಯನ್ನು ತಂದುಕೊಡದಿದ್ದರೆ ಈ ಬ್ರಾಹ್ಮಣನು ಸಾಯುವನು. ಈ ಬ್ರಹ್ಮಹತ್ಯೆದೋಷವು ನನಗೆ ತಪ್ಪುವುದಿಲ್ಲ. ಏನಾದರೂ ಮಾಡಿ ಆ ಮೃಗವನ್ನು ಹುಡುಕಿ ಹಿಡಿದು, ಇವನ ಅರಣಿಯ ಮರವನ್ನು ತಂದುಕೊಡಬೇಕೆಂದು ನಿಶ್ಚಯಿಸಿ, ಧನುರ್ಬಾಣಗಳನ್ನು ತೆಗೆದು

ಕೊಂಡು ಹೊರಟನು. ಹುಲ್ಲೆಯು ಎಲ್ಲಿಗೆ ಓಡಿಹೋಯಿತೋ ? ಅಣ್ಣನೊಬ್ಬನೇ ಏನುಮಾಡಬಲ್ಲನು ? ಎಲ್ಲರೂ ಹೋಗಿ ದಿಕ್ಕುದಿಕ್ಕಿನಲ್ಲಿಯೂ ಹುಡುಕಿ ಕಂಡು ಹಿಡಿಯೋಣವೆಂದು ಭೀಮಾದಿ ಸಹೋದರರು ನಾಲ್ವರೂ ಆಯುಧಪಾಣಿಗಳಾಗಿ ಆತನ ಹಿಂದೆಯೇ ಹೊರಟರು. ಅವರು ಮೃಗದ ಹೆಜ್ಜೆಯು ಗುರುತುಗಳನ್ನು ನೋಡಿಕೊಂಡು ಅದು ಹೋದ ಮಾರ್ಗದಲ್ಲಿಯೇ ಬೇಗ ಬೇಗ ಪ್ರಯಾಣ ಮಾಡಿ ಬಹುದೂರ ಹೋಗುವಾಗ್ಗ ಆ ಮೃಗವು ಬಹುಸಮಿಾಪದಲ್ಲಿಯೇ ಕಣ್ಣಿಗೆ ಕಾಣಿಸಿತು. ಪಾಂಡವರು ಬಹು ಸಂತೋಷದಿಂದ ಅದನ್ನು ಹಿಡಿಯಲು ಓಡುತ್ತಾ ಬಂದ ಹಾಗೆಲ್ಲಾ ಅದು ದೂರ ಪ್ರದೇಶದಲ್ಲಿ ಕಾಣುತ್ತಿತ್ತು. ಆ ಮೃಗವು ಒಂದು ಸಾರಿ ಅರಣಿಯನ್ನು ನೋಡುತ್ತಾ, ಮತ್ತೊಂದು ಸಲ ಇಕ್ಕೆಲಗಳನ್ನು ನೋಡುತ್ತಾ ತನ್ನ ಚಂಚಲ ದೃಷ್ಟಿಯಿಂದ ಭೀತಿಗೊಂಡಂತೆ ನಟಿಸುತ್ತಾ ಕೈಗೆ ಸಿಕ್ಕುವಂತೆ ಹತ್ತಿರ ಸಿಂದು, ಹಿಡಿಯಲಿಕ್ಕೆ ಬಂದರೆ ಪುಟನೆಗೆದು ಹಾರುತ್ತಾ ಆ ಪಾಂಡವರನ್ನು ವಿಷದ ಸರೋವರವಿರುವ ಸ್ಥಳಕ್ಕೆ ಕೊಂಡುಹೋಯಿತು.

ತ್ರೇತಾಯುಗದಲ್ಲಿ ಶ್ರೀರಾಮನು ಮಾಯಾಮೃಗರೂಪನಾದ ಮಾರೀಚನನ್ನು ಓಡಿಸಿಕೊಂಡು ಹೋದಾಗ ಅದು ಅವನ ಕೈಗೆ ಸಿಕ್ಕದೆ ಬಹುದೂರ ಒಯ್ದಂತೆ ಈ ಮಾಯಾಮೃಗವೂ ಪಾಂಡವರನ್ನು ಆಶ್ರಮದಿಂದ ದೂರಪ್ರದೇಶಕ್ಕೆ ಕರೆದುಕೊಂಡು ಹೋಯಿತು. ' ಅಗೋ ಮೃಗವು ಇರುಬಿನಲ್ಲಿದೆ. ಇಗೋ ಆ ಮರದ ಗುಂಪಿಗೆ ಓಡಿಹೋಯಿತು. ಬಾಣಪ್ರಯೋಗಮಾಡಿ ಬೇಗ ಬಿಡು. ಸಿಡಿಬಲೆಯನ್ನೊಡ್ಡು. ತಪ್ಪಿಸಿಕೊಂಡು ಹೋದೀತು. ಈಟಿಯಿಂದ ತಿವಿ ಎಂದು ಒದರುತ್ತಾ ಉಪಾಯವಾಗಿ ಬಲೆಹಾಕಿ ಆ ಕಪಟಮೃಗವನ್ನು ಬಳಕ್ಕೆ ಸಿಕ್ಕಿಸಿ ಹಿಡಿದುಕೊಂಡರು. ಅರಣಿಯೂ ಸಿಕ್ಕಿ ತಾವು ಬಂದ ಕಾರ್ಯವು ಸಫಲವಾಯಿತು. ಬೇಸಿಗೆಯ ಬಿಸಿಲು. ಧಗೆಯೊಂದು ಕಡೆ, ಆಯಾಸವೊಂದು ಕಡೆ. ಗಂಟಲು ಒಣಗಿಹೋಗುತ್ತಿದೆ. ದಾಹವನ್ನು ತಡೆಯಕೂಡದು. ಮಾತನಾಡಲಿಕ್ಕೆ ನಾಲಗೆಯಲ್ಲಿ ದ್ರವವೇ ಇಲ್ಲ. ಹತ್ತಿರವಿದ್ದ ಬಳ್ಳಿಯ ಮರೆಯಲ್ಲಿಯೇ ಎಲ್ಲರೂ ಮಲಗಿಬಿಟ್ಟರು. ಆಗ ಯುಧಿಷ್ಠಿರನು ತಮ್ಮಂದಿರನ್ನು ನೋ

ಡಿ "ನಮ್ಮ ಆಶ್ರಮದಿಂದ ಬಹು ದೂರ ಬಂದುಬಿಟ್ಟೆವು. ಈ ಕಾಡಿನಲ್ಲೆಲ್ಲಿಯೂ ನೀರೇ ಸಿಕ್ಕುವುದಿಲ್ಲ. ಮುಂದಕ್ಕಡಿಯಿಡಲಿಕ್ಕೇ ಶಕ್ತಿಯಿಲ್ಲ. ಮುಂದೆ ಏನು ಉಪಾಯ ಮಾಡೋಣ. ಬೇಗ ಬೇಗ ಹೋಗದಿದ್ದರೆ ಆ ಬ್ರಾಹ್ಮಣನು ಪ್ರಾಣಗಳನ್ನು ನೀಗುವನು. ತಮ್ಮಾ! ನಕುಲಾ! ನೀನು ಹೋಗಿ ತಾವರೆ ಎಲೆಯ ದೊನ್ನೆಯಲ್ಲಿ ನಿರ್ಮಲವಾದ ಉದಕವನ್ನು ತೆಗೆದುಕೊಂಡು ಬಾ. ಕುಡಿದು ಹೊರಡೋಣ" ಎಂದು ನಿಯಮಿಸಿದನು.

ಆ ಕಾಲದ ಜನರು ಗುರುಹಿರಿಯರಲ್ಲಿ ಬಹು ಭಕ್ತಿವಿಶ್ವಾಸಗಳನ್ನಿಟ್ಟುಕೊಂಡಿದ್ದರು. ಅವರ ಮಾತಿಗೆ ಎದುರುತ್ತರ ಹೇಳುವ ಪದ್ಧತಿಯೇ ಇರಲಿಲ್ಲ. ಅವರು ಬಂದಾಗ ತಾವು ನಿಂತಿರದೆ ಕುಳಿತುಕೊಳ್ಳುವುದು, ಮನಸ್ವಿ ಹರಟುವುದು, ಅಗೌರವವನ್ನು ತೋರಿಸುವುದು, ಅವಿಧೇಯತೆಯನ್ನು ತೋರಿಸುವುದು, ಮುಂತಾದ ಅಕೃತ್ಯಗಳು ಪೂರ್ವಕಾಲದ ಜನರಲ್ಲಿ ಇರಲಿಲ್ಲ. ನಕುಲನು ಆ ವೇಳೆಯಲ್ಲಿ ತನ್ನ ಆಯಾಸವನ್ನೂ ಲಕ್ಷ್ಯಮಾಡಲಿಲ್ಲ. ಇತರರಂತೆ ತಾನೂ ಬಾಯಾರಿ ಬಸವಳಿದಿರುವಾಗ ತನ್ನನ್ನೇ ಏಕೆ ಕಳುಹಿಸಬೇಕೆಂದು ಗೊಣಗುಟ್ಟಲೂ ಇಲ್ಲ. ಅಣ್ಣನ ಅಪ್ಪಣೆಗೆ ಹಸಾದವೆಂದು ಹೇಳಿ, ಬಿಲ್ಲಂಬುಗಳನ್ನು ಕೈಯಲ್ಲಿ ಧರಿಸಿಹೊರಟನು. ಸ್ವಲ್ಪದೂರದಲ್ಲಿಯೇ ಪದ್ಮಗಂಧವು ಪರಿಮಳ ವಾಯುವನ್ನು ಬೀರುತ್ತಲಿದ್ದಿತು. ಅದರ ಸುವಾಸನೆಯಿಂದ ಇಲ್ಲಿಯೇ ಸರೋವರವಿರುವುದೆಂದು ತಿಳಿದು ಆ ಕೊಳವನ್ನು ಹುಡುಕಿಕೊಂಡು ಹೋದನು. ಸಮೀಪದಲ್ಲಿಯೇ ವಿಸ್ತಾರವಾದ ಕೊಳ. ಅದರ ನೀರೋ ಅತಿ ನಿರ್ಮಲವಾಗಿತ್ತು. ಬಹು ಸಂತೋಷಪಟ್ಟು ಅಣ್ಣಯ್ಯನು ನನ್ನನ್ನು ಕಳುಹಿಸಿದುದೇ ಲೇಸಾಯಿತು. ಮೊದಲು ನಾನು ನೀರು ಕುಡಿದು ದಣಿವಾರಿಸಿಕೊಂಡು ಅವರಿಗೆಲ್ಲಾ ತೆಗೆದುಕೊಂಡು ಹೋಗಿ ಕೊಡುವೆನು ಎಂದು ಯೋಚಿಸಿ ಆ ನಕುಲನು ಆ ಕೊಳದೊಳಕ್ಕೆ ಇಳಿದನು. ಮನಸ್ಸಿನಲ್ಲಿ ಕಪಟವಿಟ್ಟುಕೊಂಡು ಹೊರಗೆ ಮೃದುವಾಕ್ಯಗಳನ್ನು ನುಡಿಯುವ ದುರ್ಜನನಂತೆ ಒಳಗೆ ವಿಷೋದಕವನ್ನು ತುಂಬಿಕೊಂಡು, ಹೊರಗೆ ಬಹು ನಿರ್ಮಲವಾಗಿ ಕಾಣಬರುತ್ತಿರುವ ಆ ಕೊಳದೊಳಗೆ ಇಳಿದು ಮೊಳಕಾಲುದ್ದ ನೀರಿ

ನಲ್ಲಿ ನಿಂತುಕೊಂಡು, ತನ್ನ ಕೈಕಾಲು ಮುಖಗಳನ್ನು ತೊಳೆದುಕೊಂಡನು. ಬಳಿಕ ತಾನು ನೀರು ಕುಡಿಯಲಿಕ್ಕೆ ಬೊಗಸೆಯಲ್ಲಿ ನೀರು ತುಂಬಿ ಮೇಲಕ್ಕೆತ್ತಲು ಆಕಾಶದಲ್ಲಿ ಯಮನು ಯಕ್ಷರೂಪದಿಂದ ಕಾಣಿಸಿಕೊಂಡು "ಎಲೈ ಮಾದ್ರೇಯನೇ! ಈ ನೀರು ಕುಡಿಯಬೇಡ. ಸ್ವಲ್ಪ ತಾಳು. ನಿನ್ನ ಕೂಡ ಕೆಲವು ಮಾತನಾಡಬೇಕಾಗಿದೆ. ಅವುಗಳನ್ನು ಕೇಳಿದ ಬಳಿಕ ನೀನು ನೀರು ಕುಡಿಯಬಹುದು. ಆತುರಪಡಬೇಡ" ಎಂದು ಕೂಗಿ ಹೇಳಿದನು.

ನಕುಲನಿಗೆ ಬಾಯಾರಿಕೆ ಹೆಚ್ಚಿ ಹೋಗಿದೆ, ತುಟಿ ಒಣಗಿತು. ಮಾತಾಡಲಿಕ್ಕೆ ಬಾರದು. ಸದ್ಯದಲ್ಲಿ ನೀರು ಕುಡಿದಮೇಲಲ್ಲವೇ ಇತರ ಮಾತುಗಳು! ಎಂದು ತಿಳಿದು, ಕೂಡಲೇ ನೀರು ಕುಡಿದುಬಿಟ್ಟನು. ಅಣ್ಣಂದಿರಿಗೆ ಪದ್ಮಪತ್ರದಲ್ಲಿ ನೀರು ತುಂಬಿಕೊಂಡು ನೀರಿಂದ ಮೇಲಕ್ಕೆ ಅಡಿಯಿಟ್ಟನು. ವಿಷವು ದೇಹದಲ್ಲಿ ವ್ಯಾಪಿಸಿ ಧೊಪ್ಪನೆ ನೆಲದಲ್ಲಿ ಬಿದ್ದು ಒರಗಿದನು. ಅತ್ತ ಯುಧಿಷ್ಠಿರನು ಸಹದೇವನನ್ನು ನೋಡಿ "ತಮ್ಮಾ! ನಕುಲನು ಹೋಗಿ ಬಹಳ ಹೊತ್ತಾಯಿತು. ಅವನಿನ್ನೂ ಬರಲಿಲ್ಲ. ಎಲ್ಲಿಗೆ ಹೋದನೋ? ಏನಾಗಿರುವನೋ ನೋಡಿ ಬಾ. ನೀರು ಕುಡಿಯದಿದ್ದರೆ ಈಗಲೇ ನಮ್ಮ ಪ್ರಾಣಗಳು ಹೋಗಿಬಿಡುವುವು. ಬೇಗ ಹೋಗೆಂದು ಕಳುಹಿದನು. ಕೂಡಲೇ ಆ ಸಹದೇವನು ವಿಷಸರೋವರಕ್ಕೆ ಹೋಗಿ ನೀರು ಕುಡಿಯಬೇಕೆಂದು ಬೊಗಸೆಯಲ್ಲಿ ತುಂಬಿ ಮೇಲೆಕ್ಕೆತ್ತಲು ಆಕಾಶವಲ್ಲಿ ಯಕ್ಷನು "ಸಹದೇವಾ! ನನ್ನ ಮಾತಿಗೆ ಪ್ರತ್ಯುತ್ತರವನ್ನು ಕೊಟ್ಟು ನೀರು ಕುಡಿ. ನಿನ್ನ ತಮ್ಮನು ನನ್ನ ನುಡಿಯನ್ನು ಕೇಳದೆ ನೀರು ಕುಡಿದು ಒರಗಿದನು. ನೀನೂ ಹಾಗೆ ಸಾಯಲಪೇಕ್ಷಿಸುವೆಯಾ? ಸ್ವಲ್ಪ ಸೈರಿಸು." ಎಂದನು. ಸಹದೇವನು ಆ ಮಾತನ್ನು ಕೇಳಿದರೂ, ದುಸ್ಸಹವಾದ ನೀರಡಿಕೆಯಿಂದ ನೀರನ್ನು ಕುಡಿದುಬಿಟ್ಟು ಒಡನೆಯೇ ಮೈಮರೆತನು. ಅತ್ತ ಯುಧಿಷ್ಠಿರನು "ತಮ್ಮಂದಿರಿಬ್ಬರೂ ಬಹಳ ಹೊತ್ತಾದರೂ ಬಂದಿಲ್ಲ. ಏನಾಗಿರುವರೋ?" ಎಂಬ ಚಿಂತೆಯಿಂದ ಮರುಗಿ ಅರ್ಜುನನನ್ನು ನೋಡಿ "ತಮ್ಮಾ! ಯಮಳರೂ ನೀರು ತರಲಿಕ್ಕೆ ಹೋದವರು ಇನ್ನೂ ಬಂದಿಲ್ಲ. ನೀನು ಬೇಗ

ಹೋಗಿ ನೋಡಿ, ನೀರನ್ನು ತೆಗೆದುಕೊಂಡು ಬಾ  ಬಾಯಾರಿಕೆ ಬಹಳ ವಾಗಿದೆ '' ಎಂದನು. ಕೂಡಲೇ ಅರ್ಜುನನು ಕೊಳವನ್ನು ಹುಡುಕಿಕೊಂಡು ಹೋಗಿ, ಅದರ ದಡದಲ್ಲಿ ಪ್ರಜ್ಞೆತಪ್ಪಿ ಬಿದ್ದಿರುವ ತಮ್ಮಂದಿರನ್ನು ನೋಡಿ, ನೀರು ಕುಡಿದ ಮೇಲೆ ಇವರ ಸ್ಥಿತಿಯನ್ನು ವಿಚಾರಿಸುವೆನೆಂದು ಸರೋವರದಲ್ಲಿ ಇಳಿದು ಕೈಕಾಲು ಮುಖಗಳನ್ನು ತೊಳೆದುಕೊಂಡು ನೀರು ಕುಡಿಯಬೇಕೆಂದು ಬೊಗಸೆಯಲ್ಲಿ ತುಂಬಿ ಮೇಲಕ್ಕೆತ್ತಿದನು. ಆಗ ಯಕ್ಷನು "ಅಯ್ಯಾ ವಿಜಯನೇ, ಇತ್ತ ಕೇಳು. ನನ್ನ ಮಾತಿಗೆ ಉತ್ತರ ಕೊಟ್ಟು ನೀನು ನೀರನ್ನು ಕುಡಿ. ನಿನ್ನ ತಮ್ಮಂದಿರು ಬಿದ್ದಿರುವುದನ್ನು ಕಂಡೆಯಾ ! ಇವರು ನನ್ನ ಮಾತು ಕೇಳದೆ ನೀರು ಕುಡಿದು ಮಡಿದರು. ನೀನು ಹಾಗೆ ಆಗಬೇಡ. ಸ್ವಲ್ಪ ಸೈರಿಸು '' ಎಂದನು. ಅರ್ಜುನನು ಆ ಮಾತನ್ನು ಗಮನಿಸದೆ ನೀರು ಕುಡಿದು ಮಾದ್ರೇಯರಂತೆ ತಾನೂ ಮೈಮರೆತು ಮಲಗಿದನು. ಸ್ವಲ್ಪ ಹೊತ್ತಿನ ಮೇಲೆ ಯುಧಿಷ್ಠಿರನು ಭೀಮನನ್ನು ನೋಡಿ " ತಮ್ಮಯ್ಯಾ ! ಅರ್ಜುನನೂ ಬಂದಿಲ್ಲ. ತಮ್ಮಂದಿರೇನಾಗಿರುವರೋ ಮನಸ್ಸಿಗೆ ತುಂಬ ಕಳವಳವುಂಟಾಗಿದೆ. ನೀನು ತಡೆಮಾಡದೆ ಹೋಗಿ ನೋಡಿ ಬಾ '' ಎಂದು ಕಳುಹಿದನು. ಭೀಮಸೇನನು ಹೋಗಿ, ಅರ್ಜುನನಂತೆಯೇ ತಾನೂ ಆ ವಿಷೋದಕವನ್ನು ಕುಡಿದು ಮೂರ್ಛೆಗೊಂಡು ಒರಗಿದನು.

" ಹೊತ್ತು ಬಹಳವಾಯಿತು ; ಬಾಯಾರಿಕೆ ಹೆಚ್ಚುತ್ತಲಿದೆ ; ತಮ್ಮಂದಿರಲ್ಲಿ ಒಬ್ಬರಾದರೂ ಹಿಂದಿರುಗಿ ಬರಲಿಲ್ಲ ! ಕಾರಣವೇ ತಿಳಿಯದಲ್ಲಾ '' ? ಎಂದು ಚಿಂತಾಕ್ರಾಂತನಾಗಿ ಯುಧಿಷ್ಠಿರನು ತಾನೇ ಅವರನ್ನು ಹುಡಿಕಿಕೊಂಡು ಹೊರಟನು. ಸರೋವರವು ಸಿಕ್ಕಿತು. ಅದರ ದಡದದಲ್ಲಿ ಮೂವರು ತಮ್ಮಂದಿರೂ ಮೈಮರೆತು ಬಿದ್ದಿದ್ದರು. ಅವರ ಉಸುರುಗಳನ್ನು ಪರೀಕ್ಷಿಸಿ ನೋಡಿ ' ಓಹೋ ! ಪ್ರಮಾದವಾಯಿತು. ಉಸುರೇ ಆಡುವುದಿಲ್ಲ. ಇವರಿಗೆ ಶಸ್ತ್ರದ ಗಾಯವೂ ಇಲ್ಲ, ಹೀಗೆ ಆಕಸ್ಮಿತ ಮರಣಕ್ಕೆ ಕಾರಣವೇ ತಿಳಿಯದು ಇದೇನು ವಿಪತ್ತು ಬಂತು ! ಕೆಟ್ಟೆನಲ್ಲಾ ! ಯಾರು ಇವರನ್ನು ಕೊಂದರೋ ? ಚಂದ್ರವಂಶಕ್ಕೆ ಇಂದಿಗೆ ಕಡೆಗಾಲವು ಬಂತೆ ? ಕೌರವರ ಹೊಟ್ಟೆಯು ತಣ್ಣಗಾಯಿತೆ ? ಹಾ ಪರ

ಮೇಶ್ವರಾ ! ಶ್ರೀ ಕೃಷ್ಣಾ ! ಏಕೆ ಇಂತಹ ಸಾವನ್ನಿವರಿಗೆ ತಂದಿಟ್ಟೆ. ನಿನಗೆ ಕರುಣೆಯೇ ಇಲ್ಲದೆ ಹೋಯಿತೆ ? ನನ್ನನ್ನೂ ಇವರ ಜತೆಯಲ್ಲಿ ಕಳುಹಿ ಬಿಡು " ಎಂದು ಹಲವು ವಿಧವಾಗಿ ಪ್ರಲಾಪಿಸುತ್ತ, ಧಗೆಯಿಂದ ಬಾಯಿ ಒಣಗುತ್ತಿರಲು ಮೊದಲು ನೀರು ಕುಡಿದು, ಬಳಿಕ ಮರಣ ಕಾರಣವನ್ನು ವಿಚಾರಮಾಡುವೆನೆಂದು ಯೋಚಿಸಿ ಸರೋವರದಲ್ಲಿಳಿದು, ನೀರನ್ನು ಮೊಗೆದನು ಆಗ ಆಕಾಶವಾಣಿಯು " ಎಲೈ ಧರ್ಮಪುತ್ರನೇ, ನೀರು ಕುಡಿಯಬೇಡ. ಸ್ವಲ್ಪ ಸೈರಿಸು. ನಿನ್ನ ತಮ್ಮಂದಿರು ನನ್ನ ಮಾತಿಗೆ ಉತ್ತರ ಕೊಡದೆ ಜಲಪಾನ ಮಾಡಿ ಮಡಿದರು. ನೀನೂ ಹಾಗೆ ಆಗಬೇಡ " ಎಂದಿತು. ಅದನ್ನು ಕೇಳಿ ಆ ರಾಯನು ನೀರನ್ನು ಚೆಲ್ಲಿಬಿಟ್ಟು ಆಕಾಶದಲ್ಲಿ ಕಿವಿಗೊಟ್ಟು ಕೇಳಿ ಇಂತೆಂದನು.

ಯುಧಿ:—ಅಯ್ಯಾ ! ನೀನು ಯಾರು ? ರಾಕ್ಷಸನೋ, ದೇವತೆಯೋ, ಯಕ್ಷನೋ, ಗಂಧರ್ವನೋ ಇಲ್ಲಿ ಏಕೆ ಬಂದಿರುವೆ ?

ಯಕ್ಷ:—ರಾಯನೇ ನಾನು ಯಕ್ಷನು. ಈ ಸರೋವರವು ನನ್ನದು. ನಿನ್ನ ತಮ್ಮಂದಿರ ಪ್ರಾಣಗಳನ್ನು ಸೆಳೆದವನೂ ನಾನೇ ನನ್ನ ಮಾತಿಗೆ ಉತ್ತರ ಕೊಟ್ಟು ನೀರು ಕುಡಿಯಿರೆಂದು ನಿನಗೆ ಹೇಳಿದಂತೆಯೇ ಇವರಿಗೂ ಹೇಳಿದೆನು. ಇವರು ನನ್ನ ಮಾತನ್ನು ಲಕ್ಷ್ಯಮಾಡದೆ ನೀರು ಕುಡಿದು ಮಡಿದರು. ನೀನೂ ಇವರಂತೆ ದುಡುಕಬೇಡ.

ಯುಧಿ:—ಎಲೈ ಯಕ್ಷನೇ, ನಿನ್ನ ಪ್ರಶ್ನೆಗಳು ಯಾವುವು ? ನಿನಗೆ ಏನು ಉತ್ತರಬೇಕು ? ನನಗ ತಿಳಿದ ಮಟ್ಟಿಗೆ ಹೇಳುವೆನು ಕೇಳು.

ಯಕ್ಷ:—ನೀನು ಧರ್ಮಜ್ಞನೆಂದು ಹೆಸರುಗೊಂಡಿರುವೆ ? ನಾನು ಕೆಲವು ಪ್ರಶ್ನೆಗಳನ್ನು ಕೇಳುವೆನು. ಸಮುದ್ರಕ್ಕೆ ಸಮವಾದ ಕೊಳವು ಯಾವುದು ? ಲೋಕಕ್ಕೆ ಹಿತವನ್ನುಂಟುಮಾಡುವವರು ಯಾರು? ಮನುಷ್ಯವರ್ಗಕ್ಕೆ ಮಾತೃಸ್ವರೂಪಿಣಿಯಾರು ? ಸೂರ್ಯನ ಕಾಂತಿಗೆ ಸರಿಯಾದುದು ಯಾವುದು ?

ಯುಧಿ:—ಕೇಳೈಯಾ, ಆಕಾಶವು ಸಮುದ್ರಕ್ಕೆ ಸಮವಾದ ಸರಸ್ಸು. ದೇವೇಂದ್ರನು ಈ ಲೋಕಕ್ಕೆ ಹಿತಕರನು. ಮನುಷ್ಯವರ್ಗಕ್ಕೆ

ಗೋವೇ ಮಾತೃಸ್ವರೂಪವು. ಸತ್ಯವೆಂಬುದೇ ಸೂರ್ಯಪ್ರಭೆಗೆ ಸಮವಾದುದೆಂದು ಧರ್ಮಜ್ಞರು ಹೇಳುವರು

ಯಕ್ಷ:—ಎಲೈ ಧರ್ಮಪುತ್ರನೇ, ಕ್ಷತ್ರಿಯನು ಯಾವನು ? ಬ್ರಾಹ್ಮಣರಲ್ಲಿ ಶ್ರೋತ್ರಿಯನು ಯಾರು ? ಸಜ್ಜನರಲ್ಲಿ ಮಹಾಪುರುಷನು ಯಾರು? ಧೀರನು ಯಾರು ? ದೇವಪ್ರಿಯನು ಯಾರು? ಕಠಿನನಾಗಿ ಕಷ್ಟಕ್ಕೆ ಆಶ್ರಯನಾದವನು ಯಾರು?

ಯುಧಿ:—ಯಾವನು ಧೈರ್ಯಶಾಲಿಯೋ ಅವನೇ ಕ್ಷತ್ರಿಯನು ವೇದಾರ್ಥವನ್ನು ತಿಳಿದವನೇ ಶ್ರೋತ್ರಿಯನು ಅಹಿಂಸಾಪರನೇ ಮಹಾತ್ಮನೆನಿಸುವನು. ಸಾಧುಜನಸೇವಕನೇ ಧೀರನೆನಿಸುವನು. ಪರೋಪಕಾರಿಯಾದವನೇ ಭಗವಂತನಿಗೆ ಇಷ್ಟವಾದವನು. ಪರರ ಗುಣಗಳನ್ನು ಸೈರಿಸದವನೇ ಕಠಿನನು ಮತ್ತು ಕಷ್ಟನೆನಿಸುವನು.

ಯಕ್ಷ:—ಲೋಕದಲ್ಲಿ ಯಾವನು ನಿಂದಾರ್ಹನು ? ಯಾವನು ವಂದ್ಯನು ? ಜೀವನ್ಮೃತನು ಯಾರು ? ದೇಶವು ಯಾವನಿಂದ ಕೆಡುವುದು ? ಯಜ್ಞವು ಹೇಗೆ ನಿಷ್ಫಲವಾಗುವುದು ?

ಯುಧಿ:—ಎಲೈ ಮಹಾತ್ಮನೇ ! ಪರನಿಂದೆ ಮಾಡುವವನೇ ನಿಂದ್ಯನೆನಿಸಿಕೊಳ್ಳುವನು. ಪರರಿಗೆ ಹಿತವನ್ನಾಚರಿಸುವವನೇ ವಂದ್ಯನು. ಚಾಡಿಮಾತು ಕೇಳಿ ನಡೆಯುವ ರಾಜನಿಂದ ರಾಜ್ಯವು ಹಾಳಾಗುವುದು. ಬಡವನೇ ಬದುಕಿದ್ದರೂ ಸತ್ತ ಹೆಣನೆನಿಸುವವನು. ದಕ್ಷಿಣೆಯು ಸಾಲದೆನಿಸಿಕೊಳ್ಳುವ ಯಾಗವೇ ನಿಷ್ಫಲವೆಂದು ತಿಳಿದಿದ್ದೇನೆ.

ಯಕ್ಷ:—ಯುಧಿಷ್ಠಿರನೇ, ನರಕಭಾಜನನು ಯಾರು ? ಜನಸಂಗದಲ್ಲಿ ಸೇರಿಸಲ್ಪಡದ ಬಾಹಿರನು ಯಾರು? ರಾಜರಲ್ಲಿ ಜೀವನ್ಮೃತನು ಯಾವನು ? ಹುಚ್ಚನು ಯಾರು ? ಮಾನಹೀನನು ಯಾರು ? ಇವುಗಳಿಗೆ ಉತ್ತರ ಕೊಟ್ಟು ನೀನು ನೀರನ್ನು ಕುಡಿ .

ಯುಧಿ:—ಎಲೈ ಯಕ್ಷರಾಜನೇ ! ಉಪಕಾರಿಗೆ ಅಪಕಾರ ಮಾಡುವ ಕೃತಘ್ನನೇ ನರಕಭಾಜನನು. ವಿದ್ಯಾಧಿಕ್ಯದಿಂದಲಾಗಲಿ, ಧನಮದದಿಂದಲಾಗಲಿ ಕಣ್ಣು ಕಾಣದೆ ಬೆರೆಯುವವನೇ ಬಾಹಿರನು. ಯ

ದ್ಧಕ್ಕೆ ನುಗ್ಗಿ ಅಧೈರ್ಯದಿಂದ ಹಿಂದಿರುಗಿ ಬರುವ ರಾಜನೇ ಜೀವ ನ್ಮೃತನು. ಗುರುವನ್ನು ತಿರಸ್ಕರಿಸುವವನು ಮರುಳನು. ಸ್ತ್ರೀಯು ರಲ್ಲಿ ವಿಶ್ವಾಸವಿಟ್ಟಿರುವವನೇ ಮಾನಹೀನನೆನಿಸುವನು.

ಈ ರೀತಿಯಲ್ಲಿ ಯುಧಿಷ್ಠಿರನು ಧರ್ಮತತ್ವವನ್ನು ಹೇಳಿ, ಯಕ್ಷನ ಮನಸ್ಸಿಗೆ ಸಮಾಧಾನ ಮಾಡುತ್ತಿದ್ದನು. ಕೌರವನು ಮಾಡಿಸಿದ ಮಾರಣಹೋಮದಲ್ಲಿ ಹುಟ್ಟಿದ ಭೂತವು ಪಾಂಡವರನ್ನು ಕೊಂದು ತಿನ್ನಬೇಕೆಂದು ಅಲ್ಲಿಗೆ ಬಂತು. ಧರ್ಮಸಾರವನ್ನು ಹೇಳುತ್ತಿದ್ದ ಯುಧಿಷ್ಠಿರನನ್ನು ಕಂಡು ಹೆದರಿ ಹಸ್ತಿನಾಪುರದ ಕಡೆಗೆ ಓಡಿಹೋಯಿತು.

ಯುಧಿಷ್ಠಿರನು ಹೇಳಿದ ಉತ್ತರಗಳು ಬಹು ಸಮಂಜಸವಾಗಿದ್ದುದರಿಂದ ಯಕ್ಷನ ಮನಸ್ಸಿಗೆ ಸಮಾಧಾನವಾಯಿತು. ಅವನು ಧರ್ಮಪುತ್ರನನ್ನು ನೋಡಿ "ಎಲೈ ರಾಜನೇ! ನಿನ್ನ ಧರ್ಮಜ್ಞತೆಗೆ ಮೆಚ್ಚಿದೆನು. ನಿನಗೆ ಬೇಕಾದುದನ್ನು ಬೇಡು ಸತ್ತಿರುವ ನಿನ್ನ ತಮ್ಮಂದಿರಲ್ಲಿ ಒಬ್ಬನನ್ನು ಬದುಕಿಸಿಕೊಡುವೆನು" ಎಂದನು. ಯುಧಿಷ್ಠಿರನು "ಯಕ್ಷನೇ! ನೀನು ಪ್ರಸನ್ನನಾದರೆ ಈ ನಕುಲನನ್ನು ಬದುಕಿಸು. ನಾನು ಕೃತಾರ್ಥನಾಗುವೆನು" ಎನ್ನಲು ಕೂಡಲೇ ಅವನು ನಕುಲನಿಗೆ ಜೀವವನ್ನಿತ್ತು, ಮತ್ತೊಬ್ಬನನ್ನು ಬದುಕಿಸುವೆನು ಬೇಡು ಎಂದು ಹೇಳಿದನು. ಅದಕ್ಕೆ ಯುಧಿಷ್ಠಿರನು ಈಗ ಸಹದೇವನನ್ನು ಬದುಕಿಸಿಕೊಡೆಂದು ಪ್ರಾರ್ಥಿಸಲು, ಯಕ್ಷನು "ಎಲೈ ಧರ್ಮರಾಯನೇ, ಭೀಮಾರ್ಜುನರು ನಿನ್ನ ಸಾಕ್ಷಾತ್ಸಹೋದರರು. ನೀನು ಅವರಿಗೆ ಅತಿಹಿತನು. ಅವರನ್ನು ಬದುಕಿಸಿಕೊಳ್ಳದೆ ಸವತಿ ತಾಯಿಯ ಮಕ್ಕಳನ್ನು ಬದುಕಿಸಬೇಕೆಂದು ಬೇಡುತ್ತಿರುವೆ. ನೀನು ಎಂತಹ ಹುಚ್ಚನು?" ಎಂದನು. ಯುಧಿಷ್ಠಿರನು "ಎಲೈ ಖೇಚರಪತಿಯೇ! ನಮ್ಮ ತಂದೆ ಪಾಂಡುರಾಯನು ಸತ್ತಮೇಲೆ ಚಿಕ್ಕಮ್ಮನಾದ ಮಾದ್ರೀದೇವಿಯು ನನ್ನನ್ನು ಕರೆದು ಈ ಮಕ್ಕಳ ಹಿತಾಹಿತಗಳು ನಿನಗೆ ಸೇರಿದುವು. ಇವರಲ್ಲಿ ನೀನು ಭೇದಭಾವವನ್ನಿಡದೆ ರಕ್ಷಿಸುತ್ತಿರಬೇಕು" ಎಂದು ಆಜ್ಞಾಪಿಸಿ ಪ್ರಾಣಗಳನ್ನು ಬಿಟ್ಟಳು. ಆಕೆಯ ಅಪ್ಪಣೆಯನ್ನು ನಾನು ಹೇಗೆ ಮರೆಯಲಿ? ಎಂದನು. ಯಕ್ಷನು ಅದನ್ನು ಕೇಳಿ ಯುಧಿಷ್ಠಿರನ ಕ್ಷಮಾಗುಣಕ್ಕೂ, ಪರಹಿತಚಿಂತನೆಗೂ ಮೆಚ್ಚಿ.

ಸಹದೇವನನ್ನು ಬದುಕಿಸಿದುದಲ್ಲದೆ ಮಡಿದಿದ್ದ ಭೀಮಾರ್ಜುನರಿಗೂ ಪ್ರಾ
ಣಗಳನ್ನು ಕೊಟ್ಟು, ತನ್ನ ನಿಜರೂಪವಾದ ಯಮಧರ್ಮರಾಯನಾಗಿ ನಿಂ
ತು, ಯುಧಿಷ್ಠಿರನನ್ನು ಬಾಚಿತಬ್ಬಿಕೊಂಡು, “ ಮಗುವೇ ! ನಿಮಗೆ
ವನವಾಸದ ಅವಧಿ ಹನ್ನೆರಡು ವರುಷಗಳೂ ಕಳೆದುಹೋದುವು. ಇನ್ನು
ಇದನ್ನು ಬಿಟ್ಟು ಅಜ್ಞಾತವಾಸಕ್ಕೆ ತೊಡಗಿರಿ. ನಿಮ್ಮಗಳನ್ನೆಲ್ಲಾ ಕೊಲ್ಲ
ಬೇಕೆಂದು ಕೌರವನು ಮಾರಣಯಜ್ಞವನ್ನು ಮಾಡಿಸಿದನು ಅದರಲ್ಲಿ
ಒಂದು ಮಹಾಭೂತವು ಹುಟ್ಟಿ, ನಿಮ್ಮನ್ನು ಹಿಡಿದು ತಿನ್ನಬೇಕೆಂದು
ಬಂತು. ಭಕ್ತಬಂಧುವಾದ ಶ್ರೀ ಕೃಷ್ಣನು ಈ ವಾರ್ತೆಯನ್ನು ಗ್ರಹಿಸಿ,
ಈ ವಿಷಸರೋವರದಲ್ಲಿ ಇದ್ದ ನಿನ್ನ ತಮ್ಮಂದಿರು ಸಾಯುವಂತೆ ಮಾಡ
ಬೇಕೆಂದು ನನಗೆ ನೇಮಿಸಿ, ತಾನು ಮೃಗರೂಪದಿಂದ ಬ್ರಾಹ್ಮಣನ ಅರಣಿ
ಯನ್ನು ಹೊತ್ತುಕೊಂಡು ನಿಮ್ಮನ್ನು ಇಲ್ಲಿಯ ತನಕ ಬರಮಾಡಿ ಅಂತ
ರ್ಧಾನನಾದನು ಆ ಭೂತವು ಈಗ ತಾನೇ ನಿಮ್ಮನ್ನು ತಿನ್ನಬೇಕೆಂದು
ಬಂದಿತ್ತು. ಈ ನಾಲ್ವರೂ ವಿಷೋದಕವನ್ನು ಕುಡಿದು ಸತ್ತು ಬಿದ್ದಿ
ದ್ದುದರಿಂದಲೂ ಧರ್ಮಪ್ರಸಂಗದಲ್ಲಿರುವ ನಿನ್ನನ್ನು ಮುಟ್ಟಲು ಧೈರ್ಯವಿಲ್ಲ
ದ್ದರಿಂದಲೂ ಹಿಂದಿರುಗಿ ಹೋಗಿ, ಪೂರ್ಣಾಹುತಿ ಕೊಡುವ ವೇಳೆಯಲ್ಲಿ
ತನಗೆ ತಕ್ಕ ಆಹಾರವು ಸಿಕ್ಕಲಿಲ್ಲವೆಂದು ಆ ಯಾಗ ಮಾಡಿಸಿದ ಕನಕನನ್ನೇ
ಕೊಂದು ತಿಂದು ಯಜ್ಞೇಶ್ವರನಲ್ಲಿ ಅಡಗಿಕೊಂಡಿತು. ನಿಮಗೆ ಸಂಭವಿ
ಸಿದ್ದ ಮಹದ್ವಿಪತ್ತು ಶ್ರೀ ಕೃಷ್ಣಾನುಗ್ರಹದಿಂದ ಪರಿಹರವಾಯಿತು ”
ಎಂದು ಹೇಳಿದನು. ಯುಧಿಷ್ಠಿರನು ಈ ಮಾತು ಕೇಳಿ ಬಹು ಸಂತೋ
ಷಗೊಂಡು “ ಆರ್ಯನೇ ! ತಮ್ಮ ಅನುಗ್ರಹದಿಂದಲೂ, ಶ್ರೀ ಕೃಷ್ಣನ
ಕೃಪಾಕಟಾಕ್ಷದಿಂದಲೂ ಈ ವನವಾಸಕಾಲದಲ್ಲಿ ನಮಗೆ ಬಂದಿದ್ದ ಕಷ್ಟ
ಗಳೆಲ್ಲವೂ ನಷ್ಟವಾದುವು. ಮುಂದೆ ನಮಗೆ ಏನು ಬುದ್ಧಿವಾದ ಹೇಳು
ವಿರೋ ಹಾಗೆ ನಡೆದುಕೊಳ್ಳುವೆನು ” ಎಂದು ಕೈಮುಗಿದು ಬೇಡಿಕೊಂ
ಡನು. ಆಗಲಾಯಮನು “ ಮಗನೇ ನೀವು ಅಜ್ಞಾತವಾಸಕ್ಕೆ ಪ್ರಾರಂಭಿ
ಸಿರಿ. ನಿಮಗೆ ಅನುಕೂಲವಾಗಿ ಬಯಸಿದ ರೂಪಗಳನ್ನು ಪಡೆಯುವಂತೆ
ಅನುಗ್ರಹಿಸಿರುವೆನು. ನೀವು ಪಾಂಡವರೆಂದು ಒಂದು ವರುಷದ ತನಕ
ಯಾವನಿಗೂ ತಿಳಿಯದೆ ಇರಲಿ. ಈ ಅವಧಿಯು ಕಳೆದ ಬಳಿಕ ನೀವು

ರಾಜ್ಯಾಧಿಪತ್ಯವನ್ನು ಪಡೆದು ಸುಖಪಡುವಿರಿ ” ಎಂದು ನಿಯಮಿಸಿ, ಕಣ್ಮರೆಯಾದನು.

ಭೀಮಾದಿ ನಾಲ್ವರು ಸಹೋದರರೂ ಜೀವಿಸಿ ಎದ್ದು ಕುಳಿತರು. ಆಗ ಯುಧಿಷ್ಠಿರನು ನಡೆದ ಸಮಾಚಾರವನ್ನೆಲ್ಲಾ ಅವರಿಗೆ ತಿಳಿಸಿ, ಅರಣಿಯುನ್ನು ತೆಗೆದುಕೊಂಡು ಅವರೊಡನೆ ಹೊರಟು, ತನ್ನ ಆಶ್ರಮಕ್ಕೆ ಬಂದು ಬ್ರಾಹ್ಮಣನಿಗೆ ಅವನ ಅರಣಿಯುನ್ನೊಪ್ಪಿಸಿ, ಧೌಮ್ಯಾದಿ ಮುನಿಗಳಿಗೆ ವಿಷಸರಸಿಯ ವೃತ್ತಾಂತವನ್ನು ತಿಳಿಸಿ, ಅವರೆಲ್ಲರನ್ನೂ ನೋಡಿ “ ಮಹಾಶಯರೇ, ಭಗವದನುಗ್ರಹದಿಂದ ಅರಣ್ಯವಾಸದ ಹನ್ನೆರಡು ವರುಷಗಳನ್ನೂ ನಿಮ್ಮ ಸಹವಾಸದಿಂದ ಸುಖವಾಗಿ ಕಳೆದವು. ಇನ್ನು ಅಜ್ಞಾತವಾಸದ ವರುಷದಲ್ಲಿ ನಾವು ಇಂತವರೆಂದು ಯಾರಿಗೂ ಗೋಚರವಾಗಬಾರದಷ್ಟೆ ! ಈ ಅವಧಿ ತೀರುವ ತನಕ ನೀವು ಎಲ್ಲಿಗಾದರೂ ಹೋಗಿ ಕಾಲಕಳೆಯುತ್ತಿರಬಹುದು. ತರುವಾಯ ನಿಮ್ಮನ್ನು ಕೈಬಿಡಲಾರೆನು. ನಮಗೆ ಅಪ್ಪಣೆ ಕೊಡಿರಿ ” ಎಂದು ಕೈಜೋಡಿಸಿ ಬೇಡಿಕೊಂಡು ಕಳುಹಿ, ತಾವೈವರೂ ದ್ರೌಪದೀಸಹಿತರಾಗಿ ಶ್ರೀ ಕೃಷ್ಣನನ್ನು ಧ್ಯಾನಿಸುತ್ತಾ, ಅಜ್ಞಾತವಾಸಕ್ಕೆ ತಕ್ಕ ಮಾರ್ಗವನ್ನು ಯೋಚಿಸುತ್ತಿದ್ದರು.



—: ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ :—

# ಪ್ರಕಟನೆ.

—೦—

ಮಹಾಭಾರತ ಸಂಗ್ರಹವು ಸುಲಭ ಶೈಲಿಯಲ್ಲಿ ಹೊಸದಾಗಿ ದಿರಿಯಿಂದ
ಪ್ಪಡುತ್ತಿದೆ. ಅಲ್ಲಲ್ಲಿ ಸಂಭಾಷಣೆಗಳೂ, ಕಾಲೋಚಿತವಾದ ನೀತಿಗಳೂ
ಭಾಷೆಗಳಲ್ಲಿ ಬರೆಯಲ್ಪಟ್ಟಿರುವ ವಿಶೇಷ ವಿಷಯಗಳೂ ಈ ಗ್ರಂಥದಲ್ಲಿ
ಕನ್ನಡ ಪರೀಕ್ಷೆಗಳಿಗೆ ವಿರಾಟ ಸಭಾಪರ್ವಗಳು ಪಾಠ್ಯಪುಸ್ತಕವಾಗಿ ನಿಯ
ಟ್ಟಿದ್ದುವು. ವಾಚಕಮಹಾಶಯರು ಒಂದೊಂದು ಪ್ರತಿಯನ್ನು ಸ
ಓದಿ ಗುಣಗ್ರಹಣ ಮಾಡಬಹುದಾಗಿ ಪ್ರಾರ್ಥನೆ.

## ಇದುವರೆಗೆ ಮುದ್ರಿತವಾಗಿರುವ ಪರ್ವಗಳು.

೧ ಆದಿಪರ್ವ ಬೆಲೆ ರೂ. ೩—೦—೦.
೨ ಸಭಾಪರ್ವ ೨—೪—೦
೩ ಅರಣ್ಯಪರ್ವ ೧—೮—೦
೪ ವಿರಾಟಪರ್ವ ೧—೮—೦
೫ ಉದ್ಯೋಗಪರ್ವ ೧—೧೨—೦

## ಮುದ್ರಣವಾಗುತ್ತಿರುವ ಭಾಗಗಳು.

೧ ಭೀಷ್ಮದ್ರೋಣಪರ್ವಗಳು.
೨ ಕರ್ಣಶಲ್ಯ ಸೌಪ್ತಿಕ ಪರ್ವಗಳು
೩ ಉತ್ತರಾಷ್ಟಪರ್ವಗಳು
೪ ಭಾರತದ ಉಪಕಥೆಗಳು
೫ ಭಾರತ ಧರ್ಮ ಮತ್ತು ನೀತಿಬೋಧೆಗಳು

ಕೆ. ರಾಮಸ್ವಾಮಿಯ್ಯಂಗಾರ್
ಹುಲಿಯೂರುದುರ್ಗ ಪೋಸ್ಟು, ತುಮ